


# ಅನಿಕೇತನ

ಕರ್ನಾಟಕ ಸಾಹಿತ್ಯ ಅಕಾಡೆಮಿ ತ್ರೈಮಾಸಿಕ

'ಗೋಡೆಗಳಿಗೆ ಇದನ್ನು ಹೇಳಿ' - ಜನಪದ ಕಥೆಗಳ ಕುರಿತ ಎ.ಕೆ.ರಾಮಾನುಜನ್ ಲೇಖನ

- 'ಕೆರೆಗೆ ಹಾರ' ದಲಿತ ಮೌಲ್ಯದ ಹೈಜಾಕೀಕರಣ
- ಶಿಗಾ ದೇವಾಲಯದ ಅರ್ಚಕ
- ಹರಿಹರನ ರಗಳೆಗಳು : ಸ್ತ್ರೀವಾದಿ ಓದಿನಲ್ಲಿ
- ಬುಡಬೆಳ್ಳಿ ನಡುಪಚ್ಚೆ ಗೊನೆ ಮುತ್ತು

# ಇತ್ತೀಚೆಗಿನ ಸಾಹಿತ್ಯ ಅಕಾಡೆಮಿಯ ಪ್ರಕಟಣೆಗಳು

## ಶತಮಾನದ ಸಂಕಲನಗಳು

**ಒಂದು ಸೆಟ್ಟಿನ ಮುಖಬೆಲೆ : ರೂ. ೧೫೫೦.೦೦**

ಶತಮಾನದ ಕಾವ್ಯ : ಸಂ : ಡಾ. ಎಚ್. ಎಸ್. ವೆಂಕಟೇಶಮೂರ್ತಿ - ೨೫೦.೦೦
ಶತಮಾನದ ಸಣ್ಣಕಥೆ : ಸಂ : ಬೊಳುವಾರು ಮಹಮದ್ ಕುಂಞ - ೨೦೦.೦೦
ಶತಮಾನದ ಸಾಹಿತ್ಯ ವಿಮರ್ಶೆ :
ಸಂ : ಡಾ. ಎಚ್. ಎಸ್. ರಾಘವೇಂದ್ರರಾವ್ - ೩೭೫.೦೦
ಶತಮಾನದ ಸಂಶೋಧನೆ : ಸಂ : ಡಾ. ಎನ್. ಎಸ್. ತಾರಾನಾಥ್ - ೩೨೫.೦೦
ಶತಮಾನದ ಲಲಿತ ಪ್ರಬಂಧ : ಸಂ. ಡಾ. ಗುರುಲಿಂಗ ಕಾಪಸೆ - ೧೫೦.೦೦೦
ಶತಮಾನದ ಮಕ್ಕಳ ಸಾಹಿತ್ಯ : ಸಂ. ಎನ್. ಎಸ್. ರಘುನಾಥ -೩೦೦.೦೦

## ಸಾಲು ದೀಪಗಳು

**ಮುಖ ಬೆಲೆ : ರೂ. ೩೭೫**

ಸಂ : ಪ್ರೊ॥ ಜಿ. ಎಸ್. ಸಿದ್ಧಲಿಂಗಯ್ಯ / ಪ್ರೊ॥ ಎಂ. ಎಚ್. ಕೃಷ್ಣಯ್ಯ

## Essays on Modern Kannada Literature

**Rs. 200 / Dr. G. S. Amur**

★ ಕರ್ನಾಟಕ ಸಾಹಿತ್ಯ ಅಕಾಡೆಮಿಯು ತನ್ನ ಈವರೆಗಿನ ಎಲ್ಲ ಪ್ರಕಟಣೆಗಳ ಮೇಲೆ (ಸಾಲುದೀಪಗಳು ಮತ್ತು ಶತಮಾನದ ಸಂಕಲನಗಳನ್ನು ಹೊರತುಪಡಿಸಿ) ಶೇ. ೫೦ ವಿಶೇಷ ರಿಯಾಯಿತಿ ನೀಡಿ ಮಾರಾಟ ಮಾಡಲಿದೆ. ಈ ವಿಶೇಷ ರಿಯಾಯಿತಿ ಡಿಸೆಂಬರ್ ೨೦೦೨ರವರೆಗೆ ಮಾತ್ರ.

★ (ಸಾಲುದೀಪಗಳು ಮತ್ತು ಶತಮಾನದ ಸಂಕಲನಗಳ ಬಿಡಿ ಪ್ರತಿಗೆ ಶೇ. ೨೦ ಹಾಗೂ ಸೆಟ್ ಕೊಂಡರೆ ಶೇ. ೩೩ ರಿಯಾಯಿತಿ ಎಂದಿನಂತೆ ಇರುತ್ತದೆ.)

-ರಿಜಿಸ್ಟ್ರಾರ್
ಕರ್ನಾಟಕ ಸಾಹಿತ್ಯ ಅಕಾಡೆಮಿ

# ಅನಿಕೇತನ

ಕರ್ನಾಟಕ ಸಾಹಿತ್ಯ ಅಕಾಡೆಮಿ ತ್ರೈಮಾಸಿಕ

ಏಪ್ರಿಲ್ - ಜೂನ್, ೨೦೦೨

*ಸಂಪಾದಕರು*

ಪ್ರೊ|| ವಿ. ಚಂದ್ರಶೇಖರ ನಂಗಲಿ

ಲಕ್ಷ್ಮೀಪತಿ ಕೋಲಾರ



ಕರ್ನಾಟಕ ಸಾಹಿತ್ಯ ಅಕಾಡೆಮಿ

ಬೆಂಗಳೂರು

ANIKETHANA : A Literary Journal (Quarterly)
Edited by : **Prof. V. Chandrashekhara Nangali**
**Lakshmipathi Kolara**
Published by : Registrar, Karnataka Sahithya Academy
Kannada Bhavana, J.C. Road, Bangalore - 2

Pages : xii+128
Registration No. 45646/88

ಸಂಪುಟ : ೧೩
ಸಂಚಿಕೆ : ೪

ಪ್ರತಿಗಳು : ೧೨೦೦

ಪ್ರಧಾನ ಸಂಪಾದಕರು
**ಡಾ|| ಗುರುಲಿಂಗ ಕಾಪಸೆ**
ಅಧ್ಯಕ್ಷರು
ಕರ್ನಾಟಕ ಸಾಹಿತ್ಯ ಅಕಾಡೆಮಿ
ಬೆಂಗಳೂರು - ೫೬೦ ೦೦೨

ಪ್ರಕಾಶಕರು
**ವಿ. ಎನ್. ಮಲ್ಲಿಕಾರ್ಜುನ ಸ್ವಾಮಿ**
ರಿಜಿಸ್ಟ್ರಾರ್, ಕರ್ನಾಟಕ ಸಾಹಿತ್ಯ ಅಕಾಡೆಮಿ
ಕನ್ನಡ ಭವನ, ಜೆ. ಸಿ. ರಸ್ತೆ
ಬೆಂಗಳೂರು - ೫೬೦ ೦೦೨

ಬಿಡಿ ಪ್ರತಿ : ರೂ. ೧೫/-
ವಾರ್ಷಿಕ ಚಂದಾ : ರೂ ೫೦/-
ಆಜೀವ ಚಂದಾ : ರೂ. ೨೦೦/-

ಮುಖಪುಟ ಕಲೆ : ಸಯ್ಯದ್ ಬೇಗಂ
ಹಿಂಬದಿ ಚಿತ್ರಕಲೆ : ಎಸ್. ಆರ್. ಸ್ವಾಮಿ
ಕೃಪೆ : ಕರ್ನಾಟಕ ಲಲಿತಕಲಾ ಅಕಾಡೆಮಿ
ರಕ್ಷಾಪುಟ ವಿನ್ಯಾಸ : ಎಸ್. ಮಂಜುನಾಥ್

ಲಕ್ಷ್ಮಿ ಮುದ್ರಣಾಲಯ
LAKSHMI MUDRANALAYA
೧೧೭/೨, ೫ನೇ ಮುಖ್ಯರಸ್ತೆ, ಚಾಮರಾಜಪೇಟೆ
ಬೆಂಗಳೂರು - ೧೮, ✆ : ೬೬೧೩೧೨೩, ೬೬೧೮೭೫೨

# ಈ ನೆಲದ ಸಾಂಸ್ಕೃತಿಕ ಆತ್ಮ

ಜಾನಪದ ಜಗತ್ತನ್ನು ಅರಿಯಲಾದವರು ಈ ನೆಲದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಸತ್ಯಗಳನ್ನು ಅವುಗಳ ಮೂಲ ಸ್ವರೂಪದಲ್ಲಿ ಗ್ರಹಿಸಲು ಕೂಡ ಸಾಧ್ಯವಾಗುವುದಿಲ್ಲ. ಜಾನಪದ ಈ ನೆಲದ ಸಾಂಸ್ಕೃತಿಕ ಆತ್ಮ.

'ವೇದ ಸುಳ್ಳಾದರೂ ಗಾದೆ ಸುಳ್ಳಾಗದು' ಎಂಬುದು ಕೂಡ ಒಂದು ಗಾದೆಯೇ. ಗಾದೆಗಳು ಹುಟ್ಟುವುದು ಕೂಡ ಜೀವನಾನುಭವಗಳ ಒಡಲಲ್ಲಿಯೇ. ಜೀವನಾನುಭವಕ್ಕಿಂತಲೂ ಸಾಕ್ಷಾತ್ತು ಸತ್ಯವೆಂಬುದು ಬೇರೊಂದಿರಲಾರದು. ಜೀವನಾನುಭವಗಳನ್ನು ಪಡೆಯುವುದು ಕೂಡ ನಮ್ಮ ಈ ಭೌತಿಕ ಶರೀರದ ಐದು ಇಂದ್ರಿಯಗಳ ಮೂಲಕವೇ. ಕಣ್ಣು, ಕಿವಿ, ನಾಲಗೆ, ಮೂಗು ಮತ್ತು ಚರ್ಮಗಳ ಹೊರತಾಗಿ ಬೇರೊಂದು ಸಾಧನ ಈ ಲೋಕದ ಸತ್ಯಗಳನ್ನರಿಯಲು ನೆರವಾಗಬಲ್ಲ ನಿದರ್ಶನವನ್ನು ಇನ್ನೂವರೆಗೂ ನಾವು ಕಂಡದ್ದಿಲ್ಲ. ಈ ದೃಷ್ಟಿಯಿಂದ ಜಾನಪದದ ಅಸಲೀ ಸತ್ಯವೆಂಬುದು ಭೌತವಾದದ ಮೂಲ ತಿರುಳೇ ಆಗಿದೆ. ಐದು ಇಂದ್ರಿಯಗಳಿಗೂ ಹೊರತಾಗಿ ಆರನೇ ಇಂದ್ರಿಯದ ಮೂಲಕ ನಿಜವಾದ ಜ್ಞಾನಾರ್ಜನೆಯನ್ನು ಪಡೆದೆವೆಂದು ಹೇಳುವವರ ಅನುಭವ ಕೇವಲ ವೈಯಕ್ತಿಕ ಮಿತಿಯೊಳಗಿನದು. ಆಗ ಅದು ಇಂದ್ರಿಯ ಜನ್ಯ ಜ್ಞಾನವಲ್ಲ. ಇಂದ್ರಿಯಾತೀತವೂ, ನಿಗೂಢವೂ ಆದ 'ಅಂತರ್ದೃಷ್ಟಿ'ಯಿಂದ ಪ್ರಾಪ್ತವಾದುದೆಂದು ಅಮೂರ್ತ ಕಲ್ಪನೆಯೊಳಗೆ ಅಡಗಿ ಬಿಡುತ್ತಾರೆ. ಅಧ್ಯಾತ್ಮವಾದಿಗಳು ಅಂತರ್ದೃಷ್ಟಿಯ ಮೂಲಕ ಜ್ಞಾನ ಪಡೆದುದನ್ನು ಬೇರೆ ಯಾರೊಬ್ಬರೂ, ಎಂದಿಗೂ, ಎಂತಹುದೇ ಮಾನದಂಡದಿಂದ ಒರೆಗೆ ಹಚ್ಚಿ ಅವರ ಪಾಲಿನ ಸತ್ಯವನ್ನು ತಾವು ಕಾಣಲಾರರಾದ್ದರಿಂದ ಅಧ್ಯಾತ್ಮವಾದಿಗಳು 'ಅಂತರ್ದೃಷ್ಟಿ'ಯ ಮಾತನ್ನಾಡಿದ ನಂತರವೂ ಕ್ಷೇಮವಾಗಿರಬಲ್ಲರು. ಆದರೆ ಅದಕ್ಕೆ ತದ್ವಿರುದ್ಧವಾದುದು ಜೀವನದಿಂದ ಹುಟ್ಟಿದ ತತ್ವ. ಲೋಕಾಯತ ನೀತಿಯಿದು: 'ಪ್ರತ್ಯಕ್ಷ ಏವ ಪ್ರಮಾಣಂ ನ ಕಶ್ಚಿತ್ ಆಗಮಃ'. ಅಂದರೆ ಪ್ರತ್ಯಕ್ಷವೇ ಎಲ್ಲಾ ಜ್ಞಾನದ ಒರೆಗಲ್ಲು ಹೊರತು ಯಾವ ವೇದವೂ ಅಲ್ಲ. ಜಾನಪದದ ನೀತಿಯೂ ಇಷ್ಟೇ: ಪ್ರತ್ಯಕ್ಷ ಜೀವನಾನುಭವಗಳು ಜ್ಞಾನಪ್ರಾಪ್ತಿಯ ಸಾಧನೆಗಳೇ ಹೊರತು ವೇದಗಳು ಕೂಡ ಅಲ್ಲ. ಭೌತವಾದದ ಹಾಗೆಯೇ ಜಾನಪದವು ಕೂಡ ಸಮಾಜ ಹಾಗೂ ವಸ್ತುನಿಷ್ಠವಾದುದು. ಅದು ಅನುಭವವನ್ನೂ, ಅನುಭವದಿಂದ ಹುಟ್ಟುವ ನಿಷ್ಕರ್ಷೆಗಳನ್ನೂ ಜ್ಞಾನದ ಆಧಾರವಾಗಿ ಅವಲಂಬಿಸುತ್ತದೆ.

ಇನ್ನು ಜಾನಪದೀಯ ದೈವತಗಳ ಲೋಕ ಶಿಷ್ಟ ಜಗತ್ತಿನ ದೈವಗಳ ಹಾಗೆ

ವಿಶ್ವವ್ಯಾಪಕ ಮಾತ್ರವಲ್ಲ; ಅದು ಪ್ರಧಾನವಾಗಿ ಸ್ಥಳೀಕವಾದದ್ದು. ಸ್ಥಳೀಕ ನೆಲೆಯಿಂದ ವಿಶ್ವಾತ್ಮಕತೆಯನ್ನು ಅನುಸಂಧಾನಿಸುವಂತಹದ್ದು. ಜನಪದ ದೈವಗಳ ಲೋಕವೇ ಅತ್ಯಂತ ಕುತೂಹಲಕರವಾದುದು; ಸಾಂಸ್ಕೃತಿಕ ನೆಲೆಯದ್ದು; ಇಹವಾದೀ ಬದುಕಿನ ಅಸಲೀ ಸ್ವರೂಪದ್ದು; ಈ ನೆಲದ ಬದುಕಿಗೇ ನೇರ ಸಂಬಂಧಪಡುವಂತಹ ಆಚರಣಾಪ್ರಧಾನವಾದುದು. ಜಾನಪದೀಯ ದೈವಗಳ 'ಅಂತರ್ದೃಷ್ಟಿ' ಎಂಬುದು ಈ ಮಣ್ಣುಬಿಟ್ಟು ಕದಲದ ಸತ್ಯ. ಅವುಗಳ ಅಂತರ್ದೃಷ್ಟಿ ಎಷ್ಟು ನಿಗೂಢವಾದರೂ ಅಂತಿಮವಾಗಿ ಅದು 'ಭೌತವಸ್ತುಚ್ಛ ಮಾನಸ' ಮೂಲಕದ ವ್ಯಾಪಾರ. ಅದು ಜನಪದರಿಗೆ ಸಹಜವಾದ ಭಾವನಿಷ್ಠವಾದುದೇ ಹೊರತು ಸ್ಥಿತ ಪ್ರಜ್ಞೆಯದಲ್ಲ. ಮಾನಸವೆಂಬುದು ಕೂಡ ಅಂತಿಮವಾಗಿ ಪದಾರ್ಥ ಮೂಲದ ಮೆದುಳಿನ ವ್ಯಾಪಾರವೇ ಹೊರತು ಅಧ್ಯಾತ್ಮದ ಹಾಗೆ ಅಭೌತ ನೆಲೆಯದ್ದಲ್ಲ; ಅಮೂರ್ತದ್ದಲ್ಲ. ಜನಪದ ಸಂಸ್ಕೃತಿ ಎಂಬುದೇ ಅತ್ಯಂತ ಮೂರ್ತವಾದ ಪ್ರಪಂಚ.

ಜಾನಪದ ಈ ನೆಲದ ಬಹುದೊಡ್ಡ ತತ್ವ. ಅತ್ಯುನ್ನತ ತಿಳಿವಳಿಕೆ. ಜಾನಪದ ಸಂಸ್ಕೃತಿ ಪ್ರತಿಪಾದಿಸುವ ತತ್ವಕ್ಕೂ ಜನಪದರ ಬದುಕಿಗೂ ನಿಕಟ ಹಾಗೂ ನೇರ ಸಂಬಂಧ. ಜನರ ಜೀವನದೊಂದಿಗೆ ಹಾಗೂ ದಿನನಿತ್ಯದ ವ್ಯವಹಾರಗಳೊಂದಿಗೆ ಯಾವುದೇ ಸಂಬಂಧವಿಲ್ಲದಂತೆ ಮೋಡಗಳಲ್ಲಿ ವಿಹರಿಸುವ ಮೋಹಕ ಕಲ್ಪನೆಗಳು ನಿಜವಾದ ತತ್ವಶಾಸ್ತ್ರವಾಗಲಾರದು. ಸತ್ಯಶೋಧನೆಯ ನಿವೃತ್ತಿ ಹಾಗೂ ಬೌದ್ಧಿಕ ಲಾಲಸೆಯ ಒಣ ಜಿಜ್ಞಾಸೆಗಳು ಗಟ್ಟಿ ತತ್ವಚರ್ಚೆಗಳಾಗಲಾರವು. ಯಾವ ತತ್ವಜ್ಞಾನವು ಕನಿಷ್ಠಾತಿಕನಿಷ್ಠ ಮನುಷ್ಯನ ಸುಖದುಃಖಗಳಲ್ಲಿ ಸಮಭಾಗಿಯಾಗಲಾರದೋ, ಶ್ರಮಜೀವಿ ಸಮುದಾಯದ ಒಳಿತಿಗೆ, ಸರ್ವ ಆಯಾಮಗಳ ಬದುಕಿನ ಉನ್ನತಿಗೆ ಪೋಷಕವಾಗಲಾರದೋ, ನಿಸರ್ಗ ಸಹಜ ಸುಂದರ ಬದುಕಿನ ಕಾಣ್ಕೆ ನೀಡುವುದಿಲ್ಲವೋ- ಅಂತಹ ತತ್ವಜ್ಞಾನಕ್ಕೂ ಜನಸಮುದಾಯಕ್ಕೂ ಅರ್ಥಪೂರ್ಣ ನೆಂಟಸ್ತನ ಕೂಡ ಎಂದೆಂದಿಗೂ ಸಾಧ್ಯವಾಗಲಾರದು. ಆದರೆ ಜನಪದ ಸಂಸ್ಕೃತಿಯಲ್ಲಿ ಅವರ ಬದುಕಿಗೂ ಹಾಗೂ ಅವರ ನಂಬುಗೆಯ ತತ್ವಕ್ಕೂ ಭಿನ್ನತೆಯೇ ಉಳಿದಿರುವುದಿಲ್ಲ. ಜಾನಪದೀಯ ತತ್ವವೆಂದರೇನೇ ಆಚರಣಾತ್ಮಕ ಸ್ವರೂಪದ್ದು. ಆಚರಣೆಗಳೇ ಅವರ ಬದುಕಿನ ಶ್ರದ್ಧಾ ಕೇಂದ್ರಗಳು.

ಆದರೆ ಇವತ್ತಿನ ದುರಂತಗಳೇ ಬೇರೆ. ಇಂದು ನಮ್ಮನ್ನಾಳುತ್ತಿರುವ ತತ್ವವೇ ಆಳುವ ವರ್ಗದ ತತ್ವವೂ ಆಗಿದೆ. ಶ್ರಮ ಹಾಗೂ ಜ್ಞಾನಗಳು ಸಮ್ಮಿಳನವಾಗದಂತೆಯೂ, ಶ್ರಮಜೀವಿ ವರ್ಗದ ಜನರ ಬುದ್ಧಿಗೂ, ಮನಸ್ಸಿಗೂ ಧರ್ಮದಮಲಿನ ಸಂಕೋಲೆಗಳನ್ನು ಬಿಗಿದು-ಸಮುದಾಯವನ್ನಿಡೀ ವೈಚಾರಿಕ ದಾಸ್ಯದಲ್ಲಿರಿಸುವುದರ ಮೂಲಕ ಆ ವರ್ಗದ ಆರ್ಥಿಕ ಹಾಗೂ ಸಾಂಸ್ಕೃತಿಕ ಗುಲಾಮಗಿರಿಯನ್ನು ಗಟ್ಟಿಗೊಳಿಸಲಾಗುತ್ತಿದೆ. ಯಾವುದೇ ಒಂದು ಜನಾಂಗವನ್ನು ನಾಶಪಡಿಸಲು ಆಯುಧಗಳು ಬೇಕಿಲ್ಲ; ಅವರ ಸಂಸ್ಕೃತಿಯನ್ನು ನಾಶಪಡಿಸಿದರೆ ಸಾಕು- ಆ ಜನಾಂಗ ಸರ್ವನಾಶವಾದಂತೆಯೇ.

ಜಾನಪದ ತತ್ವದರ್ಶನ ನಿಸರ್ಗ ಸಹಜವೂ, ಅಷ್ಟೇ ಸರಳ ಸುಂದರವೂ ಆಗಿರುವುದರಿಂದಲೇ ಎಂತೆಂತಹ ಹೊಡೆತಗಳ ನಡುವೆಯೂ ಮನುಷ್ಯರ ಚರಿತ್ರೆಯ ಉದ್ದಕ್ಕೂ ಉಳಿದುಕೊಂಡೇ ಬಂದಿದೆ. ಜೀವಾದಿಜೀವಗಳಿಗೆಲ್ಲ ಕಾಲ ಕಾಲಕ್ಕೆ ಜೀವದ್ರವ್ಯವನ್ನೆರೆಯುತ್ತ ನಮ್ಮನ್ನು ಅನುಗಾಲವೂ ಪೊರೆಯುತ್ತಿದೆ.

* * *

ಇಂತಹ ಉನ್ನತ ತತ್ವದ ಜಾನಪದೀಯ ಅಂಶಗಳನ್ನು ನಮ್ಮ ಸಾಂಸ್ಕೃತಿಕ ಅಧ್ಯಯನದ ಸಂದರ್ಭಗಳಲ್ಲಿ ಬಹುಮುಖ್ಯ ನಿರ್ಣಯ ಅಥವ ತೀರ್ಮಾನವೊಂದಕ್ಕೆ ಆಕರ ಇಲ್ಲವೇ ಆಧಾರವಾಗಿಸಿಕೊಳ್ಳಲು ಇಂದಿಗೂ ನಮ್ಮ ಪಂಡಿತ ಪ್ರಭೃತಿಗಳು ಹಿಂಜರಿಯುತ್ತಾರೆ. ವಿಲಕ್ಷಣ ಮಂಡಿವಂತಿಕೆಯನ್ನು ಪ್ರದರ್ಶಿಸುತ್ತಾರೆ. ಆದರೆ ನೂರೆಂಟು ಪ್ರಕ್ಷಿಪ್ತಗಳ ಶಾಸ್ತ್ರ, ಸ್ಮೃತಿ, ಚರಿತ್ರೆಗಳನ್ನೆಲ್ಲ ನಾವು ಆಯಾ ಕಾಲದ ಅಧಿಕೃತ ದಾಖಲೆಗಳನ್ನಾಗಿ ಪರಿಗಣಿಸಬಹುದಾದರೆ ಗಾಢಜೀವನ ನಂಬಿಕೆಯ ಜಾನಪದವನ್ನೇಕೆ ಸತ್ಯವನ್ನರಿವ ಮಾನದಂಡಗಳನ್ನಾಗಿ ಸ್ವೀಕರಿಸಬಾರದು?

ಜಾನಪದ ಸಾಹಿತ್ಯ, ಕಲೆಗಳು, ಆಚರಣೆಗಳು ಹಾಗೂ ಪುರಾಣಗಳ ಉತ್ಪ್ರೇಕ್ಷಿತ ಇಲ್ಲವೇ ಅತ್ಯುಕ್ತಿಯ ಮುಸುಗು ಸರಿಸಿ, ನಮ್ಮ ಒಳಗಿವಿ ಹಾಗೂ ಒಳಗಣ್ಣುಗಳಿಗೆ ಕೇಳುವ ಮೂಲಧ್ವನಿ ಮತ್ತು ಕಾಣುವ ಮೂಲ ಸ್ವರೂಪಗಳನ್ನು ಕಾಲಾತೀತ ಭಿತ್ತಿಯಲ್ಲಿ ಮಥಿಸಿ ಚಾರಿತ್ರಿಕವಾದ ನವನೀತ ನನ್ನಿಗಳನ್ನು, ಅವು ಉಸುರುವ ಸಾಂಸ್ಕೃತಿಕ ಮೌಲ್ಯಗಳನ್ನು ಗಂಭೀರವಾಗಿ ಪರಿಗಣಿಸಿ ಇತಿಹಾಸದ ಅಜ್ಞಾತ ಮೂಲೆಗಳನ್ನು ನಾವು ಪುನರ್ರೂಪಿಸಿಕೊಳ್ಳಬೇಕಾಗಿದೆ.

ಜಾನಪದ ನಾಶವಾಗುವುದಿಲ್ಲ ಎಂಬ ಮಾತು ನಿಜ. ಬದುಕಿನ ನಿರಂತರತೆಯ ಹಾಗೆಯೇ ಜಾನಪದವೆಂಬುದೂ ನಿರಂತರವಾದುದು. ಆದರೆ ಬಾಹ್ಯ ಸಮಾಜದಲ್ಲಿನ ಆಳುವ ವರ್ಗದ ಎಲ್ಲ ಕ್ರೌರ್ಯಗಳೂ, ವಂಚನೆ, ಸುಳ್ಳುಗಳೆಲ್ಲ ಹೇಗೆ ಮುಚ್ಚಿ ಹಾಕಲ್ಪಡುತ್ತವೋ ಹಾಗೆಯೇ ಪರಿಶಿಷ್ಟ ಜಾನಪದದಲ್ಲಿ ದಾಖಲಾದ ಕಾಲದ ಅನೇಕ ಐತಿಹಾಸಿಕ ಸತ್ಯಗಳು ಕೂಡ ಶಿಷ್ಟ ಜಾನಪದದ ದಬ್ಬಾಳಿಕೆ, ದಮನಕ್ಕೆ ಸಿಕ್ಕಿ ಕ್ಷೀಣಿಸುತ್ತ ಕ್ರಮೇಣ ಕಣ್ಮರೆಯಾಗಿಯೂ ಹೋಗುತ್ತವೆ. ಬಲಿಷ್ಠ ವರ್ಗಗಳು ಕೆಳಜಾತಿ/ವರ್ಗಗಳನ್ನು ದಮನಿಸುತ್ತಿರುವುದರ ಭಾಗವಾಗಿ ಎಂಬಂತೆಯೇ ಶಿಷ್ಟ ಜಾನಪದ ಪರಿಶಿಷ್ಟ ಜಾನಪದದ ಉಸಿರನ್ನು ಕೂಡ ಕಿತ್ತುಕೊಳ್ಳುತ್ತಲೇ ಬಂದಿದೆ. 'ಕೆರೆಗೆ ಹಾರ'ವನ್ನು ಶಿಷ್ಟ ಜಾನಪದ ಸಂಸ್ಕೃತಿಯ ಅಂಗವಾಗಿ ಗಮನಿಸಬಹುದಾದ ರೀತಿಯಲ್ಲೇ 'ಬಲಿಯಾದಳು ಬಂದಮ್ಮ'ವನ್ನು ಪರಿಶಿಷ್ಟ ಜಾನಪದದ ತೊತ್ತಳದುಳಿಯಲ್ಪಟ್ಟ ಸತ್ಯವನ್ನಾಗಿಯೇ ಗಮನಿಸಲು ಸಾಧ್ಯವಿದೆ. ಪುರಾಣಗಳಿಗೆ ಪ್ರತಿ-ಪುರಾಣಗಳನ್ನೂ, ಐತಿಹ್ಯಗಳಿಗೆ ಪ್ರತಿ- ಐತಿಹ್ಯಗಳನ್ನು ನಿರ್ಮಿಸಿರುವ ಸಮರಶೀಲಾತ್ಮಕ ಬೆಳವಣಿಗೆಯನ್ನು ಜಾನಪದದಲ್ಲಿ ನೋಡಬಹುದು.

'ಕೆರೆಗೆ ಹಾರ'ದ ಇನ್ನೊಂದು ರೂಪವೂ ಇರುವಂತಿದೆ. ಮಗ್ಗದ ಹೊಲೆಯನೊಬ್ಬ ತನ್ನ ಸೀರೆಗಳು ಅಂದಿನ ಸಂತೆಯಲ್ಲಿ ಒಳ್ಳೇ ಲಾಭಕ್ಕೆ ಮಾರಾಟವಾದರೆ ಕೆರೆಕಟ್ಟೆಯ- ತಾನು ನಡೆದು ಹೋಗುತ್ತಿರುವ ದಾರಿಬದಿಯ ಬೆತ್ತಲೆ ದುಗ್ಗಮ್ಮನಿಗೆ ಸುಂದರವಾದ ಹೊಸ ಸೀರೆಯೊಂದನ್ನು ಉಡಿಸುವುದಾಗಿ ಹರಕೆ ಹೊರುತ್ತಾನೆ. ಅಂತೆಯೇ ಲಾಭದೊಂದಿಗೆ ಕೆರೆಕಟ್ಟೆಯ ಮೇಲೆ ವಾಪಸ್ಸಾಗುವಾಗ ಆ ಊರಿನ ಗೌಡ, ಮಗ್ಗದೊಲೆಯ ಎಷ್ಟು ಹೇಳಿದರೂ ಕೇಳದೆ ದುಗ್ಗಮ್ಮನಿಗೆ ಮೀಸಲಾಗಿದ್ದ ಸೀರೆಯನ್ನು ತನ್ನ ಸೊಸೆಗೆಂದು ಓಡಿದೊಯ್ಯುತ್ತಾನೆ. ಮಗ್ಗದ ಹೊಲೆಯ ಬಾರದಿರಲು, ನಡೆದುದೆಲ್ಲವನ್ನೂ ಅರಿತುಕೊಂಡ ದುಗ್ಗಮ್ಮ ಕೆರೆಬತ್ತಿಸಿ, ಗೌಡನ ಸೊಸೆಯನ್ನೆ ತನ್ನ ಪಾಲಿನ ಸೀರೆಯೊಂದಿಗೆ ಹಾರವಾಗಿಸಿಕೊಂಡಳು. ಕೆರೆಕಟ್ಟೆಯ ಅಂಚಲ್ಲಿ ಬಿಸಿಲಿಗೆ ಮಿರುಗುವ ಹೊಂಬಣ್ಣದ ಮಿಂಚೇ ಸೀರೆಯ ಅಂಚು ಎಂಬುದಾಗಿ ಜನಪದರು ನಂಬುತ್ತಾರೆ. ಹೀಗೆಯೇ ಜಾನಪದದಲ್ಲಿ ಆಯಾ ಕಾಲಧರ್ಮವನ್ನೂ, ವಿವಿಧ ವರ್ಗಗಳ ಜನರ ಮನೋಧರ್ಮವನ್ನೂ ಪ್ರತಿಬಿಂಬಿಸಬಲ್ಲ ಭಿನ್ನ ಭಿನ್ನ ಪಠ್ಯಗಳಿರಬಲ್ಲವು.

ಜಾನಪದ ಸಂಸ್ಕೃತಿ ಇಂದು ಎದುರಿಸುತ್ತಿರುವ ಆತಂಕ, ಸವಾಲು, ಸಂದಿಗ್ಧಗಳು ನೂರಾರಿದ್ದಾವು. ಆದರೆ ಜಾನಪದದ ಪರಂಪರಾಗತವಾದ ಮೂಲಸತ್ವವನ್ನುಳಿಸಿಕೊಂಡೂ, ಅದರ ಅನನ್ಯತೆಗೆ ಭಂಗ ಬರದಂತೆಯೂ ಹಾಗೂ ಅದರೊಟ್ಟೊಟ್ಟಿಗೇ ಜನಪದ ವರ್ಗ ಆರ್ಥಿಕ ಹಾಗೂ ಸಾಮಾಜಿಕ ಸ್ಥಿರತೆಯನ್ನು ಸಾಧಿಸಲೂಬೇಕೆಂದು ಬಯಸುವುದು ಈ ಕ್ಷಣದ ಬಹುದೊಡ್ಡ ಒಗಟಾಗಿದೆ. ಜನಪದ ಸಂಸ್ಕೃತಿಯೆಂಬುದೇ ಒಂದು ಪ್ರದರ್ಶನದ ವಸ್ತುವಾಗಿ ಹೋಗಿರುವ ಇಂದು ಇಂತಹ ಬದುಕಿನ ಕಾಳಜಿಯ ಚಿಂತನೆಗಳನ್ನು ನಡೆಸುವವರಾದರೂ ಯಾರು? ಜಾನಪದವನ್ನು ಬಿಟ್ಟು!

* * *

ಎ. ಕೆ. ರಾಮಾನುಜನ್ನರನ್ನು 'ಸಾಂಸ್ಕೃತಿಕ ನಾವಿಕ' ಎಂದು ಕರೆಯಲಾಗುತ್ತಿತ್ತು. ಆತ ನಿಸ್ಸಂಶಯವಾಗಿಯೂ ಕಳೆದ ಶತಮಾನದ ಶ್ರೇಷ್ಟತಮ ಭಾಷಾಂತರಕಾರರು ಹಾಗೂ ಜಾನಪದ ವಿದ್ವಾಂಸರು. ಆನಂದ ಕೂಮಾರಸ್ವಾಮಿಯವರು 'ಸಾಂಸ್ಕೃತಿಕ ಭಾರತ'ವನ್ನು ಹೇಗೆ ನೋಡಬೇಕೆಂಬ ದೃಷ್ಟಿಯನ್ನು ಪಶ್ಚಿಮಕ್ಕೆ ಮೊದಲು ನೀಡಿದವರಾಗಿ ಪ್ರಮುಖರು. ಈ ಹಿನ್ನೆಲೆಯಲ್ಲಿ ಇಲ್ಲಿನ ದೇಸಿ ಜಗತ್ತನ್ನು ವಿಶ್ವವೇದಿಕೆಯಲ್ಲಿ ಅನಾವರಣಗೊಳಿಸಿದವರಾಗಿ ರಾಮಾನುಜನ್ ಕೂಡ ಮುಖ್ಯರೇ. ಎಜ್ರಾಪೌಂಡ್ ಚೀನವನ್ನು ಯುರೋಪಿಗೆ ತಂದುಕೊಟ್ಟಿದ್ದಕ್ಕಿಂತ ರಾಮಾನುಜನ್‌ರ ಕೆಲಸವೇನೂ ಕಡಿಮೆಯಾದುದಲ್ಲ ಎಂದು ಅನಂತಮೂರ್ತಿಯವರು ರಾಮಾನುಜನ್ನರ ಜಾನಪದ ಆಸಕ್ತಿಯನ್ನು ಪ್ರಶಂಸಿಸಿದ್ದಾರೆ.

ಹಾಗೆ ನೋಡಿದರೆ ೧೮೬೮ರಲ್ಲಿಯೇ ಭಾರತದ ಮೊಟ್ಟಮೊದಲ ಜನಪದ ಕಥೆಗಳ ಸಂಗ್ರಹ 'ದಿ ಓಲ್ಡ್ ಡೆಕ್ಕನ್ ಡೇಸ್' ಪ್ರಕಟವಾಗಿತ್ತು. ಆನಂತರ ಬಂದದ್ದು 'ಇಂಡಿಯನ್ ಫೇರಿ ಟೇಲ್ಸ್'. ೧೮೭೨ರಲ್ಲಿ ಮುಂಬೈನ 'ಇಂಡಿಯನ್ ಆಂಟಿಕ್ವೆರಿ'ಯಲ್ಲಿಯೂ ಜನಪದ ಕಥೆಗಳು ಸಾಕಷ್ಟು ಪ್ರಮಾಣದಲ್ಲಿ ಪ್ರಕಟವಾದವು. ಅಲ್ಲಿಂದ ೧೯೪೪ರ ವರೆಗಿನ ಡಾ. ವೆರಿಯರ್ ಎಲ್ವಿನ್ ಅವರ 'ಫೋಕ್ ಟೇಲ್ಸ್ ಆಫ್ ಮಹಾ ಕೋಶಲ್ ಅಂಡ್ ಒರಿಸ್ಸ'ವರೆಗೂ ಭಾರತದ ಜನಪದ ಕಥೆಗಳ ಸಂಕಲನಗಳು ಪ್ರಕಟವಾಗುತ್ತಲೇ ಇವೆ. ಈ ಪರಂಪರೆಯಲ್ಲೇ ರಾಮಾನುಜನ್‌ರ 'ಫೋಕ್ ಟೇಲ್ಸ್ ಫ್ರಂ ಇಂಡಿಯ' ಪ್ರಕಟವಾದುದು. ರಾಮಾನುಜನ್ ಸಂಕಲಿಸಿರುವ ಕಥೆಗಳಲ್ಲಿ ಕೆಲವನ್ನು ಇಲ್ಲಿ ಪ್ರಸ್ತಾಪಿಸಿರುವ ಕೃತಿಗಳು ಮತ್ತು ಪತ್ರಿಕೆಗಳಿಂದಲೂ ಪಡೆದಿದ್ದಾರೆ. ರಾಮಾನುಜನ್ನರ ವಿದ್ವತ್ತಿನ ಗ್ರಹಿಕೆಗಳ ನಡುವೆಯೂ ಅವರದೇ ಆದ ಮಿತಿ ಮತ್ತು ಲೋಪಗಳು ಕೂಡ ಚರ್ಚಾರ್ಹವಾದವು. ಜನಪದ ಕಥೆಗಳ ಕುರಿತ ಅವರ ಲೇಖನ 'ಗೋಡೆಗಳಿಗೆ ಇದನ್ನು ಹೇಳಿ' ಓದಿದಾಗ ಜನಪದ ಸಂಸ್ಕೃತಿಯ ಕುರಿತ ಅವರ ಒಟ್ಟಾರೆ ಗ್ರಹಿಕೆ ಮಧ್ಯಮ ವರ್ಗದ 'ಜನಪ್ರಿಯ ನಡಾವಳಿ' ಪರಿಕಲ್ಪನೆಗೆ ಸಂವಾದಿಯಾದ ಗ್ರಹಿಕೆಯಂತೆಯೇ ಕಾಣಿಸಿಬಿಡುತ್ತದೆ. ರಾಮಾನುಜನ್ನರ ವಿದ್ವತ್ತು ಹಾಗೂ ಆಸಕ್ತಿಗಳನ್ನು ಅವಜ್ಞೆಯಿಂದ ನೋಡುವ ಉದ್ದೇಶದಿಂದ ಈ ಮಾತು ಆಡುತ್ತಿಲ್ಲ. ಯಾಕೆಂದರೆ ಈ ಹಿಂದೆ ಚರ್ಚಿಸಿರುವ ಜೀವನೋನ್ಮುಖವಾದ ಜನಪದ ತತ್ವದರ್ಶನ ಹಾಗೂ ಈ ನೆಲದ ಶ್ರೇಣೀಕೃತ ಸಮಾಜದಲ್ಲಿನ ಸ್ತರವಿಭಜನೆಯ ಪರಿಣಾಮಗಳಿಗನುಗುಣವಾದ ಧ್ವನಿಯ ಏರಿಳಿತಗಳನ್ನು ಹೊಂದಿರುವ ನಮ್ಮ ಜಾನಪದ ಜಗತ್ತನ್ನು ಅರಿಯಲು 'ಜನಪ್ರಿಯ ನಡಾವಳಿ'ಗಿಂತಲೂ ಜರ್ಮನ್ ವಿದ್ವಾಂಸರು ಬಳಸುವ 'ಪ್ರಾದೇಶಿಕ ನರಕುಲ ವಿಜ್ಞಾನ' ಪದ್ಧತಿಯೇ ಹೆಚ್ಚು ಸೂಕ್ತವಾಗಿ ಕಾಣಿಸಿಬಿಡುತ್ತದೆ. ಎ ಕೆ. ರಾಮಾನುಜನ್ನರಲ್ಲಿ ಜಾನಪದದ ನಾಡಿಮಿಡಿತವನ್ನು ಆಲಿಸಲು ಅಗತ್ಯವಿರುವ ತಾತ್ವಿಕ ಚೌಕಟ್ಟಿನ ಕುರಿತ ಅಸ್ಪಷ್ಟತೆಯಿಂದಾಗಿಯೇ ಅವರು ದಲಿತನೊಬ್ಬ ಸಂತ ಸ್ಥಿತಿಗೇರುವ 'ಎ ಸ್ಕ್ಯಾವೆಂಜರ್ಸ್ ಡ್ರೀಮ್'ನಂತಹ ಜಾನಪದ ಕಥೆಯೊಂದಿಗೆ ವರ್ಣ/ವರ್ಗ ಭೇದವನ್ನು ಪ್ರತಿಪಾದಿಸುವ 'ಎ ಟೈಗರ್ ದಟ್ ಡಿಡ್ ನಾಟ್ ನೋ ಹೂ ಹೀ ವಾಸ್' ಎಂಬಂತಹ ಜಾನಪದೇತರ ಸಂಸ್ಕೃತಿಯ ಕಥೆಯನ್ನು 'ಗಾಸ್ಪೆಲ್ ಆಫ್ ರಾಮಕೃಷ್ಣ' ಕೃತಿಯಿಂದ ಆಯ್ದು ಒಟ್ಟಿಗೇ ಸಂಕಲಿಸಿ, ಜಾನಪದೀಯ ಜೀವನ ಹಾಗೂ ಮನೋಧರ್ಮದ ಬಗ್ಗೆಯೇ ಗೊಂದಲ ಮೂಡಿಸುತ್ತಾರೆ. ಇದು ರಾಮಾನುಜನ್ನರಲ್ಲಿನ ಜನಪದದ ಬಗೆಗಿನ ತಾತ್ವಿಕ ವಿರೋಧಾಭಾಸಕ್ಕೆ ಅತ್ಯಂತ ಸ್ಪಷ್ಟ ನಿದರ್ಶನವಾಗಿದೆ.

ಇಷ್ಟರ ನಡುವೆಯೂ- ಜಾನಪದ ಕಥೆಗಳ ಬಗ್ಗೆ ಆಸಕ್ತಿ ಇರುವವರು ಗಂಭೀರವಾಗಿ ಓದಲೇಬೇಕಾದ ಲೇಖನ ರಾಮಾನುಜನ್ನರ 'ಗೋಡೆಗಳಿಗೆ ಇದನ್ನು ಹೇಳಿ'. 'ಕೆರೆಗೆ ಹಾರ' ಕುರಿತ ಶಿವರಾಮಯ್ಯನವರ ಲೇಖನ ಹೊಸ ಚರ್ಚೆಯನ್ನೇ ಶುರು ಮಾಡುವಂತಿದೆ.

'ಶಿಗಾ ದೇವಾಲಯದ ಅರ್ಚಕ' ಒಂದು ನೆಲೆಯಿಂದ ಝೆನ್ ಕಥೆಯಂತೆಯೂ, ಮತ್ತೊಂದು ನೆಲೆಯಿಂದ ಜಾನಪದ ಕಥೆಯಂತೆಯೂ ತೋರುವಂತಿದೆ. 'ಬುಡಬೆಳ್ಳಿ ನಡುಪಚ್ಚೆ ಗೊನೆಮುತ್ತು' ಕಥೆ ಸರಳ ನಿರೀಕ್ಷೆಗೆ ತಕ್ಕಂತೆಯೇ ಹೇಗೆ ಕೊನೆಯಾಗುವುದೋ- ಆ ಕಥೆ ಆಧಾರಿತ ಈ ನಾಟಕವೂ ಕೂಡ ಅಷ್ಟೇ ಸರಳ ನಿರೀಕ್ಷೆಗೆ ತಕ್ಕಂತೆಯೇ ಕೊನೆಯಾಗುತ್ತದೆ. ಆದರೆ ಈ ಮಕ್ಕಳ ಜಾನಪದ ನಾಟಕದ ನಿಜವಾದ ಶಕ್ತಿ ಬೆಂಗಳೂರು ಗ್ರಾಮೀಣ ಜಿಲ್ಲೆಯ ಆಡುಭಾಷೆಯ ಪ್ರಯೋಗದಲ್ಲಿದೆ. ಪ್ರಾಯಶಃ ರಾಮನಗರ, ಚನ್ನಪಟ್ಟಣ ಪ್ರದೇಶದ ಗ್ರಾಮ್ಯ ಭಾಷೆಯ ಸೊಗಡನ್ನು ಹೀಗೆ ಹಿಡಿದಿಟ್ಟ ಶೈಲಿಯನ್ನು ಓದುಗರು ಕಂಡಿರಲಾರರು. ಜಾನಪದೀಯ ವಸ್ತುವಿಗೆ ತಕ್ಕಂತ ಭಾಷೆ ಒದಗಿಬಂದಿರುವುದೇ ಈ ನಾಟಕದ ಅಚ್ಚರಿಯಾಗಿದೆ. ಮುಗ್ಧತೆ ಮತ್ತು ಸರಳತೆಯ ಕಾರಣದಿಂದಾಗಿ ಆದಿವಾಸಿಗಳ ಹಾಡುಗಳು ಗಮನ ಸೆಳೆದರೆ ಶಿಷ್ಟ-ಪರಿಶಿಷ್ಟ ಜಾನಪದ ಸಂಸ್ಕೃತಿಯ ಭಿನ್ನ ಗ್ರಹಿಕೆಗಳನ್ನು ಯಥಾವತ್ತು ಹಿಡಿದಿಡಬಲ್ಲ ಪ್ರಯತ್ನವನ್ನು ಸ. ರಘುನಾಥ್ ನಡೆಸಿದ್ದಾರೆ. ಹರಿಹರನ ರಗಳೆಗಳಲ್ಲಿನ ಸ್ತ್ರೀವಾದವನ್ನು ಕುರಿತಂತೆ ಎಚ್. ಎಸ್. ಶ್ರೀಮತಿಯವರು ಸಮತೂಕದ ದೃಷ್ಟಿಯಿಂದ ಸಮರ್ಥ ರೀತಿಯಲ್ಲಿ ವಿವೇಚಿಸಿದ್ದಾರೆ.

ನಮ್ಮ ಅರಿವಿಗೆ ಬಾರದಂತೆಯೇ ಈ ಸಂಚಿಕೆ ಕೊಂಚ ಜನಪದದ ವಿಶೇಷ ಸಂಚಿಕೆಯೆಂಬಂತೆ ರೂಪುಗೊಂಡಿರುವುದು ನಮಗೂ ಸಂತೋಷದ ಸಂಗತಿಯಾಗಿದೆ. ಜಾನಪದದ ಬಗ್ಗೆ ಹಾಗಾಗಿಯೇ ಕೊಂಚ ಯೋಚಿಸಲು ಸಾಧ್ಯವಾಗಿದೆ.

ವೇಗ ಸಂಸ್ಕೃತಿಯ ವಿಕೃತಗಳ ನಡುವೆ 'ಅನಿಕೇತನ'ದ ಈ ಜಾನಪದ ಸಂಚಿಕೆ ಓದುಗರಿಗೆ ಕೊಂಚವಾದರೂ ನೆಮ್ಮದಿ ನೀಡಲಿ ಎಂಬುದು ನಮ್ಮ ಆಶಯ.

'ಅನಿಕೇತನ'ದ ಬದಲಾದ ಸ್ವರೂಪದ ಬಗ್ಗೆ ಮೆಚ್ಚುಗೆಯ ಮಾತುಗಳು ಕೇಳಿ ಬರುತ್ತಿವೆ. ಓದುಗರಿಂದ ಪತ್ರಗಳೂ ಬಂದಿವೆ. ಇವಕ್ಕೆ ಕಾರಣರಾದ ಎಲ್ಲರಿಗೂ ನಮ್ಮ ಕೃತಜ್ಞತೆಗಳು. 'ಅನಿಕೇತನ'ವನ್ನು ಮತ್ತಷ್ಟು ಗಂಭೀರ ಪತ್ರಿಕೆಯನ್ನಾಗಿ ರೂಪಿಸಲು ಕೂಡ ಸಾಧ್ಯವಿದೆ. ಆದರೆ ಲೇಖಕರ ಸಹಕಾರದ ಕೊರತೆಯಿಂದಾಗಿಯಷ್ಟೇ ಅದು ಸಾಧ್ಯವಾಗುತ್ತಿಲ್ಲ. ಜನಪದದಲ್ಲಿ ಕೇಳಿ ಬರುವುದು 'ನಾವು' ಎಂಬ ಸಮಷ್ಟಿ ದನಿಯೇ ಹೊರತು 'ನಾನು' ಎಂಬ ಅಹಂಕಾರವಲ್ಲ. 'ಅನಿಕೇತನ' ಅಂತಹ ಸಮಷ್ಟಿ ದನಿ ಪಡೆಯುವಂತಾಗಲಿ.

–ಸಂಪಾದಕರು

# ಪರಿವಿಡಿ

# ಗೋಡೆಗಳಿಗೆ ಇದನ್ನು ಹೇಳಿ (ಲೇಖನ)

## (ಭಾರತೀಯ ಸಂಸ್ಕೃತಿಯಲ್ಲಿನ ಜಾನಪದ ಕತೆಗಳ ಕುರಿತು)

ಮೂಲ : ಎ. ಕೆ. ರಾಮಾನುಜನ್

ಅನು : ರಾಮಲಿಂಗಪ್ಪ ಟಿ. ಬೇಗೂರು

ಮೌಖಿಕ ಪರಂಪರೆಯನ್ನೇ ಕಡೆಗಣಿಸುವಂತಹ ಭಾರತ ಮತ್ತು ಭಾರತೀಯ ಸಂಸ್ಕೃತಿಯ ಬಗೆಗೆ ಯಾರೂ ಗಂಭೀರವಾಗಿ ಆಸಕ್ತರಲ್ಲ. ಶಾಬ್ದಿಕ ಜಾನಪದ ಪ್ರಕಾರಗಳಾದ ಗಾದೆ, ಒಗಟು, ಕತೆ, ಲಾವಣಿ, ಜೋಗುಳ, ಹಾಡು, ಹಾಸ್ಯ (ಜೋಕ್ಸ್), ಮಹಾಕಾವ್ಯಗಾತ್ರದ ಗದ್ಯ ಮತ್ತು ಪದ್ಯ ಕಥನಗಳು ಮತ್ತು ಅಶಾಬ್ದಿಕ ಜಾನಪದ ಪ್ರಕಾರಗಳಾದ (ಪರಂಪರಾಗತ ಕಲಿಕೆಯಿಂದ ಕರಗತವಾದ) ನೃತ್ಯಗಳು, ಆಟಗಳು, ನೆಲ ಮತ್ತು ಗೋಡೆ ಚಿತ್ರಣಗಳು, ಬೊಂಬೆಗಳಿಂದ ಹಿಡಿದು ರಾಕ್ಷಸಾಕಾರದ ಹೊರಾಂಗಣ ಆಕೃತಿಯವರೆಗಿನ ಕುಶಲ ವಸ್ತುಗಳು ಹಾಗೂ ಸಂಯುಕ್ತ ಪ್ರದರ್ಶನ ಕಲೆಗಳಾದ ಮೋಡಿ-ಮಾಟ ಹಾಗೂ ನಾಟಕಗಳು, ಇವೆಲ್ಲವೂ ನಗರ, ಪಟ್ಟಣ, ಹಳ್ಳಿ ಹೀಗೆ ಒಟ್ಟಾರೆ ಭಾರತೀಯ ಜೀವನದ ಪ್ರತಿಯೊಂದು ನೆಲೆಯ ಒಳಹೊರಗುಗಳನ್ನು ರೂಪಿಸಿವೆ. ಪಾಶ್ಚಾತ್ಯರು ಯಾವುದನ್ನು ಕಲೆ, ಧರ್ಮ, ಅರ್ಥಶಾಸ್ತ್ರ ಎಂದು ಪ್ರತ್ಯೇಕವಾಗಿ ವಿಭಾಗಿಸುತ್ತಾರೊ ಅದನ್ನು ಭಾರತದಲ್ಲಿ ಒಟ್ಟಾಗಿ ಬೆಸೆದು ಅಭಿವ್ಯಕ್ತಿಸಲಾಗಿದೆ. ಬಾಲ್ಯಕಾಲದಲ್ಲಿಯೇ ಇಲ್ಲಿ ಪ್ರತಿಯೊಬ್ಬನಿಗೂ ಈ ಶಾಬ್ದಿಕ ಮತ್ತು ಅಶಾಬ್ದಿಕ ಪರಿಸರವು ಯಾವುದು ಸುಂದರ ಮತ್ತು ಕಲಾತ್ಮಕವಾದದ್ದು, ಯಾವುದು ನೀತಿ ಮತ್ತು ಸರಿಯಾದದ್ದು ಎಂಬ ಪ್ರಜ್ಞೆಯನ್ನು ರೂಪಿಸಿರುತ್ತದೆ. ಜೊತೆಗೆ ಸ್ವಲ್ಪ ಹೆಚ್ಚು ಕಡಿಮೆ ಮೌಲ್ಯಗಳ ಬಗೆಗಿನ ತಿಳುವಳಿಕೆಯನ್ನೂ ರೂಪಿಸಿರುತ್ತದೆ. ಭಾರತದಂತಹ ಬೃಹತ್ ಅನಕ್ಷರ ಸಂಸ್ಕೃತಿಯಲ್ಲಿ ಪ್ರತಿಯೊಬ್ಬರೂ ಬಡವ-ಬಲ್ಲಿದ, ಮೇಲ್ಜಾತಿ-ಕೆಳಜಾತಿ, ಪ್ರೊಫೆಸರ್-ಪಂಡಿತ-ಪಾಮರ ಹೀಗೆ ಎಲ್ಲರೂ ತಮ್ಮೊಳಗೇ ಒಂದು ಅನಕ್ಷರ ಅಂತಸ್ಥ ಲೋಕವನ್ನು ಹೊಂದಿರುತ್ತಾರೆ.

ಭಾರತೀಯ ಮೌಖಿಕ ಪರಂಪರೆಯನ್ನು ಗಮನಿಸಲಿಕ್ಕೆ ಇನ್ನೊಂದು ಮುಖ್ಯಕಾರಣ ಭಾರತದ ಜನಸಂಖ್ಯೆಯ ಬಹು ದೊಡ್ಡ ಭಾಗ ಅನಕ್ಷರಸ್ಥವಾಗಿರುವುದು. ಸಾಕ್ಷರತೆಯ ಅಂಕಿ

ಅಂಶಗಳು ಕೂಡ ನಗರ ಮತ್ತು ಗ್ರಾಮೀಣ ಜನರ ನಡುವೆ ಹಾಗೂ ಪುರುಷ ಮತ್ತು ಮಹಿಳೆಯರ ನಡುವೆ ಅಗಾಧ ಅಂತರವಿರುವುದನ್ನು ಹೇಳುತ್ತದೆ. ಭಾರತದ ಜೀವಂತ ಸಾಂಸ್ಕೃತಿಕ ಜಗತ್ತು ಹೆಚ್ಚಾಗಿ ಮಹಿಳೆ, ಮಕ್ಕಳು, ಬುಡಕಟ್ಟು ಜನಾಂಗ ಮತ್ತು ಶೋಷಿತ ಜನವರ್ಗವನ್ನೇ ಹೊಂದಿದೆ. ಹಾಗೇ ಬಿಹಾರದಂತಹ ಕನಿಷ್ಠಾತಿ ಕನಿಷ್ಠ ಸಾಕ್ಷರತೆಯುಳ್ಳ ಪ್ರದೇಶಗಳಲ್ಲೂ ಕೂಡ ಅಲ್ಲಿನ ನಿತ್ಯ ಬಳಕೆಯ ಭಾಷೆಗಳಲ್ಲಿ ಅಭಿವ್ಯಕ್ತಗೊಂಡಿರುವ ಮೌಖಿಕ ಪರಂಪರೆಗಳನ್ನು ಎಚ್ಚರದಿಂದ ಗಮನಿಸದಿದ್ದರೆ ಭಾರತೀಯ ಜೀವಂತಿಕೆಯ ಅಂತಃಸತ್ವವನ್ನು ತಿಳಿಯಲಾಗುವುದಿಲ್ಲ.

ಭಾರತೀಯತೆ ಎಂದು ನಾವು ಯಾವುದನ್ನು ಕರೆಯುತ್ತೇವೆಯೋ, ಅದರೆಲ್ಲ ವೈಶಾಲ್ಯ ಮತ್ತು ವೈವಿಧ್ಯತೆಯುಳ್ಳ ಒಂದು ಚಿತ್ರವನ್ನು ಕಲ್ಪಿಸಿಕೊಳ್ಳಬೇಕಾದರೆ, ಅನೇಕ ಪ್ರಾಂತ, ಧರ್ಮ, ಸಾಮಾಜಿಕ ಸ್ತರಗಳನ್ನು ಪ್ರತಿನಿಧಿಸುವ ಜೀವಂತ ಭಾಷೆಗಳನ್ನು ಅಗತ್ಯವಾಗಿ ಗಮನಿಸಲೇಬೇಕು. ನಮ್ಮಲ್ಲಿ ನಿರ್ದಿಷ್ಟ ಹೆಸರುಳ್ಳ, ಮಾತೃಭಾಷೆ ಅಥವಾ ಪ್ರಾಂತ ಭಾಷೆಗಳಾದ ಸುಮಾರು ೩೦೦೦ದಷ್ಟು ಆಡುಭಾಷೆಗಳಿವೆಯೆಂದು ಸರ್ವೇಕ್ಷಣೆಯಿಂದ ತಿಳಿದು ಬಂದಿದೆ. ಇವುಗಳಲ್ಲಿ ಹದಿನೈದು ಭಾಷೆಗಳಿಗೆ ದೀರ್ಘಕಾಲಿಕ ಲಿಖಿತ ಸಾಹಿತ್ಯ ಪರಂಪರೆಯಿದೆ. ಪಿತೃಭಾಷೆಯಾದ ಸಂಸ್ಕೃತ ಮತ್ತು ವಸಾಹತು ಹಾಗೂ ವಸಾಹತೋತ್ತರ ಕಾಲದಲ್ಲಿ ಭಾರತೀಯ ರಂಗಪ್ರವೇಶ ಮಾಡಿದ ಇಂಗ್ಲಿಷ್ ಭಾಷೆಗಳನ್ನು ಇವುಗಳೊಂದಿಗೆ ಸೇರಿಸಬೇಕು ಮತ್ತು ಎಲ್ಲ ರೀತಿಯ ಮೌಖಿಕ ಪರಂಪರೆಗಳೂ (ಶತಮಾನಗಳಿಗೂ ಹಿಂದೆ ಸಂಸ್ಕೃತ ವೇದ ಪಾಠಗಳಿಂದ ಆರಂಭಗೊಂಡು) ಈ ಎಲ್ಲ ಭಾಷೆಗಳ ಒಳಗೂ ತುಂಬಿಕೊಂಡು, ಪ್ರತಿಯೊಂದು ಸಾಂಸ್ಕೃತಿಕ ಅಭಿವ್ಯಕ್ತಿಯನ್ನೂ ಆವರಿಸಿಕೊಂಡಿವೆ.

ಅನೇಕ ಶತಮಾನಗಳಿಂದಲೂ ಮೌಖಿಕ ಮಾಧ್ಯಮವು ಇತರ ಮಾಧ್ಯಮಗಳಿಂದ ಪುಷ್ಟಗೊಳ್ಳುತ್ತ ಬಂದಿದೆ; ಉದಾಹರಣೆಗೆ ತಾಳೆಗರಿ ಪ್ರತಿಗಳು, ಶಾಸನಗಳು, ತಾಮ್ರಪಟಗಳು, ಮುದ್ರಿತ ಪುಸ್ತಕಗಳು ಮತ್ತು ದಿನಪತ್ರಿಕೆಗಳು (ಬಹುಪಾಲು ೧೯ನೇ ಶತಮಾನದಿಂದೀಚೆಗೆ) ಮತ್ತು ಇತ್ತೀಚೆಗೆ ವಿದ್ಯುನ್ಮಾನ ಮಾಧ್ಯಮ, ಉದಾಹರಣೆಗೆ ಟಿ. ವಿ., ವಿಡಿಯೊ ಕ್ಯಾಸೆಟ್ಟು, ಆಡಿಯೋ ಕ್ಯಾಸೆಟ್ಟು. ಈ ಮಾಧ್ಯಮಗಳು ಯಾವಾಗಲೂ ಪರಸ್ಪರ ಸಂಸರ್ಗಗೊಂಡು ಹೊಸ ಹೊಸ ಪರಿಣಾಮಗಳನ್ನು ಉಂಟುಮಾಡಿವೆ. ವಾಚನದಲ್ಲಿ ಇಲ್ಲವೆ ನಾಟಕದಲ್ಲಿ ಅಥವಾ ರೇಡಿಯೋ, ಸಿನಿಮಾ ಇಲ್ಲವೇ ಟಿ.ವಿಯಲ್ಲಿ ಒಂದು ಕೃತಿಯು ಮೌಖಿಕವಾಗಿ ಕಟ್ಟಲ್ಪಟ್ಟು ಬರಹದಲ್ಲಿ ವ್ಯಕ್ತಗೊಳ್ಳಬಹುದು ಅಥವಾ ಬರಹದಲ್ಲಿ ಕಟ್ಟಲ್ಪಟ್ಟು ಮೌಖಿಕವಾಗಿ ವ್ಯಕ್ತವಾಗಬಹುದು.

ಪ್ರಾಚೀನ ದಿನಗಳಲ್ಲಿ ಕಂಠಪಾಠ ಮತ್ತು ಬರವಣಿಗೆಗಳು ಮಾತ್ರ ಕೃತಿಯೊಂದನ್ನು ದಾಖಲಿಸಿಡುವ ಮಾರ್ಗಗಳಾಗಿದ್ದವು. ಇತ್ತೀಚಿನ ಸಂಶೋಧನೆಗಳಿಂದ ಟೇಪು ಮತ್ತು ಫಿಲ್ಮುಗಳಲ್ಲಿ ಮೌಖಿಕ ಮತ್ತು ಸಂಕೀರ್ಣ ಪ್ರದರ್ಶನಾಭಿವ್ಯಕ್ತಿಗಳನ್ನೂ ದಾಖಲಿಸಿಡಬಹುದಾಗಿದೆ. ಹೀಗಾಗಿ ಹೊಸ ಮಾಧ್ಯಮವು ಮುಖಾಮುಖಿ (Face to Face) ಮೌಖಿಕ ಅಭಿವ್ಯಕ್ತಿಯ ಗುಣಗಳನ್ನು ಬರವಣಿಗೆಯ ಮತ್ತು ಮುದ್ರಣದ ಅನಂತ ಮರುಪ್ರತಿಗಳ ಅಭಿವ್ಯಕ್ತಿಯೊಂದಿಗೆ ಒಟ್ಟಾಗಿಸಿದೆ.

ಮೌಖಿಕವಾದ ಪ್ರಸ್ತುತಿಯ ವೇಳೆ ಗಾಯಕ ಅಥವಾ ಕಥಕ ಕೇಳುಗನಂತೆಯೇ ಅದೇ

ಕಾಲ, ಸ್ಥಳ ಮತ್ತು ಸಂದರ್ಭಗಳಲ್ಲಿ ಇರುತ್ತಾನೆ ಮತ್ತು ಪ್ರಸ್ತುತಿಯೂ ಪುನರಾವರ್ತಿಸಲಾಗದಂತಹ ರೀತಿಯದ್ದಾಗಿರುತ್ತದೆ. ಆದರೆ ಬರಹದಲ್ಲಿ ಕೃತಿಯು ಕೃತಿಕಾರನಿಂದ ಸ್ವತಂತ್ರಗೊಂಡುಬಿಡುತ್ತದೆ ಮತ್ತು ಓದುಗರು ಬೇರೆಯೇ ಆದ ಕಾಲ ಮತ್ತು ಸ್ಥಳಗಳಲ್ಲಿ ಇರಬಹುದು. ಈ ಮೊದಲಿನಂತೆ ಹಸ್ತಪ್ರತಿಯ ಒಡೆತನ ಕೂಡ ಅನೇಕ ಪ್ರತಿಗಳ ಮುದ್ರಣದಿಂದಾಗಿ ಕೆಲವೇ ವಿದ್ವಾಂಸರ ವಶದಲ್ಲೇನೂ ಉಳಿಯುವುದಿಲ್ಲ. ಹಾಗೇ ಫ್ಯಾಕ್ಸ್ ಮತ್ತು ಟೆಲಿಗ್ರಫಿಗಳ ವೇಗದಿಂದಾಗಿ ಅಕ್ಷರಗಳು ಸಾಗಾಟದ ಮಿತಿಯೊಳಗೂ ಉಳಿಯುವುದಿಲ್ಲ. ಟೇಪು ರೆಕಾರ್ಡರಿನಿಂದಾಗಿ ಆಡುವವನ ಮಾತೂ ಕೂಡ ಅವನಿಂದ ಬಿಡುಗಡೆಯಾಗಿ (ಬರಹಗಾರನಿಂದ ಬರಹ ಬಿಡುಗಡೆಗೊಂಡಂತೆ) ಮೂಲದಿಂದ ಬೇರೆಯದೇ ಆದ ದೂರಕ್ಕೆ ಹೋಗಬಲ್ಲದು. ಡಿಸ್ಕು, ಟೇಪು, ರೇಡಿಯೋಗಳಿಂದಾಗಿ ಯಾವುದು ಒಂದು ಕಾಲ ಮತ್ತು ಸ್ಥಳದಲ್ಲಿ ಮಾತ್ರ ಕೇಳಿಸಬಹುದಾಗಿತ್ತೋ (ಉದಾ: ತಿರುಪತಿ ಬೆಟ್ಟದ ಮೇಲೆ ಬೆಳಗ್ಗೆ ಹಾಕುವ ಸುಪ್ರಭಾತ) ಅದು ಕೇಳಲಿಚ್ಛಿಸುವ ಯಾರಿಗೆ ಬೇಕಾದರೂ ಪ್ರಸಾರಗೊಳ್ಳುವ ಹಾಗೆ ಆಗಿದೆ.

ಹೀಗೆ ಮಾಹಿತಿ ಮತ್ತು ಕಲೆಗಳು ಹೆಚ್ಚು ಹೆಚ್ಚು ಪ್ರಜಾಪ್ರಭುತ್ವೀಕರಣಗೊಳ್ಳತೊಡಗಿವೆ. ಈ ಎಲ್ಲ ನವೀನ ಮಾಧ್ಯಮಗಳಿಂದಾಗಿ ಕೇಳುಗರ ಮುಖಾಮುಖಿ ಸಂವಹನದ ಮೂಲ ಮೌಖಿಕತೆಯು (Primary Orality) ಯಾವುದೇ ಹಂಗಿಲ್ಲದಂತಹ ಮೌಖಿಕ ಪ್ರಸ್ತುತಿಗಳ ನವ ಮೌಖಿಕತೆ (Secondary orality) ಯಾಗಿ ಪರಿಣಮಿಸಿದೆ. ಹಳೇ ಮೂಲ ಮೌಖಿಕತೆಯು ಈ ಹೊಸ ನವ ಮೌಖಿಕತೆಯ ಮೇಲೆ ಎಂಥ ಪ್ರಭಾವ ಬೀರುತ್ತದೆ ಎಂಬುದು ಇನ್ನೂ ನಿರ್ಧಾರವಾಗಬೇಕಾಗಿದೆ.

ಕನಿಷ್ಟ ಈವರೆಗಾದರೂ- ಹೊಸ ಮಾಧ್ಯಮವು ಮೌಖಿಕತೆಯನ್ನು ಇನ್ನೂ ನಾಶಗೊಳಿಸಿಲ್ಲ. ಮೌಖಿಕವಾಗಿ ಕಟ್ಟಲ್ಪಟ್ಟು ಪ್ರಸಾರಗೊಳ್ಳುತ್ತಿದ್ದ ಜನಪದ ಶಾಖೆಗಳೆಲ್ಲ ಪ್ರತಿಯೊಂದೂ ಹೊಸ ಮಾಧ್ಯಮದ ಭಾಗವೇ ಆಗಿವೆ. ಬರವಣಿಗೆಯಿಂದಾಗಿ ಜನಪದ ಗೀತೆ ಮತ್ತು ಕಥನಗಳು ದಾಖಲುಗೊಂಡಿವೆ ಅಥವಾ ಬರವಣಿಗೆಯಲ್ಲಿ ಮರು ನಿರೂಪಣೆಗೊಂಡಿವೆ. ಭಾರತದ ಮಹಾಕಥನಗಳಾದ ರಾಮಾಯಣ, ಮಹಾಭಾರತ ಹಾಗೂ ಬೌದ್ಧ ಜಾತಕಗಳು, ಪಂಚತಂತ್ರ (೫ನೇ ಶತಮಾನ) ಕಥಾಸರಿತ್ಸಾಗರ (೧೧ನೇ ಶತಮಾನ), ಈ ಎಲ್ಲ ಪಠ್ಯಗಳೂ ಮೂಲದಲ್ಲಿ ಮೌಖಿಕ ಪರಂಪರೆಯನ್ನು ಆಧರಿಸಿ ರಚಿತಗೊಂಡವೇ ಆಗಿವೆ. ಆದರೆ ಈ ರಚನೆಗಳಿಂದ ಈ ಕಥನಗಳಿಗೆ ನಿಶ್ಚಲತೆಯೇನೂ ಉಂಟಾಗಲಿಲ್ಲ ಅಥವಾ ಜಾನಪದ ಪರಂಪರೆಯಲ್ಲಿನ ಇತರ ಹಲವು ಪರ್ಯಾಯ ಕಥನಗಳ ಅಸ್ತಿತ್ವಕ್ಕೂ ತಡೆಯುಂಟಾಗಲಿಲ್ಲ.

ನಿಜ ಹೇಳಬೇಕೆಂದರೆ ಬಹುಪಾಲು ಭಾರತೀಯರಿಗೆ ಈ ಭಾರತೀಯ ಮಹಾಕಥನಗಳು (Epics) ಸಂಸ್ಕೃತದ ಮೂಲ ಪಠ್ಯಗಳಿಂದೇನೂ ಪರಿಚಿತವಾಗಿ ಉಳಿದಿಲ್ಲ. ಅವುಗಳ ಪ್ರಾದೇಶಿಕ ಮರುನಿರೂಪಣೆಗಳಿಂದ ಮತ್ತು ಕೆಳಜಾತಿಗಳಿಂದ ಮತ್ತೆ ಮತ್ತೆ ಹಾಡಲ್ಪಟ್ಟ ಮತ್ತು ಪ್ರದರ್ಶಿಸಲ್ಪಟ್ಟ ಮೌಖಿಕ ಪಾಠಾಂತರಗಳ ಮೂಲಕವೇ ಬಹುಜನರಿಗೆ ಇವು ಪರಿಚಿತವಾಗಿವೆ. ನಮ್ಮ ಹೆಂಗಸರ ಹಾಡುಗಳು ಸಂಸ್ಕೃತ ಪಠ್ಯಗಳಲ್ಲಿ ಇಲ್ಲದೇ ಇರುವಂತಹ ಪಾತ್ರ, ಸನ್ನಿವೇಶಗಳ ಮೂಲಕ ಹೊಸ ಸ್ತ್ರೀವಾದಿ ದೃಷ್ಠಿಕೋನವುಳ್ಳ ತಮ್ಮದೇ ಆದ ರಾಮಾಯಣ ಕತೆಗಳನ್ನು ಹೇಳಬಲ್ಲವು. ಉದಾಹರಣೆಗೆ ಮಾಮೂಲಿ ರಾಮಾಯಣಗಳು ಜೇಷ್ಠ-ನಾಯಕ ರಾಮನನ್ನು ಅವನ ಹುಟ್ಟನ್ನು

ಪೈಭವೀಕರಿಸಬಹುದು. ಆದರೆ ತೆಲುಗಿನ ಹೆಂಗಸರ ಹಾಡುಗಳಲ್ಲಿ ಇವನ ಹುಟ್ಟಿಗೆ ಮೊದಲು ಇವನ ತಾಯಿಗೆ ಉಂಟಾದ ಹೆರಿಗೆ ನೋವಿನ ವಿವರಗಳಿವೆ. ಹಾಗೇ ಇಲ್ಲಿ ವನವಾಸದಲ್ಲಿ ಸೀತೆ ಅನುಭವಿಸಿದ ದುಃಖವನ್ನೂ ಪ್ರಧಾನಗೊಳಿಸಲಾಗಿದೆ. ಕೆಲವು ಜನಪದ ಹಾಡುಗಳು ಮತ್ತು ಅವತರಣಿಕೆಗಳು ಹೇಗೆ ರಾಮನು ದಶಾನನ ರಾವಣನನ್ನು ಸೋಲಿಸಲಾರದೆ ಹೋದ ಮತ್ತು ಸೀತೆ ಯುದ್ಧಕ್ಕೆ ಹೋಗಿ ಅವನನ್ನು ಹೇಗೆ ಗೆದ್ದಳು ಎಂಬ ಕತೆಯನ್ನೂ ಹೇಳುತ್ತವೆ. ಮಹಾಕಾವ್ಯಗಳು ಸ್ಥಳೀಯ ಭಾಷೆಗಳಲ್ಲಿ ಮೌಖಿಕ ವ್ಯಾಖ್ಯಾನಗಳನ್ನೂ ಪಡೆಯುತ್ತವೆ. (ಉದಾಹರಣೆಗೆ ತಾಳಮದ್ದಳೆ ಪ್ರಸಂಗದಂತೆ-ಅನುವಾದಕ) ವರ್ತಮಾನದ ಮತ್ತು ಸಮಕಾಲೀನ ವರ್ತನೆಗೆ ಮಹಾಕಾವ್ಯದ ವಸ್ತು-ಪ್ರಸಂಗಗಳನ್ನು ಎಳೆದು ಅನ್ವಯಿಸುವ, ಪೌರಾಣಿಕ ಘಟನೆಗಳನ್ನು ಸ್ಥಳೀಯ ಸಂಕಷ್ಟ ಮತ್ತು ರಾಜಕೀಯಗಳಿಗೆ ಹೊಂದಿಸುವ ಕೆಲಸವನ್ನೂ ಈ ಮೌಖಿಕ ಕಥನಗಳು ಮಾಡುತ್ತವೆ.

ಅಂತಾರಾಷ್ಟ್ರೀಯವಾಗಿ ಪ್ರಸಾರದಲ್ಲಿರುವ ಕತೆಗಳನ್ನು ಹಳ್ಳಿಯ ಹೆಂಗಸರು ಕೂಡಾ ಹೇಳುವಂತಹ ಸಂದರ್ಭದಲ್ಲಿ, ಉದಾಹರಣೆಗೆ ತನ್ನ ತಾಯಿಯನ್ನೇ ತಾನು ಮದುವೆಯಾಗಬೇಕಾಗಿ ಬಂದ ಈಡಿಪಸನ ಕತೆಯನ್ನು ಹೇಳುವಾಗ ಅವರ ಕಥನ ಧಾಟಿಯು ತಾಯಿಯೊಬ್ಬಳ ಸಂವೇದನೆಯಿಂದಲೇ ಹೇಳಿದಂತಿರುತ್ತದೆ. ಇಲ್ಲಿ ಶಾಪಗ್ರಸ್ಥನು ಈಡಿಪಸನಲ್ಲ. ನಿಜವಾಗಿಯೂ ಶಾಪಗ್ರಸ್ಥಳು ಅವನ ತಾಯಿ. ಇವಳು ಇಲ್ಲಿ ತನ್ನ ಮಗನನ್ನೇ ಮದುವೆಯಾಗ ಬೇಕಾದ ಶಾಪಕ್ಕೆ ಗುರಿಯಾಗಿ, ಅದರಿಂದ ಬಿಡಿಸಿಕೊಳ್ಳಲು ಯತ್ನಿಸಿ, ಆದರೆ ವಿಧಿಯಿಂದ ಬಿಡಿಸಿಕೊಳ್ಳಲಾಗದೆ-ಮದುವೆಯಾಗಿ, ಕೊನೆಗೆ ನಿಜವೇನೆಂದು ತಿಳಿದು ತನ್ನನ್ನು ತಾನೇ ಕೊಂದುಕೊಳ್ಳುತ್ತಾಳೆ.

ಮುದ್ರಣದಿಂದಾಗಿ ನಿಜಕ್ಕೂ ಮೌಖಿಕ ಮಾಧ್ಯಮದಲ್ಲಿ ಪಠ್ಯವು ಪ್ರಸರಣಗೊಳ್ಳಲು ಸಹಾಯವಾಗಿದೆ. ವಿಶೇಷವಾಗಿ-ಹದಿನಾರನೇ ಶತಮಾನದ ಹಿಂದಿಯ ರಾಮಚರಿತ ಮಾನಸದಂತಹ- ಧಾರ್ಮಿಕ ಪಠ್ಯಗಳು ಬಹಳವೇ ಆದರ ಮತ್ತು ಪಠಣಕ್ಕೆ ಒಳಗಾಗಿವೆ. ವಿಡಿಯೋದಿಂದಾಗಿ ರಾಮಕತೆಯ ಹಲವು ಪ್ರದರ್ಶನಗಳು ಹೆಚ್ಚು ನೇರವಾಗಿ ಪ್ರಸಾರವಾಗಿವೆ ಮತ್ತು ಟಿ.ವಿಯಿಂದಾಗಿ ರಾಮಾಯಣ ಮತ್ತು ಮಹಾಭಾರತದಂತಹ ಪ್ರಾಚೀನ ಪಠ್ಯಗಳನ್ನಾಧರಿಸಿ ಹಲವಾರು ಧಾರಾವಾಹಿಗಳು ನಿರ್ಮಾಣಗೊಂಡಿವೆ. ಈ ಧಾರಾವಾಹಿಗಳು ಭಾರತೀಯ ದೂರದರ್ಶನವು ಪ್ರಸಾರ ಮಾಡಿರುವ ಯಾವುದೇ ಜನಪ್ರಿಯ ಕಾರ್ಯಕ್ರಮಕ್ಕಿಂತಲೂ ಅತಿಹೆಚ್ಚು ಜನಪ್ರಿಯವಾಗಿವೆ. ಈ ಧಾರಾವಾಹಿಗಳು ಟಿ.ವಿಯಲ್ಲಿ ಬರುವಾಗ ಸಾರ್ವಜನಿಕ ಜೀವನವೇ ಸ್ತಬ್ಧವಾಗಿದೆ. ಬೀದಿಗಳು ಖಾಲಿಯಾಗಿವೆ. ಅಂಗಡಿ ಬಾಗಿಲುಗಳು ಮುಚ್ಚಿಕೊಂಡಿವೆ. ನೆರೆಹೊರೆಯವರೆಲ್ಲಾ ಜೊತೆ ಸೇರಿ ಟಿ.ವಿಯೆದುರು ಕುಳಿತು ಬರುವ ಪಾತ್ರಗಳಿಗೆ ಪೂಜೆಯನ್ನೂ ಮಾಡುತ್ತಾ ವೀಕ್ಷಿಸಿದ್ದಾರೆ.

ಪುರಾಣಕತೆಗಳು, ಕಥನಕಾವ್ಯಗಳು ಮತ್ತು ಜನಪದ ಕತೆಗಳಿಂದ ಸಿನಿಮಾಗಳು ಸ್ಫೂರ್ತಿಪಡೆದಿವೆ. ಯಾರಾದರೂ ಭಾರತದ ಅನೇಕ ಜನಪ್ರಿಯ ಸಿನಿಮಾಗಳು ಮೂಲತಃ ಜಾನಪದ ಪ್ರದರ್ಶನಗಳ ಉತ್ತರಾಧಿಕಾರಿಗಳೇ ಆಗಿವೆಯೆಂದು ಧೈರ್ಯವಾಗಿ ಹೇಳಬಹುದು. ಮೊದಮೊದಲು ನಿರ್ದಿಷ್ಟ ಪ್ರದೇಶಕ್ಕೆ ಮಾತ್ರ ಸೀಮಿತಗೊಂಡಂತೆ (ಪಶ್ಚಿಮ ಕರಾವಳಿಯ

ಯಕ್ಷಗಾನದಂತೆ) ಇದ್ದ ನಾಟಕ, ಹಾಡುಗಾರಿಕೆ, ಕುಣಿತಗಳ ಜನಪದ ಆಟಗಳು ಈಗ ರಾಷ್ಟ್ರೀಯ ರೇಡಿಯೋ ಮತ್ತು ದೂರದರ್ಶನಗಳಲ್ಲೂ ಪ್ರಸಾರಗೊಳ್ಳುತ್ತಿವೆ ಮತ್ತು ಆಧುನಿಕ ನಗರ ಪ್ರದರ್ಶನಗಳ ಮೇಲೂ ಪ್ರಭಾವ ಬೀರುತ್ತಿವೆ. ಅಷ್ಟೇ ಅಲ್ಲ, ಬ್ರೆಕ್ಟ್‌ನ 'ದಿ ಗುಡ್ ವುಮನ್ ಆಫ್ ಜೆಶುವಾ' ಅಥವಾ 'ಮ್ಯಾಕ್‌ಬೆತ್'ನಂತಹ ವಿದೇಶೀ ನಾಟಕಗಳೂ ಕೂಡ ಈಗಾಗಲೇ ಜಾನಪದ ಅಳವಡಿಕೆಗಳಿಗೆ ಒಳಗಾಗಿ ಪ್ರಯೋಗಗೊಂಡಿವೆ. ಗಿರೀಶ್ ಕಾರ್ನಾಡರ 'ನಾಗಮಂಡಲ' ಮತ್ತು ಕಂಬಾರರ 'ಸಿರಿಸಂಪಿಗೆ' ಅಜ್ಞಾತ ಕರ್ತೃವಿನ ಜಾನಪದ ಕತೆಗಳನ್ನಾಧರಿಸಿಯೇ ರಚಿಸಿದ ಆಧುನಿಕ ನಾಟಕಗಳಾಗಿವೆ. ಹಾಗೇ ಆಧುನಿಕ ಮಾಧ್ಯಮವೂ ಜಾನಪದ ಪ್ರಸ್ತುತಿಗಳನ್ನು ಪ್ರಭಾವಿಸತೊಡಗಿದೆ. ಪ್ರಭಾವವು ಎಷ್ಟರಮಟ್ಟಿಗೆ ಆಗಿದೆ ಎಂಬುದು ಇನ್ನೂ ಅಧ್ಯಯನಕ್ಕೆ ಒಳಪಡಬೇಕಾದ ವಿಷಯವಾದರೂ ಹಲವು ಚಿತ್ರಗೀತೆಗಳು ಮತ್ತು ಸನ್ನಿವೇಶಗಳು ಹಳ್ಳಿಯ ಹಾಡು-ಹಸೆಗಳನ್ನು ಪ್ರಭಾವಿಸಿರುವುದಂತೂ ನಿಜ.

ಮೌಖಿಕ ಪರಂಪರೆಗಳೇ ಎಲ್ಲ ಸಾಂಸ್ಕೃತಿಕ ಅಭಿವ್ಯಕ್ತಿಗಳನ್ನು ಸಜ್ಜುಗೊಳಿಸುತ್ತ, ಶಕ್ತಗೊಳಿಸುತ್ತ, ಮುನ್ನಡೆಸುತ್ತ ಮತ್ತು ಟೀಕೆಯನ್ನೂ ಮಾಡುತ್ತಾ ಇರುವಂತೆಯೇ ಒಂದೊಂದೂ ಹೊಸ ಮಾಧ್ಯಮದೊಂದಿಗೆ ಸಮಾಜಕ್ಕೆ ಹೊಸ ಹೊಸ ಪರಿಣತಿಯ ಪಡೆಗಳೇ ಪ್ರವೇಶ ಮಾಡುತ್ತವೆ. (ಹಸ್ತಪ್ರತಿಯಿಂದ ಮುದ್ರಣದವರೆಗೆ ಮತ್ತು ಟಿ.ವಿಯಿಂದ ಸಿನಿಮಾವರೆಗೆ) ಮಾಹಿತಿಯ ಸಮಾಜಶಾಸ್ತ್ರವು ಹೆಚ್ಚು ಹೆಚ್ಚು ಸಂಕೀರ್ಣಗೊಳ್ಳುತ್ತ ಹೋಗುತ್ತದೆ. ಒಂದು ಹಸ್ತಪ್ರತಿಗೆ ಬರೆಯುವ ವರ್ಗ, ಕಾಗದ ತಯಾರಿಕೆ, ಪೆನ್ನು ಅಥವಾ ಮಸಿಕಡ್ಡಿ ತಯಾರಿಸುವವರು ಇವರೆಲ್ಲ ಬೇಕಾಗುತ್ತಾರೆ. ಮುದ್ರಣಕ್ಕೆ ಒಂದು ಮುದ್ರಣಾಲಯ, ಕುಶಲ ಕೆಲಸಗಾರರು ಮತ್ತು ಸಾಮಗ್ರಿ (ಪೇಪರ್, ಇಂಕು, ಅಚ್ಚುಮೊಳೆ ಇತ್ಯಾದಿ) ಇವೆಲ್ಲ ಬೇಕಾಗುತ್ತದೆ. ಟಿ.ವಿ. ಮತ್ತು ಸಿನಿಮಾಗಳಿಗಂತೂ ವಿಶೇಷಜ್ಞರ, ಕಲಾವಿದರ, ಆಡಳಿತಗಾರರ, ಹಂಚಿಕೆದಾರರ ಬಹುದೊಡ್ಡ ಪಡೆಯೇಬೇಕಾಗಿ, ಒಂದು ಋಣದ ಪಟ್ಟಿಯೇ ಬೆಳೆಯುತ್ತದೆ. ಒಂದೊಂದು ಮಾಧ್ಯಮದಿಂದ ಹೊಸ ಹೊಸ ವರ್ಗಗಳು, ವೃತ್ತಿಗಳು, ಆಡಳಿತಯಂತ್ರ ಮತ್ತು ಸಂಸ್ಥೆಗಳೇ ಹುಟ್ಟುತ್ತವೆ. ಮಾಧ್ಯಮದ ವಿಸ್ತಾರ ಮತ್ತು ಶಕ್ತಿ ಹೆಚ್ಚಾದಂತೆಲ್ಲಾ ಹಣವೂ ಹೆಚ್ಚು ತಲೆ ಹಾಕುತ್ತದೆ. ಹಾಗೆ ಪ್ರತಿಯೊಂದು ಹೊಸ ಮಾಧ್ಯಮದ ಹೊಸ ಶಕ್ತಿಗಳನ್ನೂ ನಿರ್ವಹಿಸಲು ಮತ್ತು ನಿಯಂತ್ರಿಸಲು ಹೊಸ ರೀತಿಯ ಸೆನ್ಸಾರ್‌ಶಿಪ್ಪುಗಳೇ ಹುಟ್ಟಿಕೊಳ್ಳುತ್ತವೆ.

ಭೂಗತ ಮುದ್ರಣಗಳು ಮತ್ತು ಸಿನಿಮಾಗಳು ಇರಬಹುದಾದರೂ, ಪ್ರಾಥಮಿಕ ಮೌಖಿಕ ಪರಂಪರೆಗಳು ಮಾತ್ರ ನಿಜವಾದ ಸೆನ್ಸಾರಿನಿಂದ ದೂರವಿರುವಂಥವು. ಅತ್ಯಂತ ಕಠಿಣ ನಿಯಂತ್ರಣಕ್ಕೆ ಒಳಪಟ್ಟಂತಹ ಸಮಗ್ರ (Totalitarian) ಸಮುದಾಯಗಳಲ್ಲಿ ಕೂಡ ರಾಜಕೀಯ ಜೋಕುಗಳು ಹುಟ್ಟುತ್ತವೆ. ಪ್ರತಿಯೊಂದು ಅಧಿಕೃತ ಐತಿಹಾಸಿಕ ಮಹಾಕಥನಗಳಿಗೂ ಅನೇಕ ಅಲಿಖಿತ ಪರಂಪರೆಗಳು ಸೃಷ್ಟಿಯಾಗಿರುತ್ತವೆ ಮತ್ತು ಪ್ರಸಾರದಲ್ಲೂ ಇರುತ್ತವೆ. ಹ್ಯೂ ಟ್ರೆವರ್ ರೋಪರ್‌ರ 'ದಿ ಲಾಸ್ಟ್ ಡೇಸ್ ಆಫ್ ಹಿಟ್ಲರ್' (ಹಿಟ್ಲರನ ಕೊನೆ ದಿನಗಳು) ಕೃತಿಯನ್ನೂ ಕೂಡ ಮೌಖಿಕ ಚರಿತ್ರೆಯ ಮತ್ತು (ಹೆಚ್ಚು ತಿಳಿದ ಆದರೆ ಏನೂ ಬರೆಯದ) ಅವನ ಸಮಕಾಲೀನರನೇಕರ ನೇರ ಸಂದರ್ಶನವಿಲ್ಲದೆ ಬಹುಶಃ ರಚಿಸಲು ಸಾಧ್ಯವಾಗುತ್ತಿರಲಿಲ್ಲ. ಹೀಗೆ ಮೌಖಿಕ ಚರಿತ್ರೆಗಳು ತುಂಬಾ ಮುಖ್ಯವಾದವು, ಕೇವಲ ಅನಕ್ಷರ ಸನ್ನಿವೇಶ-

ನಾಗರಿಕತೆಗಳಲ್ಲಷ್ಟೇ ಅಲ್ಲ, ಸುದ್ದಿ ಮತ್ತು ಚರಿತ್ರೆಯನ್ನು ಸಂಕಲಿಸುವ ಮತ್ತು ಸೆನ್ಸಾರು ಮಾಡುವ ವಿನಾಶಕಾರಿ ಆಧುನಿಕ ಸಾರ್ವಜನಿಕ ಮಾಧ್ಯಮದ ಸಂಸ್ಕೃತಿಗಳಲ್ಲಿ ಕೂಡ.

ಈ ಕಾರಣಕ್ಕಾಗಿ ಮೌಖಿಕ ಪರಂಪರೆಗಳು ಪರ್ಯಾಯ ಪರಂಪರೆಗಳನ್ನು ಪೊತ್ತು ಸಾಗಿಸುತ್ತವೆ ಮತ್ತು ಪ್ರತಿಯೊಂದು ಪ್ರಧಾನ ಸಾಂಸ್ಕೃತಿಕ ರೂಪ ಮತ್ತು ಸಿದ್ಧಾಂತಗಳ (Idea) ವಿಮರ್ಶೆಯನ್ನೂ ಮಾಡುತ್ತವೆ. ಭಾರತದಲ್ಲಿ ಉದಾಹರಣೆಗೆ ತತ್ವಶಾಸ್ತ್ರೀಯವಾದ ಕರ್ಮ, ಮಾಯೆ, ಗುರು ದೇವೋಭವ ಇಂಥ ಪ್ರತಿಯೊಂದು ಅಧಿಕೃತ ಸಿದ್ಧಾಂತಗಳೂ ಮೌಖಿಕ ವಿಡಂಬನೆಗಳಲ್ಲಿ ವಿಮರ್ಶೆಗೆ ಒಳಗಾಗಿವೆ. ದೇವರುಗಳು, ದೊರೆಗಳು, ಬ್ರಾಹ್ಮಣರು, ವೈದ್ಯರು, ಅಧಿಕಾರಿಗಳು, ಇವರ ಜೊತೆಗೆ ಅತ್ತೆಯರು, ರಾಕ್ಷಸರು, ದರೋಡೆಕೋರರು, ಹುಲಿ ಮತ್ತಿತರ ಕ್ರೂರ ಜಂತುಗಳು ಎಲ್ಲವೂ ವಿಡಂಬನೆಗೆ ಈಡಾಗಿವೆ.

## ಸಾಂದರ್ಭಿಕತೆಯ ಮೌಖಿಕ ಕಥನಗಳು

ಎಲ್ಲ ಮೌಖಿಕ ಪ್ರಕಾರಗಳಿಗಿಂತಲೂ ಪ್ರಭಾವಶಾಲಿ, ಬಹುಮುಖಿ ಮತ್ತು ಬಹು ವ್ಯಾಪಕವಾದ ಪ್ರಕಾರವೆಂದರೆ ಕಥನವೆಂದು ನನಗನ್ನಿಸುತ್ತದೆ. ಜೋಕುಗಳಿಂದ ಮಹಾಕಾವ್ಯಗಳವರೆಗೆ, ಪುರಾಣ ಮತ್ತು ದಂತಕತೆಗಳಿಂದ ಜನಪದ ಕತೆಗಳವರೆಗೆ ಕಥನವು ಭಾರತದ ಕಲೆ ಮತ್ತು ಜೀವನದ ಪ್ರತಿಯೊಂದು ಮಗ್ಗುಲನ್ನೂ ಅಂತಃಪ್ರವೇಶಿಸಿದೆ. ಯಾವ ಮೌಖಿಕ ಪರಂಪರೆಯೂ (ಒಗಟು, ಗಾದೆ, ಹಾಡು ಮತ್ತು ಜೋಗುಳದಂತಹ ಪ್ರಕಾರಗಳಂತೆ) ಅನಕ್ಷರಸ್ಥರ ವಿಶೇಷ ಏಕಸ್ವಾಮ್ಯವಲ್ಲ. ಹಾಗೇ ಕತೆಗಳೂ ಕೂಡ ಎಲ್ಲರಿಗೂ ಸೇರಿದ ಸ್ವತ್ತೇ. ಅವು ಒಬ್ಬೊಬ್ಬರ ಬಾಲ್ಯದ ತತ್ವಶಾಸ್ತ್ರದ, ರಾಜಕಾರಣದ ಅವಿಭಾಜ್ಯ ಅಂಗಗಳು. ಉದಾಹರಣೆಗೆ ನಾನು ಬಾಲ್ಯದಲ್ಲಿ ಕೇಳಿದ್ದ ಕತೆ ಹೀಗಿದೆ.

ಒಬ್ಬ ಮೂರ್ಖ ಗುರು ಇದ್ದ. ಅವನಿಗೆ ಅಷ್ಟೇ ಮೂರ್ಖ ಶಿಷ್ಯರೂ ಇದ್ದರು. ಅವರೆಲ್ಲ ಒಮ್ಮೆ ಯಾತ್ರೆಗೆಂದು ಹೊರಟರು. ಅನೇಕ ದುಸ್ಸಾಹಸಗಳ ನಂತರ ಒಂದು ನದಿ ಎದುರು ಬಂತು. ಒಬ್ಬ ಶಿಷ್ಯ ಹೇಳಿದ 'ನನಗೆ ಗೊತ್ತು, ಇದೊಂದು ಮಹಾ ಮೋಸಗಾರ ನದಿ, ಇದು ಜನಗಳನ್ನು ನುಂಗಿಬಿಡುತ್ತದೆ. ಆದ್ದರಿಂದ ನಾವೆಲ್ಲಾ ಹುಷಾರಾಗಿರಬೇಕು.' ಗುರು ಆ ಮಾತಿಗೆ ತಲೆದೂಗಿ ಹೇಳಿದ 'ನಾವು ಮೊದಲು ಅದು ಮಲಗಿದೆಯಾ, ಎದ್ದಿದೆಯಾ, ಕಂಡುಹಿಡಿಯಬೇಕು. ಒಂದು ವೇಳೆ ಅದು ಮಲಗಿದ್ದರೆ ನಾವು ದಾಟಿ ಬಿಡಬಹುದು.' ಆಗಲೇ ಕತ್ತಲಾಗಿತ್ತು. ಎಲ್ಲರೂ ಸೇರಿ ಬೆಂಕಿ ಹಾಕಿದರು. ಸ್ವಲ್ಪ ಹೊತ್ತಿನ ನಂತರ ಒಬ್ಬ ಶಿಷ್ಯ ಒಂದು ಬೆಂಕಿ ಕೊಳ್ಳಿಯನ್ನು ತೆಗೆದುಕೊಂಡು ನದಿಯ ಹತ್ತಿರ ಹೋದ. ದೂರದಿಂದ ನಿಂತು ಉರಿಯುವ ಕೊಳ್ಳಿಯನ್ನು ನೀರಿಗೆ ಅದ್ದಿದ. ಸಹಜವಾಗಿಯೇ ನೀರಿನಿಂದ ಜೊರ್ರೆಂದು ಸದ್ದು ಬಂತು. ಸ್ವಲ್ಪ ಹೊಗೆಯೂ ಬಂದಿತು. ಶಿಷ್ಯ ಇದರಿಂದ ತುಂಬಾ ಹೆದರಿಕೊಂಡು ಚೀರುತ್ತಾ ಓಡಿಬಂದು ಹೇಳಿದ 'ಅಯ್ಯೋ ನದಿ ಎದ್ದಿದೆ. ಅದಕ್ಕೆ ಕೋಪಾನೂ ಬಂದಿದೆ. ನಾನು ಕೊಳ್ಳಿ ಅದ್ದಿದಾಗ ಹಾವಿನ ಹಾಗೆ ಬುಸುಗುಟ್ಟಿತು. ಹೊಗೆಯನ್ನೂ ಬಿಟ್ಟಿತು. ನಾನಂತೂ ಹೆದರಿಬಿಟ್ಟೆನಪ್ಪಾ. ಎಲ್ಲರೂ ಸ್ತಬ್ಧರಾದರು. ಆಗ ಗುರು ಹೇಳಿದ. 'ಎಲ್ಲರೂ ನದಿಯಿಂದ ದೂರ ಇರೋಣ.

ಯಾರೂ ಗಲಾಟೆ ಮಾಡಬೇಡಿ. ಗಪ್‌ಚಿಪ್ಪಾಗಿರಿ. ಇಲ್ಲೇ ಗಿಡಗಳಡಿ ಮಲಗೋಣ. ಬೆಳಗಾದ ಮೇಲೆ ನದಿ ಮಲಗಿರುತ್ತೆ. ಆಗ ನೋಡಿಕೊಂಡು ದಾಟೋಣ.' ಎಲ್ಲರೂ ಹಾಗೇ ಮಾಡಿದರು.

ಮಾರನೇ ಬೆಳಗ್ಗೆ ಗುರು ಶಿಷ್ಯನೊಬ್ಬನನ್ನು ನದಿ ಮಲಗಿದೆಯಾ, ಎದ್ದಿದೆಯಾ ಎಂದು ನೋಡಿ ಬರಲು ಕಳಿಸಿದ. ರಾತ್ರಿ ಅದ್ದಿದ್ದ ಕರಕಲು ಕೊಳ್ಳಿಯನ್ನೇ ತೆಗೆದುಕೊಂಡು ಹೋದ ಆ ಶಿಷ್ಯ ಹುಷಾರಾಗಿ ನೀರಿಗೆ ಅದ್ದಿದ. ಸಹಜವಾಗಿಯೇ ಆ ಕರಕಲಿನಿಂದ ಯಾವುದೇ ಜೊರ‍್ರೆಸುವ ಶಬ್ದವಾಗಲೀ, ಹೊಗೆಯಾಗಲೀ ಬರಲಿಲ್ಲ. ಅವನು ಮರಳಿ ಬಂದು ಗುರುವಿಗೆ ಹೇಳಿದ. 'ನದಿ ತುಂಬಾ ಜೋರಾಗಿ ನಿದ್ರೆ ಮಾಡ್ತಾ ಇದೆ ಅನ್ಸುತ್ತೆ ಗುರೂಜಿ. ಈಗ ಅದನ್ನು ಎಬ್ಬಿಸದೆ ನಾವು ಮೆತ್ತಗೆ ದಾಟಿಬಿಡಬೇಕು.' ಆಗ ಎಲ್ಲರೂ ಒಬ್ಬರನ್ನೊಬ್ಬರು ಕೈಕೈ ಹಿಡಿದುಕೊಂಡು ನದಿಯ ಆಚೆ ದಡವನ್ನು ತಲುಪಿದರು. ಅವರಲ್ಲೊಬ್ಬನಿಗೆ ನಾವೆಲ್ಲರೂ ಸುರಕ್ಷಿತವಾಗಿ ದಾಟಿದ್ದೇವಾ ಎಂದು ನೋಡಿಕೊಳ್ಳಬೇಕು ಅನ್ನಿಸಿತು. ಅವನು ತನ್ನೊಬ್ಬನನ್ನು ಬಿಟ್ಟು ಎಲ್ಲರನ್ನೂ ಎಣಿಸಿದ. ಅವನಿಗೆ ಎಷ್ಟು ಎಣಿಸಿದರೂ ನಮ್ಮಲ್ಲಿ ಒಬ್ಬರು ಕಡಿಮೆ ಇದ್ದೇವೆ ಅನ್ನಿಸತೊಡಗಿತು. ಆಗವನು 'ನಾವು ಬರುವಾಗ ಹದಿಮೂರು ಜನ ಇದ್ದೆವು. ಈಗ ಹನ್ನೆರಡೇ ಜನ ಇದ್ದೇವೆ. ಆ ಮೋಸಗಾರ ನದಿ ನಮ್ಮಲ್ಲೊಬ್ಬರನ್ನು ನುಂಗಿಬಿಟ್ಟಿದೆ' ಅಂದ. ಅದಕ್ಕೆ ಗುರು 'ಸುಮ್ಮಸುಮ್ಮನೆ ಹೀಗೆಲ್ಲಾ ಹೇಳಬೇಡ' ಎಂದು ಇನ್ನೊಬ್ಬನಿಗೆ ಎಣಿಸಲು ಹೇಳಿದ. ಅವನೂ ತನ್ನೊಬ್ಬನನ್ನು ಬಿಟ್ಟು ಮಿಕ್ಕೆಲ್ಲರನ್ನೂ ಎಣಿಸಿದ. ಆಗಲೂ ಹನ್ನೆರಡೇ ಜನರೆಂದ. ಮತ್ತೊಬ್ಬನನ್ನು ಎಣಿಸಲು ಹೇಳಿದಾಗ ಅವನೂ ಹೇಗೇ ಮಾಡಿದ. ಅದೇ ಸಂಖ್ಯೆ ಬಂದಿತು. ಕೊನೆಗೆ ಗುರುವೇ ಎಣಿಸಿದ. ಅವನೂ ತನ್ನೊಬ್ಬನನ್ನು ಬಿಟ್ಟು ಮಿಕ್ಕೆಲ್ಲರನ್ನು ಎಣಿಸಿ 'ಹೌದು ನಮ್ಮಲ್ಲೊಬ್ಬನನ್ನು ನದಿ ನುಂಗಿಬಿಟ್ಟಿದೆ' ಎಂದ. ಆಗ ಎಲ್ಲರೂ ಅಳತೊಡಗಿದರು. 'ಈ ಭಯಂಕರ ನದಿ ನಮ್ಮಲ್ಲೊಬ್ಬನನ್ನು ನುಂಗಿಬಿಟ್ಟಿದೆ. ಅವನ್ಯಾರು ಅಂತಲೂ ಗೊತ್ತಾಗುತ್ತಿಲ್ಲ. ಈಗೇನು ಮಾಡೋಣ'!

ಆಗ ಅಲ್ಲೊಬ್ಬ ಅಪರಿಚಿತ ನಡೆದುಹೋಗುತ್ತಿದ್ದ. ಅವನು 'ಯಾಕೆ ನೀವೆಲ್ಲಾ ಅಳುತ್ತಿರುವಿರಿ' ಎಂದು ಕೇಳಿದ. ಇವರ ಮಾತುಗಳನ್ನು ಕೇಳಿದ ಮೇಲೆ ಅವನಿಗೆ ಇವರೆಂಥಾ ಮೂರ್ಖರು ಇರಬೇಕು ಅನ್ನಿಸಿತು. ಅವನು 'ನಿಮ್ಮಲ್ಲಿ ಇಲ್ಲವಾಗಿರುವ ಒಬ್ಬನನ್ನು ಹೇಗೆ ವಾಪಸು ತರಬೇಕೆಂಬುದು ನನಗೆ ಗೊತ್ತಿದೆ. ಆದರೆ ಅದಕ್ಕೆ ನೀವು ಹಣ ಕೊಡಬೇಕಾಗುತ್ತದೆ' ಎಂದ. ಅವರು ತಮ್ಮಲ್ಲಿದ್ದ ಹಣವನ್ನೆಲ್ಲಾ ಕೊಟ್ಟರು. ಅವನು ಅವರನ್ನೆಲ್ಲಾ ಉದ್ದಕ್ಕೆ ಸಾಲಾಗಿ ನಿಲ್ಲಿಸಿದ. ಕೈಯಲ್ಲೊಂದು ಕೋಲು ಹಿಡಿದು ಅವರ ಹಿಂದೆ ನಿಂತು ಹೇಳಿದ. 'ನಾನೀಗ ಈ ಕೋಲಿನಿಂದ ಪ್ರತಿಯೊಬ್ಬರಿಗೂ ಒಂದೊಂದು ಏಟು ಕೊಡುತ್ತಾ ಬರುತ್ತೇನೆ. ನಾನು ಏಟು ಹಾಕಿದವರು ಜೋರಾಗಿ ತಮ್ಮ ಹೆಸರು ಹೇಳಿ ಸಂಖ್ಯೆಯನ್ನು ಎಣಿಸಬೇಕು.' ಮೊದಲನೆಯವನಿಗೆ ಹೊಡೆದಾಗ ಅವನು ನೋವಿನಿಂದ ಕಿರುಚುತ್ತಾ 'ಒಂದು ನನ್ನ ಹೆಸರು ಜೇನಿ' ಎಂದ. ನಂತರದವನಿಗೆ ಹೊಡೆದಾಗ 'ಎರಡು ನನ್ನ ಹೆಸರು ಮಾರನ್' ಎಂದು ಕಿರುಚಿದ. ಎಲ್ಲರೂ ತಮ್ಮ ಹೆಸರನ್ನು ಹೇಳುತ್ತಾ ಹದಿಮೂರು ಎಣಿಸುವವರೆಗೆ ಎಲ್ಲರಿಗೂ ಹೊಡೆಯುತ್ತಾ ಬಂದ. ಎಲ್ಲರೂ ಹಿಂದಿನಿಂದ ಹೊಡೆಸಿಕೊಂಡಿದ್ದರೂ ತಮ್ಮ ಕಳೆದುಹೋದ ಸಂಗಾತಿಯು ಈ ಜಾದೂಗಾರನಿಂದ ಮರಳಿ ಬಂದನೆಂದು ಖುಷಿಗೊಂಡರು.

ಬಾಲ್ಯದಲ್ಲಿ ನನಗೆ ಇದೊಂದು ಎಣಿಕೆಗೆ ಸಂಬಂಧಿಸಿದ ತಮಾಷೆಯ ಕತೆಯಾಗಿತ್ತು.

ಸುಮಾರು ವರ್ಷಗಳ ನಂತರ ಶಂಕರಾಚಾರ್ಯರು ತಮ್ಮ ಬೃಹದಾರಣ್ಯಕ ಉಪನಿಷತ್ತಿನ ಟೀಕಿನಲ್ಲಿ ಈ ಕತೆಯನ್ನು ಬಳಸಿಕೊಂಡು ಹೇಗೆ ಎಲ್ಲರೂ ತಮ್ಮನ್ನೇ ಮರೆತು ಮಿಕ್ಕೆಲ್ಲವರ ಬಗ್ಗೆ ಯೋಚಿಸುತ್ತಾರೆ ಎಂದು ಹೇಳಿರುವುದನ್ನು ನೋಡಿದೆ. ಆಮೇಲೊಮ್ಮೆ ಒಬ್ಬ ಚಾಣಾಕ್ಷ ರಾಜಕಾರಣಿಯು ತನ್ನೊಂದು ಭಾಷಣದಲ್ಲಿ ಈ ಕತೆಯನ್ನು ಉದ್ಧರಿಸಿ ಯಾವುದೇ ರಾಷ್ಟ್ರಹಿತದ ಎಣಿಕೆಯಲ್ಲಿ ಮೊದಲು ಎಲ್ಲರೂ ತಮ್ಮನ್ನು ತಾವು ಸೇರಿಸಿಕೊಳ್ಳಬೇಕು, ಇಲ್ಲವಾದರೆ ರಾಷ್ಟ್ರದ ಆರ್ಥಿಕ ಲೆಕ್ಕಾಚಾರವೇ ತಪ್ಪಾಗುತ್ತದೆ ಎಂದು ಜನಕ್ಕೆ ಹೇಳುತ್ತಿದ್ದುದನ್ನು ಕೇಳಿದೆ. ಹೀಗೆ ಒಂದೇ ಕತೆಯು ಅನೇಕ ಸಾಂದರ್ಭಿಕತೆಗಳನ್ನು ಅನೇಕ ತೆರನ ಬಳಕೆ ಮತ್ತು ಅರ್ಥಗಳನ್ನೂ ಒಳಗೊಂಡಿರಬಹುದು.

ಪ್ರತಿದಿನವೂ ಕತೆಗಳು ಮನರಂಜನೆಗಾಗಿ ಬಳಕೆಯಾಗುತ್ತವೆ. ನೀತಿಗೆ, ಮನಃಶಾಸ್ತ್ರೀಯ, ಧಾರ್ಮಿಕ, ರಾಜಕೀಯ ನಿದರ್ಶನಗಳಿಗೆ ಬಳಕೆಯಾಗುತ್ತವೆ. ಅಜ್ಜಿಯರು ಮಕ್ಕಳಿಗೆ ಊಟಮಾಡಿಸಲು ಊಟದ ವೇಳೆ ಕತೆಗಳನ್ನು ಹೇಳುತ್ತಾರೆ. ರಾತ್ರಿ ಮಲಗುವ ವೇಳೆ ಕೂಡ ಕತೆ ಹೇಳಲ್ಪಡುತ್ತವೆ. ಕೇವಲ ಮಕ್ಕಳನ್ನು ಮಲಗಿಸಲಷ್ಟೇ ಅಲ್ಲ, ರಾತ್ರಿಯೆಲ್ಲಾ ಅಡಕೆ ಸುಲಿಯುವಾಗ, ಬೀಡಿ ಸುತ್ತುವಾಗ ಕೆಲಸಗಾರರನ್ನು ಎಚ್ಚರಪಡಿಸಲು ಕೂಡ. ಆ ವೇಳೆ ಅನೇಕ ರೀತಿಯ ಸಾಮಾಜಿಕ ಮತ್ತು ಮನಃಶಾಸ್ತ್ರೀಯ ಸಂದೇಶಗಳು ಕೇಳುಗರ ಮನಸ್ಸಿಗೆ ಗೊತ್ತಿಲ್ಲದಂತೆಯೇ ಬಿತ್ತಲ್ಪಡುತ್ತವೆ. ಆ ಕತೆಗಳು ಆಮೇಲೆ ಆಗಾಗ ಚಿಂತನೆಗೆ-ಆಲೋಚನೆಗೆ ಹಲವರ್ಷಗಳ ನಂತರವೂ ನಾನು ಮೇಲಿನ ಕತೆಗೆ ಸಂಬಂಧಿಸಿ ಮಾಡಿದಂತೆ- ಕೇಳುಗರನ್ನು ತೊಡಗಿಸುತ್ತವೆ.

ಮಕ್ಕಳಿಗಾಗಿಯೇ ಹಲವಾರು ವಿಶೇಷ ಕತೆಗಳಿವೆ. ಅವರು ಮೂರು ನಾಲ್ಕು ವರ್ಷದವರಿರುವಾಗ, ತಾವಿನ್ನೂ ಚಿಕ್ಕವರು ಅನ್ನಿಸುವಾಗ, ದೈಹಿಕ ಚಟುವಟಿಕೆಗಳ ಬಗ್ಗೆ ಅವರದೇ ಕಲ್ಪನೆಗಳಿರುವಾಗ, ಉದಾಹರಣೆಗೆ ಮಲಮೂತ್ರ ವಿಸರ್ಜನೆ ಮೊದಲಾದವುಗಳ ಬಗೆಗೆ (ಇನ್ನೂ ತಿಳಿವಿನ ಹಂತದ) ಅವರಲ್ಲಿನ ತಮ್ಮದೇ ಕೆಲವು ನಿಷೇಧ-ಸಂಕೋಚಗಳನ್ನು ಇಂಥ ಕತೆಗಳು ಹೋಗಲಾಡಿಸುತ್ತವೆ. ಆ ಬಗೆಗೆ ಮುಕ್ತವಾಗಿ ಮಾತನಾಡುವಂತೆಯೂ ಮಾಡುತ್ತವೆ. ಇನ್ನೂ ಕೆಲವು ಹಾಸ್ಯ ಮತ್ತು ಪೋಲಿಕತೆಗಳು ಶೋಬನದ ರಾತ್ರಿಯ ಹೊಸ ಗಂಡು ಹೆಣ್ಣಿನ ಪಡಿಪಾಟಲುಗಳನ್ನೂ ವಿವರಿಸುತ್ತವೆ.

ಜನಪದ ಕತೆಗಳು ಯಾವಾಗಲೂ 'ಒಂದಾನೊಂದು ಕಾಲದಲ್ಲಿ....' ಎಂಬ ಸೂತ್ರದೊಂದಿಗೆ ಆರಂಭವಾಗುತ್ತವೆ. ಈ ಆರಂಭವು ನಮ್ಮನ್ನು ಆ ಕತೆಯ ಜಗತ್ತಿಗೆ ಒಯ್ಯುತ್ತದೆ ಮತ್ತು ಇವು ಯಾವಾಗಲೂ 'ಅವ್ರೆಲ್ಲಾ ಅಲ್ಲಿ ಇದ್ರಂತೆ ನಾವೆಲ್ಲಾ ಇಲ್ಲಿ ಇದ್ದೀವಂತೆ' (ಕನ್ನಡದಲ್ಲಿ), 'ಕತ ಕಂಚಿಗೆ ಹೋಯ್ತಂತೆ ನಾವು ಮನೆಗೆ ಬಂದ್ವಂತೆ' (ತೆಲುಗಿನಲ್ಲಿ) ಎಂದೇ ಸೂತ್ರಬದ್ಧತೆಯಿಂದ ಮುಗಿಯುತ್ತವೆ. ಈ ಅಂತ್ಯವು ಸ್ಪಷ್ಟವಾಗಿ ನಮ್ಮನ್ನು ದೈನಂದಿನ ನೈಜದ ಜಗತ್ತಿಗೆ ಎಳೆದು ತರುತ್ತದೆ. ಈ ಅಂತ್ಯ ಆರಂಭಗಳ ನಡುವೆ ಕತೆಯು ಬಂಧನ, ಸಂಬಂಧಿಕರ ಅಥವಾ ಹೆತ್ತವರ ಕ್ರೌರ್ಯ, ಹಾದರ ಹೀಗೆ ಅನೇಕ ನೋವಿನ ಮತ್ತು ನಿಷೇಧಗಳ ವಿಷಯಗಳನ್ನು ಅನಾವರಣಗೊಳಿಸುತ್ತದೆ. ಎದುರಿಸಿದ ಮತ್ತು ನಿವಾರಿಸಿಕೊಂಡ ಆತಂಕಗಳು, ಉಂಟಾದ ಮತ್ತು ತೀರಿಸಿಕೊಂಡ ಕುತೂಹಲಗಳನ್ನು ವರ್ಣಿಸುತ್ತದೆ. ಕುಟುಂಬ ಮತ್ತು ಸಮಾಜದಲ್ಲಿನ ಶಕ್ತಿಗಳು (ಅಥವಾ ಕಲ್ಪಿತ ಶಕ್ತಿಗಳು) ಗಾಂಪರೆಂದೂ ತಿಳಿಸುತ್ತದೆ.

ಪ್ರತಿಯೊಂದು ಸದ್ಗುಣದ (ಸಿದ್ಧಾಂತದ) ಅಧಿಕೃತ ಪಾಠಗಳಿಗೂ ಪ್ರತಿಯಾಗಿ ಅದರದರ ನೀಚತೆಯನ್ನೂ ಜನಪದ ಕತೆಗಳು ನಮಗೆ ತೆರೆದು ತೋರಿಸುತ್ತವೆ. ಉದಾಹರಣೆಗೆ ಈ ಕತೆ ನೋಡಿ.

ಒಬ್ಬ ಗುರುವಿದ್ದ. ಅವನು ಮಾಯಾ ಸಿದ್ಧಾಂತದ ಕಟ್ಟಾಪ್ರತಿಪಾದಕನಾಗಿದ್ದ. ಒಂದು ದಿನ ಬಹಳ ಚೆನ್ನಾಗಿ ಮಾತನಾಡಿ ತನ್ನ ಶಿಷ್ಯರಿಗೆಲ್ಲ ಈ ಇಡೀ ಜಗತ್ತು ಮಾಯೆ-ಮಾಯೆಯಲ್ಲದೆ ಬೇರೆ ಅಲ್ಲ- ಎಂದು ನಂಬಿಕೆ ಹುಟ್ಟಿಸಿದ. ಆಗೊಂದು ಹುಚ್ಚು ಆನೆಯು ಸಿಕ್ಕ ಸಿಕ್ಕಂತೆ ಓಡುತ್ತಾ ಆ ಗುರುಶಿಷ್ಯರು ಕುಳಿತಿದ್ದ ಕಡೆಗೇ ನುಗ್ಗಿ ಬಂತು. ಗುರುವಿಗೆ ಅಪಾಯ ಗೊತ್ತಾಗಿ ಎದ್ದು ಓಡಲು ತೊಡಗಿದ. ಶಿಷ್ಯರು 'ಗುರುಗಳೇ ಯಾಕೆ ಓಡುತ್ತೀರಿ ? ಆನೆ ಒಂದು ಮಾಯೆಯಲ್ಲವೇ' ಎಂದರು. ಅದಕ್ಕವನು 'ಹೌದು ಈಗ ನಾನು ಓಡುತ್ತಿರುವುದೂ ಒಂದು ಮಾಯೆಯೇ' ಎನ್ನುತ್ತಾ ತನ್ನ ಜೀವರಕ್ಷಣೆಗಾಗಿ ಓಡಿದ.

ಸಂಸ್ಕೃತಿಯ ಅನೇಕ ಸಮಸ್ಯಾತ್ಮಕ ವಿಚಾರಗಳೊಂದಿಗೆ ಕತೆಗಳು ಹೇಗೆ ಗುದ್ದಾಡುತ್ತವೆ, ಮತ್ತು ನಿರಕ್ಷರ, ಬಡ ಹಾಗೂ ಕೆಳವರ್ಗದವರು, ಮಹಿಳೆಯರು ಮತ್ತು ಮಕ್ಕಳು ಹೀಗೆ ಯಾರಿಗೆ ದನಿ ಇರುವುದಿಲ್ಲವೊ, ಯಾರು ಸೌಲಭ್ಯ ವಂಚಿತರೋ ಅವರಿಗೆ ಇವು ಹೇಗೆ ದನಿಯನ್ನೂ, ಶಕ್ತಿಯನ್ನೂ ನೀಡುತ್ತವೆ ಎಂಬುದಕ್ಕೆ ಅನೇಕ ಉದಾಹರಣೆಗಳನ್ನು ನೀಡಬಹುದು. ಆದರೆ ಸಂದರ್ಭಕ್ಕೆ ತಕ್ಕಂತೆ ಪ್ರಸಾರಗೊಳ್ಳುವ ಮತ್ತು ಅರ್ಥವನ್ನು ಬದಲಿಸುವ ಈ ಕಥಾಪಠ್ಯಗಳು ಹೇಳದಿರುವ ಮತ್ತು ಬಹುಶಃ ಹೇಳಲಾಗದ ಹಲವು ವಿಚಾರಗಳನ್ನು ಹೇಳುತ್ತವೆ. ಹಾಗೇ ಇವು ತಮ್ಮ ಬಗೆಗೂ ತಾವು ಮಾತನಾಡುತ್ತವೆ. ಇಂಥ ಕತೆಗಳ ಬಗೆಗಿನ ಕತೆಗಳು ಪ್ರಕಾರದ ಬಗೆಗಿನ ಚಿಂತನೆಯಲ್ಲಿ ಹಲವಾರು ಒಳನೋಟಗಳನ್ನೂ ಹೊತ್ತು ಸಾಗಿಸುತ್ತವೆ.

## ಕತೆಗಳ ಬಗೆಗಿನ ಕತೆಗಳು

ಕತೆ ಹೇಳುವವರು ಕತೆಯೊಂದಿಗೇ ಯೋಚಿಸುತ್ತಿರುತ್ತಾರೆ. ಹಾಗಾಗಿ ಅಲ್ಲಿ ಕತೆಗಳ ಕುರಿತ ಕತೆಗಳ ಮೂಲಕ ಮತ್ತು ಕತೆ ಹಾಗೂ ಅದನ್ನು ಹೇಳುವ ವಿಧಾನದ ಮೂಲಕ ಸೂಚಿತವಾಗುವ ಕಥನ ಮೀಮಾಂಸೆಯನ್ನು ಗಮನಿಸುವುದು ಮುಖ್ಯ. ಭಾಷೆಯ ಬಗೆಗಿನ ಭಾಷೆ ಇರುವಂತೆ (ಮೆಟಾಲ್ಯಾಂಗ್ವೇಜ್ ರೀತಿ) ಎಲ್ಲ ಕಲೆಗಳೂ ಸ್ವತಃ ವಸ್ತುಗಳೂ ಆಗಿರುತ್ತವೆ. ನಾಟಕದ ಬಗೆಗಿನ ನಾಟಕಗಳು (ಉದಾಹರಣೆಗೆ ಪಿರಾಂಡೆಲೊನ 'ಸಿಕ್ಸ್ ಕ್ಯಾರೆಕ್ಟರ್ಸ್ ಇನ್ ಸರ್ಚ್ ಆಫ್ ಆ್ಯನ್ ಆಥರ್' ಮತ್ತು 'ಹ್ಯಾಮ್ಲೆಟ್' ನಾಟಕದೊಳಗಿರುವ ನಾಟಕ) ಚಿತ್ರಿಸುತ್ತಿರುವ ಚಿತ್ರಕಾರನ ಬಗೆಗಿನ ಚಿತ್ರಗಳು, (ಎಶರ್‌ನ ಹ್ಯಾಂಕ್ ಡ್ರಾಯಿಂಗ್, ವೆಲಾಸ್ಕ್ವೆಜ್‌ರ ತಮ್ಮದೇ ಕನ್ನಡಿಬಿಂಬ) ಇತರ ರಾಗಗಳನ್ನು ಕುರಿತ ಸಂಗೀತರಾಗ ಮತ್ತು ಗೌರವಾರ್ಥಕ ಇಲ್ಲವೆ ವಿಡಂಬನಾರ್ಥಕವಾಗಿ ಬೇರೆ ಸಿನಿಮಾ ಬಗೆಗೆ ಉಲ್ಲೇಖಿಸುವ ಸಿನಿಮಾಗಳು (ಟ್ರುಫಾಟ್ಸ್‌ರ ಚಿತ್ರಗಳು, ಮತ್ತು ಅಲ್ಲಿನ ಹಿಚ್‌ಕಾಕ್ ಕುರಿತ ಉಲ್ಲೇಖಗಳು) ಇದೇ ರೀತಿಯಲ್ಲಿ ಮೌಖಿಕ ಪರಂಪರೆಯ ಒಂದು ಪ್ರಕಾರವಾದ ಶಾಬ್ದಿಕ ಜಾನಪದ ಕೂಡ ತನ್ನದೇ ಮೆಟಾ ಜಾನಪದವನ್ನು ಹೊಂದಿದೆ. ಗಾದೆಗಳ ಬಗೆಗಿನ ಗಾದೆಗಳು, ಜೋಕುಗಳನ್ನು ಕುರಿತ ಜೋಕುಗಳು, ಕತೆಗಳನ್ನು ಕುರಿತ ಕತೆಗಳು..... ಹೀಗೆ.

ಇಲ್ಲಿ ನಾನು ಒಂದೇ ಒಂದು ಪ್ರಕಾರದ ಬಗ್ಗೆ ಮಾತ್ರ ಗಮನ ಕೇಂದ್ರೀಕರಿಸುತ್ತೇನೆ. ದಕ್ಷಿಣ ಭಾರತದಲ್ಲಿ ಕತೆಗಳನ್ನೇ ಕುರಿತ ಕತೆಗಳನ್ನು ಹೇಳಲಾಗುತ್ತದೆ. (ಕನ್ನಡ, ತಮಿಳು ಮತ್ತು ತೆಲುಗಿನಲ್ಲಿ) ಈ ಕತೆಗಳು ಹೇಳುಗರು ಮತ್ತು ಕೇಳುಗರು ಹೇಗೆ ಕತೆಗಳ ಬಗ್ಗೆ ಯೋಚಿಸುತ್ತಾರೆ ಎಂಬುದನ್ನು ತಿಳಿಸುತ್ತವೆ. ಇದರಿಂದ ಶಿಷ್ಟ (ಲಿಖಿತ) ಪಠ್ಯಗಳ ಮೀಮಾಂಸೆಯಷ್ಟೇ ಮುಖ್ಯವಾದ ಜನಪದ ಮೀಮಾಂಸೆಯ ದೃಷ್ಟಿಕೋನವೊಂದು ದೊರೆಯುತ್ತದೆ. ಕತೆಗಳ ಬಗೆಗೆ ಅಧಿಕೃತ ವಿಮರ್ಶೆಯೊಂದು ಮಾಡಬಹುದಾದ ಕೆಲಸವನ್ನೇ ಈ ಕತೆಗಳನ್ನು ಕುರಿತ ಕತೆಗಳು ಮಾಡುತ್ತವೆ ಮತ್ತು ಇವುಗಳನ್ನು ಸರಿಗಟ್ಟುವ ಪರ್ಯಾಯ ಮತ್ತೊಂದಿಲ್ಲ. ಇಸಾಡೊರಾ ಡಂಕನ್ ಅವರ ಒಂದು ನೃತ್ಯದ ಅರ್ಥವನ್ನು ಕೇಳಿದವನಿಗೆ 'ನಾನು ಅದರ ಅರ್ಥವೇನೆಂದು ಹೇಳಬಲ್ಲೆನಾದರೆ ನಾನು ನರ್ತನವನ್ನಾದರೂ ಯಾಕೆ ಮಾಡಬೇಕು' ಎಂದು ಹೇಳಿದ ಹಾಗೆ.

'ಗೋಡೆಗಳಿಗೆ ಇದನ್ನು ಹೇಳಿ' ಕತೆಯು ಬಂಧಿಸಲ್ಪಟ್ಟ- ಸೆರೆಯಾದ ಹೆಣ್ಣಿನಿಂದ ಆರಂಭಗೊಂಡು, ಅವಳ ನಾಲ್ಕೂ ದಿಕ್ಕಿನ ಗೋಡೆಗಳು ಬಿದ್ದುಹೋದ ಮುಕ್ತಸ್ಥಿತಿಯಲ್ಲಿ ಕೊನೆಗೊಳ್ಳುತ್ತದೆ. ಇಲ್ಲಿ ಮುದುಕಿಯು ತನ್ನ ಕತೆಗಳಿಗೆ ತನ್ನ ಸಾಂಸಾರಿಕ ಗುಟ್ಟುಗಳನ್ನೂ ಹೇಳಿಕೊಳ್ಳುತ್ತಾಳೆ. ಯಾರಿಗೂ ತಿಳುವಳಿಕೆ ನೀಡಲು ಅಲ್ಲ. ತನ್ನಷ್ಟಕ್ಕೇ ತಾನು ಹಗುರವಾಗಲು. ಕತೆಯ ಕೊನೆಯಲ್ಲಿ ಅವಳ ಕ್ರೂರ ಕುಟುಂಬವು ದಯಾಪರವಾದ ಬದಲಾದ ಯಾವ ವಿಚಾರವೂ ಇಲ್ಲಿ ತಿಳಿಯುವುದಿಲ್ಲ. ಆದರೆ ಅವಳು ಮಾತ್ರ ಬದಲಾಗಿರುತ್ತಾಳೆ. ತನ್ನ ದುಃಖಗಳ ಭಾರವನ್ನೂ ಕಡಿಮೆ ಮಾಡಿಕೊಂಡಿರುತ್ತಾಳೆ.

ನಮ್ಮ ಪ್ರಾಚೀನ ಸಾಹಿತ್ಯದಲ್ಲಿ ಕೂಡ ಕತೆಗಳು ಕ್ರಿಯಾಶಾಲಿಯಾಗಿಯೇ ಹೇಳಲ್ಪಟ್ಟಿವೆ. (ಉದಾಹರಣೆಗೆ ಮಹಾಭಾರತದ ಉಪಕತೆಗಳು) ಅಂದರೆ ಅವು ಕೇವಲ ಹೇಳುವಿಕೆಗಳಲ್ಲ. ಅವು ಕ್ರಿಯೆಯ ಅವಿಭಾಜ್ಯ ಅಂಗಗಳು. ಮಹಾಭಾರತದಲ್ಲಿ ಸಾಮ್ರಾಜ್ಯವನ್ನೆಲ್ಲ ದ್ಯೂತದಲ್ಲಿ ಸೋತು ವನವಾಸದಲ್ಲಿದ್ದ ಧರ್ಮರಾಯನು ಅತ್ಯಂತ ಖಿನ್ನನಾಗಿದ್ದಾಗ ಮುನಿಯೊಬ್ಬನು ಜೂಜಿನಲ್ಲಿ ರಾಜ್ಯವನ್ನೆಲ್ಲ ಸೋತು ವನವಾಸಕ್ಕೆ ಹೋದ ನಳ ಮಹಾರಾಜನ ಕತೆಯನ್ನು ಹೇಳುತ್ತಾನೆ. ಆ ಕತೆಯ ಕೊನೆಯಲ್ಲಿ ನಳನು ಕಳೆದುಹೋದ ರಾಜ್ಯವನ್ನೂ ಹೆಂಡತಿಯನ್ನೂ ಮರಳಿ ಪಡೆಯುತ್ತಾನೆ. ಇನ್ನೂ ಮುಗಿಯದಿರುವ ತನ್ನದೇ ಕತೆಯ ಮಧ್ಯದಲ್ಲಿಯೇ ಕೇಳುಗನಾದ ಯುಧಿಷ್ಠಿರ ತನ್ನನ್ನು ತಾನು ನೋಡಿಕೊಳ್ಳುತ್ತಾನೆ. ನಳನಿಗಾದದ್ದು ತನಗೂ ಆಗಬಹುದೆಂದು ಆಶಿಸುತ್ತಾನೆ. ಕತೆ ಹೇಳುವ ಮುನಿಯು ಅವನಿಗೆ ದ್ಯೂತದಲ್ಲಿ ಗೆಲ್ಲುವ ಕಲೆ ಮತ್ತು ಶಕ್ತಿಯನ್ನೂ ನೀಡುತ್ತಾನೆ. ಹೀಗೆ ಉಪಕತೆಯು ಪ್ರಧಾನ ಕತೆಯನ್ನು ಪ್ರಭಾವಿಸುತ್ತದೆ. ಈ ಉಪಕತೆಯ ನಾಯಕ ಮಹಾಕಾವ್ಯದ ನಾಯಕನಾದ ಯುಧಿಷ್ಠಿರನಿಗೆ ಕನ್ನಡಿಯನ್ನು ಹಿಡಿಯುತ್ತಾನೆ. ಕೇಳುಗ ಇಲ್ಲಿ ಬದಲಾಗಿದ್ದಾನೆ.

ಭಾವನೆಗಳೂ ಕೂಡ ಎಷ್ಟೊಂದು ಮುಖ್ಯವಾದವು- 'ಹಗುರ ಮನಸ್ಸಿನ' ಅಥವಾ 'ಭಾರವಾದ ಮನಸ್ಸಿನ' ಎಂಬ ರೀತಿಯ ಪದನುಡಿಗಳಲ್ಲಿರುವಂತೆ, ಅಲಂಕಾರಿಕವಾಗಿ ಅಲ್ಲ ವಾಚ್ಯವಾಗಿ- ಎಂಬುದನ್ನಿಲ್ಲಿ ನಾವು ಗಮನಿಸಬೇಕು. ಕತೆಗಳು ಕನಸಿನ ಹಾಗೆ ಅಲಂಕಾರಗಳನ್ನು ವಾಚ್ಯವಾಗಿಯೇ ತೆಗೆದುಕೊಳ್ಳುತ್ತವೆ. ಈ ವಾಚ್ಯೀಕರಣವು ಕೇವಲ ಒಂದು ಭಾಷಿಕ ತಂತ್ರವಲ್ಲ. ಇದು ಚಿಂತನೆ ಮತ್ತು ಭಾವನೆಗಳೆರಡೂ ತತ್ವಗಳೇ ಎಂಬ ತಿಳುವಳಿಕೆಯದು. ಭೌತ ಮತ್ತು

ಅಭೌತ ವಸ್ತುಗಳೆರಡೂ ಒಂದೇ ಸತ್ಯದಿಂದ ಮಾಡಲ್ಪಟ್ಟಿವೆ. ಅಖಂಡತೆಯ ಭಾಗದಂತೆ; ಶರೀರ ಅಥವಾ ವಸ್ತುವು ಸ್ಥೂಲತತ್ವ, ಮನಸ್ಸಿನ ವಿಚಾರಗಳು, ಚಿಂತನೆ ಮತ್ತು ಭಾವನೆಗಳು ಸೂಕ್ಷ್ಮ ತತ್ವ. ಒಂದು ಇನ್ನೊಂದೇ ಆಗಬಹುದು ಅಥವಾ ಒಂದು ಇನ್ನೊಂದನ್ನು ಪ್ರಭಾವಿಸಬಹುದು. ಪ್ರತಿ ದಿನವೂ ತನ್ನ ಅರ್ಧ ಊಟವನ್ನು ತ್ಯಾಗ ಮಾಡುವ ಬಡಹೆಂಗಸಿನ ಕತೆ ಮತ್ತು 'ಒಂದು ಕತೆ ಮತ್ತು ಒಂದು ಹಾಡು' ಈ ಕತೆಯಲ್ಲಿ ಕತೆಗಳಿಗೆ ಮತ್ತು ಹಾಡುಗಳಿಗೆ ಏನಾಗುತ್ತದೆ ಎಂಬುದನ್ನು ನಾವು ನೋಡಬಹುದು. ವಿವರವಾಗಿ ನಾನು ಈ ಕುರಿತು ೨೫ನೇ ಅಧ್ಯಾಯದಲ್ಲಿ ಪ್ರಸ್ತಾಪಿಸಿದ್ದೇನೆ.*

## ಕೇಳುಗರು

ಮುಖಾಮುಖಿ ಸಮುದಾಯಗಳಲ್ಲಿ ರೂಪುಗೊಂಡ ಮೌಖಿಕ ಸಂಸ್ಕೃತಿಗಳಲ್ಲಿ ಹೇಳಲ್ಪಡುವ ಕತೆಗಳಿಗೆಲ್ಲ ಹೂಗುಡುವ ಕೇಳುಗನೊಬ್ಬ ಇರಲೇಬೇಕು. ತೆಲುಗು ಕತೆಯೊಂದರಲ್ಲಿ ರಾಜನೊಬ್ಬ ಕತೆ ಕೇಳಲು ತುಂಬಾ ಇಷ್ಟಪಡುತ್ತಿದ್ದ. ಒಮ್ಮೆ ಅವನಲ್ಲಿಗೆ ಒಬ್ಬ ಕ್ಷೌರಿಕ ಜಾತಿಯವನು ಕತೆ ಹೇಳಲು ಬಂದ. ರಾಜ ಸಿಂಹಾಸನದ ಮೇಲೂ ಕ್ಷೌರಿಕ ರಾಜನ ಕಾಲ ಬುಡದಲ್ಲೂ ಕುಳಿತ. ಆದರೆ ಇವನಿಗೆ ಕತೆ ಹೇಳಲು ಆಗಲೇ ಇಲ್ಲ. ರಾಜ ಯಾಕೆ ಹೀಗೆಂದು ಕೇಳಿದಾಗ 'ಸ್ವಾಮಿ ನಾನು ಕತೆ ಹೇಳುವಾಗ ಯಾವಾಗಲೂ ಸ್ವಲ್ಪ ಎತ್ತರದಲ್ಲಿ ಕೂತುಕೊಳ್ಳುತ್ತೇನೆ. ಕೇಳುವವರು ನನಗಿಂತ ಕೆಳಗೆ ಕೂರುತ್ತಾರೆ. ಆದರೆ ಈಗ ನಿಮಗಿಂತ ನಾನು ಎತ್ತರದಲ್ಲಿ ಕೂರುವಂತಿಲ್ಲ. ಅದೂ ಅಲ್ಲದೆ ಯಾರಾದರೂ ನಾನು ಕತೆ ಹೇಳುವಾಗ "ಮ್‌ಉ ಮ್‌ಉ" ಎಂದು ಹೂಂಗುಡದಿದ್ದರೆ ಕತೆ ಹೇಳಲು ಆಗುವುದೇ ಇಲ್ಲ' ಎಂದ. ಜನಸಾಮಾನ್ಯರು ಮಾಡುವಂತೆ ಈ ಕ್ಷೌರಿಕನಿಗಿಂತ ಕೆಳಗೆ ಕುಳಿತು ಹೂಂಗುಟ್ಟುತ್ತಾ ಕತೆ ಕೇಳುವುದು ರಾಜನಿಗೆ ತನ್ನ ಅಂತಸ್ತಿಗೆ ಕಡಿಮೆ ಅನ್ನಿಸಿತು. ಅದಕ್ಕೆ ರಾಜ ಇನ್ನೊಬ್ಬ ಕೆಳಜಾತಿಯವನನ್ನು ಕರೆಸಿ ಕ್ಷೌರಿಕನಿಗಿಂತ ಕೆಳಮಟ್ಟದಲ್ಲಿ ಕುಳಿತು ಹೂಂಗುಟ್ಟಲು ಆಜ್ಞಾಪಿಸಿದ. ಈಗ ಕ್ಷೌರಿಕನಿಗೆ ಕತೆ ಹೇಳಲು ಆಯಿತು. ಆದರೆ ಅವನು ಹೂಂಗುಟ್ಟುವವನಿಗೆ ಮಾತ್ರ ಕತೆಯನ್ನು ಹೇಳುತ್ತಹೋದ. ರಾಜನಿಗೆ ನಾನು ಹೊರಗೇ ಉಳಿದೆ ಅನ್ನಿಸಿತು. ಆಗ ರಾಜ 'ದೊರೆಗಳೇ ಆಗಿರಲಿ ಪ್ರಜೆಗಳೇ ಆಗಿರಲಿ ಕೇಳುವವರು ಯಾರೇ ಆಗಿರಲಿ ಕತೆ ಹೇಳುವವರೂ ಕೇಳುವರೂ ಸಮಾನವಾಗಿಯೇ ಕುಳಿತುಕೊಳ್ಳಬೇಕು, ಮೇಲಾಗಲೀ ಕೆಳಗಾಗಲೀ ಯಾರೂ ಕೂರಕೂಡದು' ಎಂದು ಹೊಸಕಾನೂನನ್ನೇ ಮಾಡಿದ. ಆಗ ಕ್ಷೌರಿಕನು ರಾಜನಿಗೆ ಆರಾಮವಾಗಿ ಕತೆಗಳನ್ನು ಹೇಳಿ ಸಂತೋಷಪಡಿಸಿದ.

ಕತೆ ಹೇಳುವಾಗ ಯಾವಾಗಲೂ ಭಾರತೀಯ ಕಥಕನಿಗೆ ಮ್‌ಉ, ಮ್‌ಉ ಎಂದು ಹೂಂಗುಡುವ ಒಬ್ಬ ಕೇಳುಗ- ತಾನು ಕತೆ ಕೇಳುತ್ತಿದ್ದೇನೆ ಎಂದು ಋಜುವಾತು ಮಾಡಲು- ಇರಲೇಬೇಕು. ಇಲ್ಲದಿದ್ದರೆ ಕತೆಗಳಿಗೆ ಓಟವೇ ಇರುವುದಿಲ್ಲ. ಕಾವ್ಯವಾಚನದಲ್ಲಿ (ಉರ್ದು ಮುಶಾಯಿರಾ ಅಥವಾ ಕಾವ್ಯೋತ್ಸವಗಳಲ್ಲಿಯಂತೆ) ಮತ್ತು ಸಂಗೀತ ಕಚೇರಿಗಳಲ್ಲಿ ಶ್ರೋತೃಗಳು

---

* ೨೫ನೇ ಅಧ್ಯಾಯ- Towards a Counter System- Women's Tale ನೋಡಿ

ಸುಮ್ಮನೆ ಕೂತಿರುವುದಿಲ್ಲ. ತಲೆ ಅಲ್ಲಾಡಿಸುತ್ತಲೋ, ಬೆರಳುಗಳಿಂದ ಗತಿ ಹಿಡಿಯುತ್ತಲೋ ಅಥವಾ ಪ್ರಶಂಸೆಗಾಗಿ ವಾಹವಾಹ್ ಎನ್ನುತ್ತಲೋ ಇರುತ್ತಾರೆ. ಮೇಲಿನ ಕತೆಯಲ್ಲಿನಂತೆ ಕೇಳುಗನು ಆ ಕ್ಷಣಕ್ಕೆ ಹೇಳುಗನಿಗಿಂತ ಅಂತಸ್ತಿನಲ್ಲಿ ಕೆಳಗಿರುತ್ತಾನೆ. ಆಹಾರವಾಗಲೀ, ಜ್ಞಾನವಾಗಲೀ, ಕತೆಯಾಗಲೀ ಏನೇ ಆಗಲೀ ನೀಡುವವನು ಪಡೆಯುವವನಿಗಿಂತ ಯಾವಾಗಲೂ ಎತ್ತರದಲ್ಲಿಯೇ ಇರುತ್ತಾನೆ.

ಕೆಲವೊಮ್ಮೆ ಕತೆಯು ಕೇಳುಗನನ್ನು ಹುಡುಕಿಕೊಂಡು ಹೋಗುತ್ತದೆ. ಆಚರಣೆಯ ಕತೆಯಾದ ವ್ರತಕತೆಯಲ್ಲಿ ಕತೆಯು ಆಚರಣೆಯದೇ ಒಂದು ಭಾಗ. ಇಂಥ ಕತೆಗಳು ಯಾವಾಗಲೂ ಆಚರಣೆ ಮತ್ತು ಅದರಿಂದ ಆಗುವ ಪ್ರಯೋಜನಗಳನ್ನು ವಿವರಿಸುತ್ತವೆ. ಇಲ್ಲಿ ಆಚರಣೆಯು ಕತೆಯ ಒಂದು ಭಾಗವಾಗಿಯೂ ಕತೆಯು ಆಚರಣೆಯ ಒಂದು ಭಾಗವಾಗಿಯೂ ಇರುತ್ತದೆ. ಇದನ್ನು ಆಚರಿಸುವ ದಿನ ಯಾರಾದರೂ ಕೇಳುವವರಿಗೆ ಕತೆಯನ್ನು ಹೇಳಲೇಬೇಕಾದ್ದು ಕಡ್ಡಾಯ. ಸಾಮಾನ್ಯವಾಗಿ ಕುಟುಂಬ ಮತ್ತು ನೆರೆ ಹೊರೆಯವರೆಲ್ಲರೂ ಇದನ್ನು ಕೇಳಲು ನೆರೆಯುತ್ತಾರೆ. ಆದರೆ ಈ ಮುಂದಿನ ತೆಲುಗು ವ್ರತಕತೆಯಲ್ಲಿ ಒಬ್ಬ ಅಜ್ಜಿಯ ಕತೆಯು ಕೇಳುಗರಿಗಾಗಿ ಹುಡುಕಿಕೊಂಡು ಹೋಗುತ್ತದೆ.

## ಶ್ರೋತೃವಿನ ಹುಡುಕಾಟಕ್ಕೆ ಹೊರಟ ಕತೆ

ಒಮ್ಮೆ ಮಾಘಮಾಸದ ಏಳನೇ ದಿನವಾದ ರಥಸಪ್ತಮಿಯಂದು ಊರಿನ ಬೀದಿಗಳಲ್ಲಿ ದೇವಸ್ಥಾನ ರಥವನ್ನು ಮೆರವಣಿಗೆ ಹೊರಡಿಸಿದರು. ಒಬ್ಬ ವಯಸ್ಸಾದ ಮುದುಕಿಯು ಅಡಿಯಿಂದ ಮುಡಿಯವರೆಗೆ ಸ್ನಾನ ಮಡಿ ಮಾಡಿಕೊಂಡು ಪೂಜೆ ಮಾಡಿದಳು. ಆ ಮಾಘ ಮಾಸದ ಭಾನುವಾರ ಅವಳು ಯಾರಿಗಾದರೂ ಸೂರ್ಯದೇವನ ಕತೆಯನ್ನು ಹೇಳಲೇಬೇಕಾಗಿತ್ತು. ಅದು ಆವತ್ತಿನ ಅವಳ ಆಚರಣೆಯ ಒಂದು ಭಾಗವಾಗಿತ್ತು. ಒಂದು ಹಿಡಿ ಅಕ್ಷತೆ ಕಾಳನ್ನು ಹಿಡಿದುಕೊಂಡು ಯಾರಾದರೂ ಸಿಕ್ಕರೆ ಅವರಿಗೆ ಅಕ್ಷತೆ ಕೊಟ್ಟು ಕತೆ ಹೇಳಬೇಕೆಂದು ಮುದುಕಿ ಹೊರಟಳು. ಆದರೆ ಯಾರಿಗೂ ಕತೆ ಕೇಳಲು ಬಿಡುವೇ ಇರಲಿಲ್ಲ.

ಅವಳ ಮಕ್ಕಳು ತಮ್ಮ ಪ್ರಾಂತದ ಅರಸನ ಆಸ್ಥಾನಕ್ಕೆ ಹೋಗುವ ಅವಸರದಲ್ಲಿ ಇದ್ದರು. ಈಗಾಗಲೇ ತಡವಾಗಿದ್ದರಿಂದ ಮತ್ತೂ ತಡಮಾಡಿ ಅವರು ರಾಜನಿಂದ ಬೈಸಿಕೊಳ್ಳಲು ಸಿದ್ಧರಿರಲಿಲ್ಲ. ಅವಳ ಮಕ್ಕಳು ಕತೆ ಕೇಳಲು ನಿರಾಕರಿಸಿದಾಗ ಅಜ್ಜಿಯು ಮೊಮ್ಮಕ್ಕಳನ್ನು ಹುಡುಕಿಕೊಂಡು ಹೊರಟಳು. ಅವರಿಗೆ ಶಾಲೆಗೆ ಹೋಗಲು ಸಮಯ ಆಗಿದ್ದರಿಂದ ಅವರೂ ಕತೆ ಕೇಳಲು ಸಮಯವಿಲ್ಲವೆಂದು ಹೇಳಿ ಹೊರಟುಹೋದರು. ಆಮೇಲೆ ಅಜ್ಜಿಯು ತನ್ನ ಸೊಸೆಯ ಹತ್ತಿರ ಹೋದಳು. ಆಗ ಸೊಸೆಯು ನನ್ನ ಮಗುವಿಗೆ ಹಾಲು ಕುಡಿಸುತ್ತಾ ಇದ್ದೀನಿ ಈಗ ಕತೆ ಕೇಳೋಕೆ ಆಗಲ್ಲ ಅಂದುಬಿಟ್ಟಳು.

ಆಗ ಆ ಅಜ್ಜಿಯು ಮನೆಯಿಂದ ಹೊರಗೆ ಹೊರಟು ನದೀದಡದಲ್ಲಿ ಬಟ್ಟೆ ಒಗೆಯುತ್ತಿದ್ದ ಹೆಂಗಸರನ್ನು ತನ್ನ ರವಿವಾರದ ಕತೆಗಳಿಗೆ ಕಿವಿಕೊಡಲು ಕೇಳಿದಳು. ಅವರು ಆಗತಾನೆ ಬಟ್ಟೆ ಒಗೆಯುವುದನ್ನು ಮುಗಿಸಿ ಮನೆಗೆ ಹೋಗುವ ಆತುರದಲ್ಲಿ ಇದ್ದುದರಿಂದ ಅವರೂ ಕತೆ ಕೇಳಲು ಪುರಸೊತ್ತಿಲ್ಲವೆಂದರು. ಎಲ್ಲಿಗೆ ಹೋದರೂ ಯಾರನ್ನು ಕೇಳಿದರೂ ಕತೆ ಕೇಳಲು

ಒಬ್ಬರೂ ಸಿಗಲಿಲ್ಲ. ಬ್ರಾಹ್ಮಣರು, ಬಡಗಿಗಳು ಬುಟ್ಟಿ ಹೆಣೆಯುವವರು, ಅಗಸರು, ಕುಂಬಾರರು ಯಾರೊಬ್ಬರೂ ಅವಳ ಕತೆ ಕೇಳಲು ಕೆಲವು ನಿಮಿಷಗಳಷ್ಟಾದರೂ ಪುರಸೊತ್ತು ಮಾಡಿಕೊಳ್ಳಲಿಲ್ಲ.

ಪರಿಣಾಮವಾಗಿ ಇವಳ ಕತೆ ಕೇಳಲು ನಿರಾಕರಿಸಿದವರೆಲ್ಲ ಒಂದಲ್ಲ ಒಂದು ಕಷ್ಟ ಅನುಭವಿಸಿದರು. ಅವಳ ಮಕ್ಕಳಿಗೆ ರಾಜನ ಆಸ್ಥಾನದಲ್ಲಿ ಶಿಕ್ಷೆಯಾಯಿತು. ಸೊಸೆಯ ಮಗುವಿಗೆ ಇದ್ದಕ್ಕಿದ್ದಂತೆ ಖಾಯಿಲೆಯಾಯಿತು. ಮೊಮ್ಮಕ್ಕಳು ಶಾಲೆಯಲ್ಲಿ ಮೇಷ್ಟ್ರುಗಳಿಂದ ಚೆನ್ನಾಗಿ ಒದೆ ತಿಂದರು. ಬಟ್ಟೆ ಒಗೆಯುತ್ತಿದ್ದ ಹೆಂಗಸರು ತಮ್ಮ ಅತ್ತೆಯರ ಕೈಯಲ್ಲಿ ಬೈಸಿಕೊಂಡರು. ಬ್ರಾಹ್ಮಣನಿಗೆ ಅವತ್ತು ಯಾರೂ ಅನ್ನ ಹಾಕುವವರೇ ಸಿಗಲಿಲ್ಲ. ವಿನಾಕಾರಣ ಬುಟ್ಟಿ ಹೆಣೆಯುವವರ ಕೈಗಳಿಗೆ ಸಿಬಿರುಗಳು ಹೆಟ್ಟಿಕೊಂಡವು ಮತ್ತು ಅವತ್ತೆಲ್ಲಾ ಪ್ರಯತ್ನಪಟ್ಟರೂ ಕುಂಬಾರರಿಗೆ ತಿಗರಿಯಲ್ಲಿ ಸರಿಯಾಗಿ ಮಡಕೆಯನ್ನೇ ಮಾಡಲಾಗಲಿಲ್ಲ.

ಮುದುಕಿಗೆ ಇದ್ಯಾವುದೂ ಗೊತ್ತೇ ಇಲ್ಲ. ತನ್ನ ಕತೆ ಕೇಳಲು ಯಾರೂ ಸಿಗಲಿಲ್ಲವಲ್ಲ ಎಂದು ದುಃಖವಾದರೂ ಅವಳು ತಾಳ್ಮೆಯಿಂದಲೇ ಹುಡುಕುತ್ತ ಹೊರಟಳು. ಹಿಂದಿನ ಬೀದಿಗಳಿಗೆ ಹೋದ ಅಜ್ಜಿ ಅಲ್ಲೊಬ್ಬ ಬಸುರಿ ಹೆಂಗಸನ್ನು ಕಂಡಳು. ಉಪ್ಪು ಮಾರುವ ಉಪ್ಪಾರ ಜಾತಿಯ ಆ ಬಡ ಹೆಂಗಸು ಅಜ್ಜಿಯ ಕತೆ ಕೇಳಲು ಒಪ್ಪಿದಳಾದರೂ 'ನನಗೆ ತುಂಬಾ ಹಸಿವಾಗಿದೆ. ಹಾಲು ಬೆಲ್ಲ ಒಂದು ತಪ್ಪಲೆ ತುಂಬಾ ಅಕ್ಕಿ ಪಾಯಸ ಮಾಡಿ ತಂದರೆ ಉಂಡು, ಹಸಿವು ನಿವಾರಿಸಿಕೊಂಡು ನಿನ್ನ ಕತೆ ಕೇಳುತ್ತೇನೆ' ಅಂದಳು. ಅಜ್ಜಿಯು ಮನೆಗೆ ಹೋಗಿ ಒಂದು ಭರ್ತಿ ಪಾತ್ರೆ ಅಕ್ಕಿ ಪಾಯಸ ಮಾಡಿ ತಂದಳು. ಆ ಬಸುರಿ ಹೆಂಗಸು ತುಂಬಾ ಸಂತೋಷದಿಂದ ಅದನ್ನೆಲ್ಲಾ ತಿಂದಳು. ಆದರೆ ಅಜ್ಜಿ ಕತೆ ಹೇಳುವ ಹೊತ್ತಿಗೆ ಆಯಾಸದಿಂದ ನಿದ್ರೆ ಹೋಗಿಬಿಟ್ಟಳು. ಹೊರಲೋಕದ ಪರಿವೆಯೇ ಇಲ್ಲದ ಹಾಗೆ ನಿದ್ದೆ ಹೋಗುತ್ತಿದ್ದ ಆ ಹೆಂಗಸಿನ ಹತ್ತಿರವೇ ಅಜ್ಜಿಯು ತನ್ನ ಕತೆ ಕೇಳಲು ಈ ಹೆಂಗಸು ಈಗ ಎದ್ದಾಳು, ಆಗ ಎದ್ದಾಳು ಎಂದು ಕಾಯುತ್ತಾ ಕೂತಳು. ಆಗ ಇದ್ದಕ್ಕಿದ್ದಂತೆ ಬಸುರಿ ಹೆಂಗಸಿನ ಹೊಟ್ಟೆಯೊಳಗಿಂದ ಮಗು ಮಾತನಾಡಿ 'ಅಜ್ಜಿ ನೀನು ನನಗೇ ಯಾಕೆ ಕತೆ ಹೇಳಬಾರದು? ಹೇಳು ನಾನೇ ಕೇಳ್ತೀನಿ. ನಮ್ಮಮ್ಮನ ಹೊಕ್ಕಳ ಮೇಲೆ ಅಕ್ಕಿ ಕಾಳು ಹಾಕಿ ನನಗೇ ಕತೆಹೇಳು' ಅಂದಿತು. ಅಜ್ಜಿಗೆ ಪರಮಾನಂದವಾಯಿತು. ಅವಳು ಮಲಗಿದ ಬಸುರಿ ಹೆಂಗಸಿನ ಹೊಕ್ಕಳಿಗೆ ಮೆಲ್ಲಗೆ ಅಕ್ಷತೆ ಕಾಳು ತುಂಬಿದಳು. ಆ ಮಾಘಮಾಸದ ರವಿವಾರದ ಕತೆಯನ್ನು ಅವಳ ತುಂಬಿದ ಹೊಟ್ಟೆಗೆ- ಅದರೊಳಗಿನ ಶಿಶುವಿಗೆ ಹೇಳುತ್ತಾ ಹೋದಳು. ಕತೆ ಮುಗಿದ ಮೇಲೆ ಅಜ್ಜಿ ಲಾಲಿ ಹಾಡಿದಳು.

ನೀನೆಲ್ಲೇ ಹೋಗಲಿ ಕಂದಾ
ಮರುಭೂಮಿಯಂಥಾ ಹಳ್ಳಿಗಳೆಲ್ಲಾ ಸಿರಿಯುಳ್ಳ ಪಟ್ಟಣಗಳಾಗಲೀ
ಒಣಗಿದ ಹತ್ತಿ ಬೀಜಗಳೆಲ್ಲಾ ಅರಳಿ ಮುತ್ತುಗಳೇ ಆಗಲೀ
ನೀನೆಲ್ಲೇ ಹೋಗಲಿ ಕಂದಾ
ಒಣಗಿದ ಮರಗಳೆಲ್ಲಾ ಚಿಗುರಿ ಹಣ್ಣುಗಳಾ ಬಿಡಲೀ
ಗೊಡ್ಡುಗಳು ಕರೆಯಲೀ ಬಂಜೆಯರು ಹೆರಲೀ
ನೀನೆಲ್ಲೇ ಹೋಗಲಿ ಕಂದಾ

ಕಳೆದ ಚಿನ್ನ ವಜ್ರಗಳೆಲ್ಲಾ ಮರಳಿ ಸಿಗಲೀ
ಸತ್ತ ಜನರೆಲ್ಲಾ ಮತ್ತೆ ಬದುಕಿದ್ದು ಬರಲೀ

ಓ ನನ್ನ ಕಂದಾ ನಿನಗಿಂಥಾ ಶಕ್ತಿಗಳು ಬರಲೀ
ರಾಜನನ್ನೇ ಮನಕರಗಿಸುವಂಥಾ ಶಕ್ತಿ ಬರಲೀ."

ಅಜ್ಜಿಯು ಜೋಗುಳವನ್ನು ಮುಗಿಸುವ ಹೊತ್ತಿಗೆ ಸರಿಯಾಗಿ ಆ ಉಪ್ಪಾರ ಹೆಂಗಸು ನಿದ್ರೆಯಿಂದ ಎಚ್ಚೆತ್ತಳು. 'ಕತೆ ಹೇಳಜ್ಜಿ' ಎಂದಳು. 'ನಿನ್ನ ಹೊಟ್ಟೇಲಿರೊ ಮಗೂಗೆ ನನ್ನ ಕತೆ ಹೇಳಿದ್ದೀನಿ. ಅದಕ್ಕೆ ಒಳ್ಳೇದಾಗುತ್ತೆ. ಮಗು ಹುಟ್ಟಿದ ಮೇಲೆ ನನಗೆ ಅದು ಗಂಡೋ ಹೆಣ್ಣೋ ಅಂತ ಹೇಳಿ ಕಳಿಸು' ಎಂದು ಹೇಳಿ ಅಜ್ಜಿ ಮನೆಗೆ ಹೋದಳು.

ಸ್ವಲ್ಪ ದಿನಗಳ ನಂತರ ಆ ಉಪ್ಪಾರ ಹೆಂಗಸಿಗೆ ಹೆಣ್ಣು ಮಗು ಆಯಿತೆಂದು ಅಜ್ಜಿಗೆ ತಿಳಿಯಿತು. ಕೂಡಲೇ ಅಜ್ಜಿಯು ಒಂದು ಸೀರೆ, ಒಂದು ಮುಳ್ಳೆ ಹರಳೆಣ್ಣೆ ತೆಗೆದುಕೊಂಡು ಉಪ್ಪಾರ ಬೀದಿಗೆ ಹೋದಳು. ಪಕ್ಕದ ಕಾಡಿನಲ್ಲಿ ಮಗುವಿಗೆ ಸೀರೆಯಿಂದ ಮರದ ಕೊಂಬೆಗೆ ಜೋಲಿಕಟ್ಟಿ ಮರಕ್ಕೆ ತೊಟ್ಟಿಲಿನ ಹಾಗೆ ತೂಗಲು ಹೇಳಿ ಹಕ್ಕಿ ಪಕ್ಷಿಗಳಿಗೆ ಜೋಗುಳದಂತೆ ಹಾಡಲು ಹೇಳಿದಳು. ಹಗಲಿನ ಹೊತ್ತು ಉಪ್ಪಾರ ಹೆಂಗಸು ಮಗುವನ್ನು ಮರಗಿಡಗಳೂ ಹಕ್ಕಿ ಪಕ್ಷಿಗಳಿಗೂ ವಹಿಸಿ ಕೂಲಿನಾಲಿಗೆ ಹೋಗಲು ಅನುಕೂಲವಾಯಿತು. ಆಮೇಲೆ ಮುದುಕಿಯೂ ತನ್ನ ಮನೆಗೆ ಹೋದಳು.

ಒಂದು ದಿನ ನಡು ಮಧ್ಯಾಹ್ನ ಆ ದೇಶದ ದೊರೆ ಕಾಡಿನ ದಾರಿಯಲ್ಲಿ ಹೋಗುತ್ತಿದ್ದಾಗ, ಅವನಿಗೆ ಸಣ್ಣ ಮಗುವೊಂದು ಅಳುವುದೂ ಹಕ್ಕಿ ಪಕ್ಷಿಗಳು ಹಾಡುವುದೂ ಕೇಳಿಸಿತು. ದೊರೆಯು ಅಲ್ಲೆಲ್ಲಾ ಹುಡುಕಿ ಆ ಸೀರೆಯ ಜೋಲಿಯಲ್ಲಿದ್ದ ಮಗುವನ್ನೂ ಅದರ ಸುತ್ತ ಅಜ್ಜಿ ಹೇಳಿದ ಲಾಲಿ ಹಾಡುತ್ತಿದ್ದ ಹಕ್ಕಿಗಳನ್ನೂ ಕಂಡ. ಆ ಹಕ್ಕಿಗಳು ರಾಜನಿಗೆ 'ಈ ಮಗು ನಿನ್ನ ಹೆಂಡತಿಯಾಗುವವಳು- ನಮಗೆಲ್ಲಾ ತಾಯಿ, ಇವಳನ್ನು ಮನೆಗೆ ತೆಗೆದುಕೊಂಡು ಹೋಗು- ಬೆಳೆದ ಮೇಲೆ ಮದುವೆಯಾಗು' ಎಂದು ಹೇಳಿದವು.

ಆಗ ರಾಜನು ಆ ಮಗುವನ್ನು ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ಹೊರಟ. ದಾರಿಯಲ್ಲಿ ಒಂದು ಬರಡಾದ ಹಳ್ಳಿಯನ್ನು ಹಾದು ಹೋದಾಗ ಅದು ಸುಂದರವಾದ ಪಟ್ಟಣವಾಯಿತು. ಹಾಗೇ ಮುಂದೆ ಹೋಗಿ ಒಂದು ಹತ್ತಿಯ ಹೊಲದಲ್ಲಿ ಬಿಡಾರ ಮಾಡಿದರು. ಅಲ್ಲಿದ್ದ ಎಲ್ಲ ಹತ್ತಿ ಬೀಜಗಳೂ ಮುತ್ತುಗಳಾದವು. ಅವರು ಹೋದ ಹಳ್ಳಿಗಳಲ್ಲಿ ಮುದಿ ಹಸುಗಳು ಹಾಲು ಕರೆದವು- ಒಣಗಿದ ಮರಗಳು ಚಿಗುರಿ ಹಣ್ಣು ಬಿಟ್ಟವು. ಅರಮನೆಗೆ ಹೋದನಂತರ ಬಂಜೆಯಾಗಿದ್ದ ರಾಣಿ ಆ ವರ್ಷ ಮಗುವನ್ನೂ ಹೆತ್ತಳು.

ಆ ಉಪ್ಪಾರ ಹುಡುಗಿ ಅರಮನೆಯಲ್ಲಿ ಬೆಳೀತಾ ಬೆಳೀತಾ ರಾಜನ ಶ್ರೀಮಂತಿಕೆ- ಸಂಪತ್ತೂ ಬೆಳೀತಾ ಹೋಯ್ತು. ಅವಳು ದೊಡ್ಡವಳಾದ ಮೇಲೆ ರಾಜ ಅವಳನ್ನು ಮದುವೆಯಾದ. ನೀವೆಲ್ಲಾ ಊಹಿಸುವಂತೆ ದೊಡ್ಡರಾಣಿಗೆ ಈ ಚಿಕ್ಕ ಸುಂದರಿ ರಾಣಿಗೆ ರಾಜ ನೀಡುವ ಪ್ರೀತಿ ಕಂಡು ಅಸೂಯೆ ಆಯ್ತು. ಇವಳು ಯಾವಳೋ ಎಲ್ಲಿಂದಲೋ ಬಂದವಳು ನನಗಿಂತಲೂ ಹೆಚ್ಚಾದಳಲ್ಲ! ಅಂದುಕೊಂಡಳು. ಒಂದು ದಿನ ಕಿರಿರಾಣಿಯ

ಮೇಲಿನ ದ್ವೇಷದಿಂದ ಅರಮನೆಯಲ್ಲಿದ್ದ ಚಿನ್ನ ಆಭರಣಗಳನ್ನೆಲ್ಲ ಒಂದು ಗಂಟುಕಟ್ಟಿ ಸಮುದ್ರಕ್ಕೆ ಎಸೆದಳು.

ಒಂದು ದಿನ ಒಬ್ಬ ಬೆಸ್ತ ಒಂದು ದೊಡ್ಡ ಮೀನನ್ನು ಹಿಡಿದು ಹಿರಿರಾಣಿಗೆ ಕೊಡಲು ಬಂದ. ಅವಳು ಮೂಗುಮುಚ್ಚಿಕೊಂಡು 'ಇದೇನು ಗಬ್ಬುವಾಸನೆ ಈ ಮೀನು ನನಗೆ ಬೇಡ, ಕಿರಿರಾಣಿಗೆ ಕೊಡುಹೋಗು' ಎಂದಳು. ಆ ಮೀನನ್ನು ನೋಡಿ ಖುಷಿಗೊಂಡ ಕಿರಿರಾಣಿ ಮೀನಿನಡುಗೆ ಮಾಡಿಸಲು ತಾನೇ ಖುದ್ದು ನಿಂತಳು. ಅಡಿಗೆಯವರು ಆ ಮೀನನ್ನು ಕುಯ್ದಾಗ ಅದರ ಹೊಟ್ಟೆಯಲ್ಲಿ ಹಿರಿರಾಣಿ ಎಸೆದಿದ್ದ ಒಡವೆಗಳ ಗಂಟು ಸಿಕ್ಕಿತು. ರಾಜ ಇದನ್ನು ಕೇಳಿ- ಹಕ್ಕಿಪಕ್ಷಿಗಳು ಕಾಡಿನಲ್ಲಿ ಇವಳು ಮಗುವಾಗಿದ್ದಾಗ ಹಾಡಿದ ಜೋಗುಳದ ವಿಷಯಗಳನ್ನು ಜ್ಞಾಪಿಸಿಕೊಂಡ- ಎಲ್ಲವೂ ಒಂದೊಂದೇ ನಿಜವಾಗುತ್ತಿದೆಯಲ್ಲಾ ಅಂತ ಆಶ್ಚರ್ಯಪಟ್ಟ. ಬರಡಾದ ಹಳ್ಳಿಗಳು ಪಟ್ಟಣಗಳಾಗಿದ್ದವು. ಹತ್ತಿ ಬೀಜಗಳು ಮುತ್ತಾಗಿದ್ದವು. ಮುದಿ ಹಸುಗಳು ಹಾಲು ಕರೆದಿದ್ದವು. ಒಣಗಿದ ಮರಗಳು ಹಣ್ಣು ಬಿಟ್ಟಿದ್ದವು. ಈಗ ಕಳೆದು ಹೋಗಿದ್ದ ಚಿನ್ನಾಭರಣಗಳು ಮರಳಿ ಸಿಕ್ಕಿದ್ದಾವೆ. ಇನ್ನೊಂದೇ ಒಂದು ಆಗಬೇಕು. ಸತ್ತಿರುವವರನ್ನು ಬದುಕಿಸುವ ಶಕ್ತಿ ಇವಳಿಗಿದೆಯಾ ಪರೀಕ್ಷಿಸಬೇಕು ಅಂದುಕೊಂಡ. ಅವತ್ತು ರಾತ್ರಿ ಕಿರಿರಾಣಿ ಹತ್ತಿರ ಊಟ ಮಾಡಿ ಹಿರಿರಾಣಿಯ ಮಂಚದಲ್ಲಿ ಮಲಗಿದ. ಮಲಗುವ ಮುಂಚೆ ಗುಟ್ಟಾಗಿ ವಿಷ ಕುಡಿದು ಮಲಗಿ- ಸತ್ತ.

ಗಾಭರಿಗೊಂಡ ಹಿರಿಹೆಂಡತಿ ಗಂಡನ ಚಿತೆಯಲ್ಲಿ ಸತಿ ಹೋಗಲು ಕಿರಿರಾಣಿಗೆ ಹೇಳಿ ಕಳಿಸಿದಳು. ದೇಹವನ್ನು ಚಿತೆಗೇರಿಸಲು ಸಿದ್ಧಗೊಳಿಸಿದಾಗ ಕಿರಿಯಳೂ ಗಂಡನ ಸಾವಿನೊಂದಿಗೆ ಪಾಲ್ಗೊಳ್ಳಲು ಸಿದ್ಧವಾದಳು. ಆಗ ಒಬ್ಬ ಬ್ರಾಹ್ಮಣ ಕಿರಿರಾಣಿಯ ಹತ್ತಿರ ಬಂದು ಕಾಲು ತೊಳೆಯಲು ಸ್ವಲ್ಪ ನೀರು ಕೇಳಿದ. ಅವಳಿಗೂ ತನ್ನ ಕಾಲು ತೊಳೆದುಕೊಳ್ಳಲು ಹೇಳಿದ. ಆಮೇಲೆ ಕುಡಿಯಲು ಸ್ವಲ್ಪ ನೀರು ಕೇಳಿದ. ಅವಳಿಗೂ ಸ್ವಲ್ಪ ನೀರು ಕುಡಿಯಲು ಹೇಳಿದ. ತಾನು ಸ್ನಾನ ಮಾಡಲು ಅಣಿ ಮಾಡಿಕೊಡಬೇಕೆಂದು ಕೇಳಿದ. ಹಾಗೇ ಅವಳಿಗೂ ಸ್ನಾನ ಮಾಡಲು ಹೇಳಿದ. ಮೈಗೆ ಹಚ್ಚಿಕೊಳ್ಳಲು ಗಂಧ ಕೇಳಿದ. ಹಾಗೇ ಅವಳಿಗೂ ಮೈಗೆ ಅರಿಶಿಣ ಹಚ್ಚಿಕೊಳ್ಳಲು ಹೇಳಿದ. ಆಮೇಲೆ ಸ್ವಲ್ಪ ಕುಂಕುಮ ತೆಗೆದುಕೊಂಡು ಹಣೆಗೆ ಇಟ್ಟುಕೊಂಡ, ಅವಳಿಗೂ ಹಣೆಗೆ ಕುಂಕುಮ ಇಟ್ಟುಕೊಳ್ಳಲು ಹೇಳಿದ. ಆಮೇಲೆ ಊಟ ಬಡಿಸು ಎಂದು ಅವಳಿಗೂ ಊಟ ಮಾಡಲು ಹೇಳಿದ. ಊಟ ಆದ ಮೇಲೆ ಅಡಕೆ ಎಲೆ ಹಾಕಲು ಕೇಳಿ ಅವಳಿಗೂ ಹಾಕಲು ಹೇಳಿದ. ಹೀಗೆ ಅವಳಿಗೆ ಎಲ್ಲವನ್ನೂ ಮಾಡಲು ಹೇಳಿ ತಾನೂ ಬ್ರಾಹ್ಮಣರ ಹಾಗೆ ಎಲ್ಲವನ್ನೂ ಮಾಡಿದ. ಈ ಉದ್ದಕ್ಕೂ ಕಿರಿರಾಣಿಯು ತನ್ನ ಗಂಡನ ಚಿತೆಗೆ ಹೋಗುವ ಅವಸರದಲ್ಲಿಯೇ ಇದ್ದಳು. ಆದರೆ ತಾನು ಹೇಳಿದ್ದೆಲ್ಲಾ ಮಾಡುವವರೆಗೆ ಆ ಬ್ರಾಹ್ಮಣ ಅವಳನ್ನು ಹೋಗಲು ಬಿಡಲಿಲ್ಲ. ಕೊನೆಯಲ್ಲಿ, ಆಕೆ ಅವಳನ್ನು 'ನೀನು ಯಾರು' ಎಂದು ಕೇಳಿದಳು. 'ನಾನು ಆದಿನಾರಾಯಣ. ನೀನು ಹುಟ್ಟುವ ಮೊದಲೇ ನಿನ್ನಮ್ಮನ ಹೊಟ್ಟೆಯಲ್ಲಿದ್ದಾಗ ಅಜ್ಜಿ ಕತೆ ಹೇಳಿದ್ದಳಲ್ಲ, ಆ ಸೂರ್ಯದೇವ ನಾನು' ಎಂದ. ಒಂದಿಷ್ಟು ಅಕ್ಷತೆ ಕಾಳುಗಳನ್ನು ಅವಳಿಗೆ ಕೊಟ್ಟು 'ಇವನ್ನು ನಿನ್ನ ಗಂಡನ ಕಳೇಬರದ ಮೇಲೆ ಹಾಕು' ಎಂದು ಹೇಳಿ ಮಾಯವಾದ.

ಕಿರಿರಾಣಿಯು ಅಕ್ಷತೆ ಹಿಡಿದುಕೊಂಡು ಸ್ಮಶಾನಕ್ಕೆ ಓಡಿದಳು. ಎಲ್ಲರೂ ಅವಳಿಗಾಗಿಯೇ

ಕಾಯುತ್ತಿದ್ದರು. ಅವಳು ಕೂಡಲೇ ಗಂಡನ ಕಳೇಬರದ ಹತ್ತಿರ ಹೋಗಿ ಅಕ್ಷತೆ ಕಾಳುಗಳನ್ನು ಎಸೆದಳು. ರಾಜ ಮಲಗಿದ್ದವನು ಹಾಸಿಗೆಯಿಂದ ಏಳುವಂತೆ ಸುಡಲು ಒಟ್ಟಿದ್ದ ಸೌದೆಗಳ ಮೇಲಿನಿಂದ ಎದ್ದುಕುಳಿತ. ರಾಜನೂ ಅಲ್ಲಿದ್ದ ಎಲ್ಲರೂ 'ನಿನಗೆ ಇಂಥಾ ಶಕ್ತಿ ಎಲ್ಲಿಂದ ಬಂತು?' ಎಂದು ಕೇಳಿದಾಗ ಅವಳು ನಾನು ಹುಟ್ಟುವ ಮೊದಲೇ, ಅಮ್ಮನ ಹೊಟ್ಟೆಯಲ್ಲಿದ್ದಾಗಲೇ ಮಾಘಮಾಸದ ರವಿವಾರದ ಕತೆಯನ್ನು ಕೇಳಿದ್ದರಿಂದ ನನಗೆ ಈ ಎಲ್ಲ ಮಾಂತ್ರಿಕ ಶಕ್ತಿಗಳು ಬಂದವು' ಎಂದು ಹೇಳಿದಳು.

ರಾಜನಿಗೆ ಆಶ್ಚರ್ಯವಾಯಿತು. ಕೇವಲ ಕತೆ ಕೇಳುವುದರಿಂದಲೇ ಇಷ್ಟೆಲ್ಲಾ ಮಾಡಬಹುದಾದರೆ ಇನ್ನು ಕತೆ ಕೇಳುವ ವ್ರತವನ್ನೇ ಮಾಡಿದರೆ (ವ್ರತಕತೆ) ಇನ್ನೆಷ್ಟು ಶಕ್ತಿ ಸಾಮರ್ಥ್ಯಗಳು ಬರಬಹುದು ಎಂದುಕೊಂಡು ತನ್ನ ಹಿರಿರಾಣಿಗೆ ವ್ರತಕತೆಯ ಆಚರಣೆಗೆ ಎಲ್ಲ ಅಣಿ ಮಾಡಲು ಆಜ್ಞಾಪಿಸಿದ. ಅವತ್ತು ಆ ರಾಣಿ ಮಾಡಿದ ವ್ರತವನ್ನೇ ಇವತ್ತು ಇಂಥಾ ಕಲಿಯುಗದಲ್ಲೂ ಮೇಲ್ಜಾತಿಯವರೆಲ್ಲಾ ಮಾಡ್ತಾ ಇದ್ದಾರೆ.

ಇಲ್ಲಿ ಅಜ್ಜಿಯು ಮೊದಲು ತನ್ನ ಕುಟುಂಬದಿಂದ ಆರಂಭಿಸುತ್ತಾಳೆ ಎಂಬುದನ್ನು ನಾವು ಗಮನಿಸಬೇಕು. ಮಕ್ಕಳು, ಮೊಮ್ಮಕ್ಕಳು, ಸೊಸೆ ಆನಂತರ ಕುಟುಂಬದಾಚೆ ನದೀ ತೀರದಲ್ಲಿ ಬಟ್ಟೆ ಒಗೆಯುವ ಹೆಂಗಸರು ಆಮೇಲೆ ಮೇಲ್ಜಾತಿಯ ಬ್ರಾಹ್ಮಣರನ್ನೂ ಆಮೇಲೆ ಕೆಳಜಾತಿಯ ಬುಟ್ಟಿ ಹೆಣೆಯುವವರು, ಆಮೇಲೆ ಇನ್ನೂ ಬಡ ಮತ್ತು ಕೆಳಜಾತಿಯ ಜನ ವಾಸಿಸುವ ಆಚೆ ಬೀದಿಗೆ ಹೋಗುತ್ತಾಳೆ. ಆಗಲೂ ವಯಸ್ಕನಾದ ಕೇಳುಗನೊಬ್ಬ ಸಿಗುವುದಿಲ್ಲ. ಇನ್ನೂ ಹೊಟ್ಟೆಯಲ್ಲಿರುವ ಉಪ್ಪಾರರ ಕೂಸಿಗೆ ತನ್ನ ಕತೆ ಹೇಳುತ್ತಾಳೆ.

ಕತೆಯು ಪರಿಣಾಮಗಳನ್ನೂ ಉಂಟುಮಾಡಬಲ್ಲುದು. ಕೇಳಲು ನಿರಾಕರಿಸಿದವರು ಶಿಕ್ಷೆಗೀಡಾಗುತ್ತಾರೆ. ವ್ರತಕತೆಯ ಕತೆಯನ್ನು ಕೇಳಿದವರು- ಈ ಕತೆಯ ಚಿಕ್ಕ ಹುಡುಗಿಯಂತೆ ಬರಡು ಹಳ್ಳಿಯನ್ನು ಸಮೃದ್ಧಗೊಳಿಸಬಲ್ಲ, ಕಳೆದುಹೋದದ್ದನ್ನು ಪಡೆಯಬಲ್ಲ, ಒಣಮರವನ್ನು ಫಲಭರಿತವನ್ನಾಗಿ ಮಾಡಬಲ್ಲ, ಸತ್ತವರನ್ನು ಬದುಕಿಸಬಲ್ಲ ಸಾಮರ್ಥ್ಯವನ್ನು ಪಡೆಯುತ್ತಾರೆ. 'ಫಲಶ್ರುತಿ'ಯು ಹಿಂದೂ ಪಠ್ಯಗಳ ಒಂದು ಅಂಗ. ಅದು ಪಠ್ಯವನ್ನು ಓದುವುದರಿಂದ ಏನೇನು ಉತ್ತಮ ಫಲಗಳು ಲಭಿಸುತ್ತವೆ ಎಂದು ಹೇಳುತ್ತದೆ. ಬಲಿ, ಯಾತ್ರೆ, ದೇವತಾರ್ಚನೆ ಮೊದಲಾದ ಆಚರಣೆಗಳಲ್ಲಿಯೂ ಈ ರೀತಿಯ ಫಲಪ್ರದಾನತೆ ಇರುತ್ತದೆ. ಜನ ಇವುಗಳನ್ನು ಆಚರಿಸುವುದೇ ತಾವು ನಿರೀಕ್ಷಿಸಿದ ಫಲ ದೊರೆಯುತ್ತದೆ (ಉದಾಹರಣೆಗೆ ಮಕ್ಕಳಿಲ್ಲದವರಿಗೆ ಮಕ್ಕಳಾಗುತ್ತವೆ, ನಿರ್ಗತಿಕರಿಗೆ ಸಂಪದಭಿವೃದ್ಧಿಯಾಗುತ್ತದೆ) ಎಂಬ ನಂಬಿಕೆಯಿಂದ.

ಪಠ್ಯಗಳ ಗಮಕ-ವಾಚನಗಳು ನಡೆಯುವುದು ಮತ್ತು ಏರ್ಪಾಟಾಗುವುದೂ ಕೆಲವು ನಿರ್ದಿಷ್ಟ ಉದ್ದೇಶಗಳಿಗಾಗಿಯೇ. ಮನೆಗಳಲ್ಲಿ ಮತ್ತು ದೇವಸ್ಥಾನಗಳಲ್ಲಿ ವಾಚನಮಾಡುವ ಶ್ರೀ ವೈಷ್ಣವ ಕಾವ್ಯಗಳಲ್ಲಿ ಮುಖ್ಯವಾದ 'ತಿರುವಾಯ್‌ಮೊಳಿ'ಯ ಪ್ರತಿ ಹತ್ತು ಸಾಲುಗಳ ನಂತರ ಹನ್ನೊಂದನೆ ಸಾಲಿನಿಂದ ಭಕ್ತರಿಗೆ ಫಲಶ್ರುತಿಯನ್ನು ಹೇಳಲಾಗುತ್ತದೆ.

ಯಾರೇ ಆಗಲಿ
ಗಿರಿಯನೆತ್ತಿದ ಹರಿ ದೇವರ
ದಾಸರಲಿ ದಾಸನಾದ

ನಮ್ಮ ಕವಿರಾಯ ರಚಿಸಿದ
ಸಾವಿರ ಸಾಲುಗಳಲಿ
ಉತ್ತಮ ಈ ಹತ್ತು ಸಾಲುಗಳ
ಕಲಿತವರು ಮತ್ತೆ ಮತ್ತೆ ಗೆಲ್ಲುವರು.

ಆಚರಣೆಯ ಭಾಗವಾದ ವ್ರತಕತೆಯು ಇಂಥದೇ ಫಲಶಕ್ತಿಯನ್ನು ಹೊಂದಿದೆ. ಕತೆ ಹೇಳಿ ಆಚರಿಸದೇ ಈ ಕತೆಯು ಪೂರ್ಣಗೊಳ್ಳುವುದಿಲ್ಲ. ಇಲ್ಲಿ ಅಜ್ಜಿಯು ಶ್ರೋತೃವಿಗೆ ಕತೆಯನ್ನು ಹೇಳುತ್ತಾಳೆ. ಆಮೇಲೆ ಕತೆಯ ಫಲಗಳು ಮಾತ್ರ ಮಾಂತ್ರಿಕವಾಗಿ-ನಿಶ್ಚಿತವಾಗಿ ಆಗೇ ಆಗಿವೆ.

ಇನ್ನೂ ಕೆಲವು ಕತೆಗಳು ಶ್ರೋತೃ ಮತ್ತು ಹೇಳುಗರ ನಡುವಣ ಸಂಬಂಧದ ಬಗಗೂ ಹೇಳುತ್ತವೆ.

ಕತೆ ಹೇಳುವ ಗಡ್ಡದ ಸಾಧುವೊಬ್ಬ ಒಮ್ಮೆ ಒಂದು ಹಳ್ಳಿಯ ಕೇಳುಗರಿಗೆ ಕತೆಯನ್ನು ಹೇಳುತ್ತಿದ್ದ. ಅವರಲ್ಲಿ ಒಬ್ಬ ರೈತ ಮಾತ್ರ ಅವನ ಕತೆ ಕೇಳಿ ಕಣ್ಣೀರು ಸುರಿಸುತ್ತಿದ್ದ. ಕಥಾಶ್ರವಣ ಮುಗಿದ ಮೇಲೆ ಅವನು ರೈತನನ್ನು ಕೇಳಿದ: 'ನಿನಗೆ ಕತೆ ಬಹಳ ತಟ್ಟಿದೆ ಅನ್ನಿಸ್ತದೆ ಅಲ್ಲವಾ?' ಅದಕ್ಕೆ ರೈತ 'ಹೌದು ಸ್ವಾಮಿ ನಾನು ನಿಮ್ಮನ್ನ ನೋಡಿದಾಗಲೆಲ್ಲ ಹೋದ ತಿಂಗಳು ಸತ್ತ ನನ್ನ ನೆಚ್ಚಿನ ಮೇಕೆ ಹೋತ ನೆನಪಿಗೆ ಬರುತ್ತಿತ್ತು' ಎಂದ.

ಆದರೆ ನಿಜವಾಗಿಯೂ ನೀವು ರಾಮಾಯಣದಂತಹ ಕತೆಯನ್ನು ಕೇಳಿದಾಗ ಏನಾಗುತ್ತದೆ? ವಿಚಿತ್ರ ಮತ್ತು ಮಾಂತ್ರಿಕ ಘಟನೆಗಳೇ ಫಲಿಸಬಹುದು. ಸಾಮಾನ್ಯ ಕಟ್ಟಳೆಗಳೆಲ್ಲ ಹರಿದು-ಮುರಿದು ಹೋಗಿ, ಕೇಳುಗನು ಕನ್ನಡಿ ಗಾಜಿನ ಒಳಗಿನಿಂದ ನಡೆದು ಹೋದಂತೆ ಅನ್ನಿಸಬಹುದು, ಈ ಮುಂದಿನ ತೆಲುಗು ಕತೆಯಲ್ಲಿನ ಹಾಗೆ.

## ನೀವು ನಿಜವಾಗಿಯೂ ಕೇಳಿದಾಗ ಏನಾಗಬಹುದು?

ಸಂಸ್ಕಾರದ ಗಂಧವೇ ಇಲ್ಲದ-ಆಸಕ್ತಿಯೂ ಇಲ್ಲದ ಒಬ್ಬ ಹಳ್ಳಿಯವನು ಒಬ್ಬಳು ಸುಸಂಸ್ಕೃತೆಯನ್ನು ಮದುವೆಯಾದ. ಅವಳು ಅವನನ್ನು ಉನ್ನತವಾದ ಅಭಿರುಚಿಗೆ ಒಗ್ಗಿಸಲು ಬಹಳ ಪ್ರಯತ್ನ ಪಡುತ್ತಿದ್ದಳು. ಆದರೆ ಅವನು ಆಸಕ್ತಿಯನ್ನೇ ತೋರಿಸುತ್ತಿರಲಿಲ್ಲ.

ಒಮ್ಮೆ ಒಬ್ಬ ಪ್ರಖ್ಯಾತ ರಾಮಾಯಣ ಕತೆಗಾರ ಆ ಹಳ್ಳಿಗೆ ಬಂದ. ಪ್ರತಿ ಸಂಜೆಯೂ ಅವನು ಬಹಳ ರಸವತ್ತಾಗಿ ರಾಮಾಯಣದ ಭಾಗಗಳನ್ನು ಹಾಡಿ-ವಾಚಿಸಿ-ವಿವರಿಸುತ್ತಿದ್ದ. ಅದೊಂದು ಅಪರೂಪದ ಮೃಷ್ಟಾನ್ನ ಭೋಜನ ಅನ್ನುವ ರೀತಿ ಹಳ್ಳಿಯ ಪ್ರತಿಯೊಬ್ಬರೂ ಈ ಏಕವ್ಯಕ್ತಿ ಪ್ರದರ್ಶನಕ್ಕೆ ಪ್ರತಿದಿನಾ ಹೋಗುತ್ತಿದ್ದರು.

ಆ ಹೆಂಗಸು ಅಸಂಸ್ಕೃತನಾದ ತನ್ನ ಗಂಡನನ್ನು ಆ ಕತೆ ಕೇಳಿಯಾದರೂ ಸ್ವಲ್ಪ ಸುಧಾರಿಸಲಿ ಎಂದು ಅಲ್ಲಿ ಕಳಿಸಲು ಯತ್ನಿಸಿದಳು. ಈಗಲೂ ಅವನು ಆಗದೆಂದು ಕೊಸರಾಡಿ ಆಮೇಲೆ ಒಪ್ಪಿಕೊಂಡ. ಸಂಜೆ ಕತೆ ನಡೆಯುವ ಸ್ಥಳಕ್ಕೆ ಹೋಗಿ ಹಿಂದೆ ದೂರದಲ್ಲಿ ಕೂತ. ಅದೊಂದು ಇಡೀ ರಾತ್ರಿಯ ಕಥಾವಾಚನವಾಗಿದ್ದು ರಾತ್ರಿಯಲ್ಲಿ ಅವನಿಂದ ಎದ್ದಿರಲು ಆಗಲಿಲ್ಲ. ಚೆನ್ನಾಗಿ ನಿದ್ರೆ ಹೊಡೆದ. ಒಂದು ಆಶ್ವಾಸ ಮುಗಿದು ಬೆಳಗಾಗುವಾಗ ಮಂಗಳ ಹಾಡುವ ಸಮಯದಲ್ಲಿ

ಸಂಪ್ರದಾಯದಂತೆ ಸಿಹಿ ಹಂಚಿದರು. ನಿದ್ರೆ ಮಾಡುತ್ತಿದ್ದ ಇವನ ಬಾಯಿಗೂ ಸಿಹಿ ಹಾಕಲಾಯಿತು. ಬೆಳಕು ಹರಿದಾದ ಮೇಲೆ ಇವನು ಎದ್ದು ಮನೆಗೆ ಹೋದ. ಅವನ ಹೆಂಡತಿ ಇಡೀ ರಾತ್ರಿ ನನ್ನ ಗಂಡ ಕತೆ ಕೇಳಿದ್ದಾನೆಂದು ಬಹಳ ಖುಷಿಗೊಂಡು 'ಏನ್ರೀ ಹೇಗಿತ್ತು ರಾಮಾಯಣ?' ಎಂದು ಕೇಳಿದಳು. ಅವನು 'ಬಹಳ ಸಿಹಿಯಾಗಿತ್ತು' ಎಂದ. ಅವಳಿಗೆ ಅವನ ಮಾತಿನಿಂದ ಬಹಳ ಸಂತೋಷವಾಯಿತು.

ಮಾರನೇ ಸಂಜೆಗೂ ಅವನನ್ನು ಕತೆ ಕೇಳಲು ಹೋಗೆಂದು ಒತ್ತಾಯಿಸಿದಳು. ಅವನು ಹೋದ. ಪ್ರದರ್ಶನದ ಎದುರಿಗೆ ದೂರದಲ್ಲಿ ಗೋಡೆಗೆ ಒರಗಿಕೊಂಡು ನಿದ್ದೆ ಹೋದ. ಆ ಜಾಗ ತುಂಬಾ ಜನರಿಂದ ಕಿಕ್ಕಿರಿದು ತುಂಬಿತ್ತು. ಒಬ್ಬ ಹುಡುಗ ಎಲ್ಲೂ ಜಾಗ ಸಿಗದೆ ಇವನ ಭುಜದ ಮೇಲೆ ಕುಳಿತು ರಾತ್ರಿಯೆಲ್ಲಾ ರಸವತ್ತಾಗಿದ್ದ ಕತೆಯನ್ನು ಕಣ್ಣು ಬಾಯಿ ಬಿಟ್ಟುಕೊಂಡು ಕೇಳಿದ. ಬೆಳಗಾಗುತ್ತಲೇ ಆವತ್ತಿನ ಆಶ್ವಾಸ ಮುಗಿಯುತ್ತಿದ್ದಂತೆ ಒಬ್ಬೊಬ್ಬರಾಗಿ ಎದ್ದು ಹೋದರು. ಇವನೂ ಎದ್ದ. ಹುಡುಗ ಮೊದಲೇ ಎದ್ದು ಹೋಗಿದ್ದ. ರಾತ್ರಿಯಿಡೀ ಭಾರ ಹೊತ್ತಿದ್ದರಿಂದ ಇವನಿಗೆ ಭುಜ ನೋಯುತ್ತಿದೆ ಅನ್ನಿಸಿತು. ಮನೆಗೆ ಹೋದಾಗ ಹೆಂಡತಿ 'ಹೇಗಿತ್ತು-ರಾಮಾಯಣ?' ಎಂದು ಕೇಳಿದಳು. ಅದಕ್ಕವನು 'ಬೆಳಗಾಗ್ತಾ ಬೆಳಗಾಗ್ತಾ ತುಂಬಾ ತೂಕ ಆಗ್ತಾ ಇದೆ ಅನ್ನಿಸ್ತು' ಎಂದ. ಅದಕ್ಕವಳು 'ಆ ಕತೆ ಇರೋದೇ ಹಾಗೆ' ಅಂತ ಹೇಳಿದಳು. ಕೊನೆಗಾದರೂ ನನ್ನ ಗಂಡ ರಾಮಾಯಣದ ದೊಡ್ಡತನವನ್ನು, ಭಾವನೆಗಳು ಅಂದರೆ ಏನು ಅನ್ನುವುದನ್ನು ತಿಳಿಯುವಂತೆ ಆದನಲ್ಲ ಎಂದು ಸಂತೋಷಪಟ್ಟಳು.

ಮಾರನೇ ದಿನ ಅವನು ಜನರ ಕೊನೆಯಲ್ಲಿ ಹೋಗಿ ಕುಳಿತ. ಅವತ್ತು ಅವನಿಗೆ ಬಹಳ ನಿದ್ರೆ ಬಂತು. ನೆಲದ ಮೇಲೆ ಮಲಗಿಬಿಟ್ಟ. ಗೊರಕೆಯನ್ನೂ ಹೊಡೆದ. ಬೆಳಗ್ಗೆ ಅವನು ಏಳುವುದಕ್ಕೆ ಸ್ವಲ್ಪ ಹೊತ್ತು ಮೊದಲು ಒಂದು ನಾಯಿ ಬಂದು ಕಾಲೆತ್ತಿ ಅವನ ಬಾಯಿಗೆ ಉಚ್ಚೆ ಹೊಯ್ದಿತ್ತು. ಇವನು ಬಾಯಿ ಚಪ್ಪರಿಸಿಕೊಂಡು ಯಥಾರೀತಿ ಎದ್ದು ಮನೆಗೆ ಹೋದ. ಅವನ ಹೆಂಡತಿ ಎಂದಿನಂತೆ ಹೇಗಿತ್ತು ಎಂದಾಗ ಇವನು ಅತ್ತ ಇತ್ತ ತಲೆ ಆಡಿಸುತ್ತಾ 'ಅಬ್ಬಬ್ಬಾ ಇವತ್ತು ಉಪ್ಪುಪ್ಪಾಗಿತ್ತು' ಎಂದ. ಅವಳಿಗೆ ಅನುಮಾನ ಬಂದು, ನಿಜವಾಗಿಯೂ ಏನಾಯಿತೆಂದು ಕೇಳಿದಳು. ಅವನು ದಿನಾ ಹೋಗಿ ಅಲ್ಲಿ ತಾನು ಕತೆ ಕೇಳುತ್ತಿರಲಿಲ್ಲ, ನಿದ್ರೆ ಮಾಡಿ ಬರುತ್ತಿದ್ದೆ ಎಂದು ಹೇಳುವವರೆಗೂ ಬಿಡಲಿಲ್ಲ.

ನಾಲ್ಕನೇ ದಿನ ಗಂಡನ ಜೊತೆ ತಾನೂ ಹೋಗಿ ಮೊದಲ ಸಾಲಿನಲ್ಲೇ ಕುಳಿತು ಏನೇ ಆಗಲಿ ಇವತ್ತು ಮಲಗಕೂಡದು, ಇಡೀ ರಾತ್ರಿ ಎದ್ದಿದ್ದು ಕತೆ ಕೇಳಬೇಕು ಎಂದು ಗಂಡನಿಗೆ ತಾಕೀತು ಮಾಡಿದಳು. ಕರ್ತವ್ಯವೆಂಬಂತೆ ಅವನೂ ಕುಳಿತು ನೋಡತೊಡಗಿದ. ಸ್ವಲ್ಪ ಹೊತ್ತಿನಲ್ಲೇ ಆ ಮಹಾಕತೆಯ ಪಾತ್ರಗಳು ಮತ್ತು ಸಾಹಸಗಳಲ್ಲಿ ತಾನೂ ಮುಳುಗಿಹೋದ. ಆವತ್ತು ಕತೆಗಾರ ರಾಮನ ಮುದ್ರೆಯುಂಗುರವನ್ನು ಸೀತೆಗೆ ಒಯ್ದುಕೊಡಲು ಹನುಮಂತನು ಸಾಗರೋಲ್ಲಂಘನ ಮಾಡುವ ಪ್ರಸಂಗವನ್ನು ಹೇಳುತ್ತಿದ್ದ. ಹನುಮಂತ ಸಾಗರ ಹಾರುವಾಗ ಮಾರ್ಗ ಮಧ್ಯದಲ್ಲಿ ಅವನ ಕೈಯಿಂದ ಉಂಗುರ ಜಾರಿ ಸಮುದ್ರಕ್ಕೆ ಬಿದ್ದುಹೋಯಿತು. ಹನುಮಂತನಿಗೆ ಏನು ಮಾಡುವುದೆಂದು ತೋಚಲಿಲ್ಲ. ಅದನ್ನು ಹೇಗಾದರೂ ಬೇಗ ತೆಗೆದುಕೊಂಡು ಹೋಗಿ ಲಂಕೆಯಲ್ಲಿರುವ ಸೀತೆಗೆ ನೀಡಬೇಕಿತ್ತು. ಹನುಮಂತ ತನ್ನ ಕೈ

ಕಾಲುಗಳನ್ನು ಆಡಿಸುತ್ತಿದ್ದಂತೆಯೇ ದಿನವೂ ಮಲಗುತ್ತಿದ್ದ- ಇವತ್ತು ಬಹಳ ಆಸಕ್ತಿಯಿಂದ ಕತೆ ಕೇಳುತ್ತಿದ್ದ ಇವನು ಕೂಡಲೇ 'ಹನುಮಾ ಚಿಂತಿಸಬೇಡ ನಾನು ಅದನ್ನು ನಿನಗೆ ತೆಗೆದುಕೊಡುತ್ತೇನೆ' ಎಂದು ಕುಳಿತಿದ್ದವನು ಮೇಲಕ್ಕೆ ನೆಗೆದು ಸಮುದ್ರಕ್ಕೆ ಧುಮುಕಿಯೇ ಬಿಟ್ಟ. ಅಲ್ಲೇ ಸಮುದ್ರದ ನೆಲದಲ್ಲಿದ್ದ ಉಂಗುರವನ್ನೆತ್ತಿ ಹನುಮಂತನಿಗೆ ಕೊಟ್ಟೂ ಬಿಟ್ಟ.

ಅಲ್ಲಿದ್ದ ಎಲ್ಲರೂ ಆಶ್ಚರ್ಯಪಟ್ಟರು. ಇವನ್ಯಾರೊ ವಿಶೇಷವಾದ ವ್ಯಕ್ತಿ. ಶ್ರೀರಾಮ ಮತ್ತು ಹನುಮಂತರು ಇವನಿಗೆ ಆಶೀರ್ವದಿಸಿದ್ದಾರೆ ಅಂದುಕೊಂಡರು. ಅಲ್ಲಿಂದಾಚೆ ಹಳ್ಳಿಯ ಎಲ್ಲರೂ ಅವನನ್ನು ಒಬ್ಬ ದೊಡ್ಡ ವ್ಯಕ್ತಿಯಂತೆ ಗೌರವದಿಂದ ಕಾಣತೊಡಗಿದರು. ಅವನೂ ಹಾಗೆಯೇ ವರ್ತಿಸತೊಡಗಿದ.

## ಪ್ರಾಚೀನ ಪಠ್ಯಗಳು

ರಾಮಾಯಣ ಮತ್ತು ಮಹಾಭಾರತದಂತಹ ಲಿಖಿತ ಪಠ್ಯಗಳು ಯಾವಾಗಲೂ ತಮ್ಮ ಬಗೆಗಿನದೇ ಕತೆಯಿಂದ ಆರಂಭವಾಗುತ್ತವೆ. ಇವು ಮೌಖಿಕ ಕತೆಗಳು ಲಿಖಿತ ಪಠ್ಯಗಳಾಗಿ ಪರಿವರ್ತಿತವಾದುದನ್ನೇ ಸೂಚಿಸುತ್ತವೆ. ಈ ಭಾರತೀಯ ಮಹಾಕಾವ್ಯಗಳು ಮೌಖಿಕ ಪ್ರಕಾರದ ಬಹುತೇಕ ರಚನಾಕ್ರಮಗಳಾದ- ಕೀಲಿಕೈ ರೀತಿಯ ಭಿನ್ನ ಹಂತದ ಪುನರಾವರ್ತನೆಗಳು, ಕತೆಯೊಳಗಿನ ಕತೆಗಳು, ಸೂತ್ರಗಳು ಮೊದಲಾದ ಪರಿಕ್ರಮಗಳನ್ನು ಸ್ವೀಕರಿಸಿದ ಮಾಧ್ಯಮಿಕ ರೂಪಗಳಾಗಿವೆ. ಅಷ್ಟೇ ಅಲ್ಲ ಇವು ಕೇಳುಗ ಹೇಳುಗರಿಬ್ಬರನ್ನೂ ತಮ್ಮೊಳಗೇ ಒಳಗೊಂಡಿರುವ, ಮೌಖಿಕ ಕಥನಗಳ ಮಾದರಿಗಳೇ ಆಗಿವೆ ಮತ್ತು ಅವು ಬರೆಯಲ್ಪಡುತ್ತಿರುವುದೂ ಕೂಡ ಮೌಖಿಕ ಪ್ರಧಾನ ಜಗತ್ತಿನೊಳಗೇ. ಉದಾಹರಣೆಗೆ ಕುಮಾರವ್ಯಾಸ ತನ್ನ ಕನ್ನಡ ಭಾರತವನ್ನು ಹೀಗೆ ಆರಂಭಿಸುತ್ತಾನೆ.

ಪದವಿಟ್ಟಳುಪದೊಂದಗ್ಗಳಿಕೆ
ಕಂಠಪತ್ರದ ಉಲುಹು ಕೆಡದೊಂದಗ್ಗಳಿಕೆ

ಈ ಅಗ್ಗಳಿಕೆಗಳು ಖಂಡಿತವಾಗಿಯೂ ಬರಹಗಾರನವಲ್ಲ ಮೌಖಿಕ ಕತೆಗಾರನವು. ಬರಹಗಾರನಂತೆ ಆಡಿದ ಮಾತಿನ ತಪ್ಪುಗಳನ್ನು ತಿದ್ದಲು, ಹಿಂದೆ ಬಂದು ಸಂಕಲಿಸಲು ಆಗದಂತಹ ಮೌಖಿಕ ಕತೆಗಾರನ ಅಗ್ಗಳಿಕೆಗಳು. ಕುಮಾರವ್ಯಾಸನಂತಹ ಪ್ರಾಚೀನ ಕವಿಗಳು ಮೌಖಿಕ ಪರಂಪರೆಗೆ ತೀರಾ ಹತ್ತಿರವಾದವರು ಮತ್ತು ಗಟ್ಟಿಯಾಗಿ ವಾಚಿಸಲೆಂದೇ ಬರೆದವರು. ಹೀಗಾಗಿ ಮೌಖಿಕ ಮತ್ತು ಲಿಖಿತ ಪಠ್ಯಗಳ ನಡುವಿನ ವೈರುಧ್ಯವು ಅಷ್ಟು ಸರಳ ಅಥವಾ ವಿರೋಧಿ ಅಲ್ಲ. ಆದರೆ ಈ ಲಿಖಿತ ಪಠ್ಯಗಳು ಅನೇಕ ಮಾಧ್ಯಮಿಕ ರೂಪಗಳನ್ನು ಒಳಗೊಂಡಿರುವ- ಹಲವು ಆಕೃತಿಗಳ ಸಮಗ್ರೀಕೃತ ರೂಪ ಆಗಿರುವಂಥವು.

ಲಿಖಿತ ಪಠ್ಯಗಳೂ ಕೂಡ ತಾವು ತಮ್ಮ ಬಗೆಗೇ ಕತೆಗಳನ್ನು ಹೊಂದಿವೆ. ಉದಾಹರಣೆಗೆ ಮಹಾಭಾರತದಲ್ಲಿ ಅದು ಹೇಗೆ ಬರೆಯಲ್ಪಟ್ಟಿತು ಎಂಬ ಬಗ್ಗೆ ಒಂದು ಕತೆಯಿದೆ. ಮಹಾಭಾರತದ ಕವಿ ಸಂಪಾದಕನಾದ ವ್ಯಾಸ ತಾನು ಬಾಯಲ್ಲಿ ಹೇಳುತ್ತಿದ್ದಂತೆ ಬರೆದುಕೊಳ್ಳಲು ಯಾರಾದರೂ ಬೇಕು ಎಂದು ಹುಡುಕುತ್ತಿದ್ದ. ಅದು ಮಹಾ ಸಾಹಸದ ಕೆಲಸವಾದ್ದರಿಂದ (ಇದು ಗಾತ್ರದಲ್ಲಿ ಇಲಿಯಡ್ ಮತ್ತು ಒಡಿಸ್ಸಿಗಳೆರಡರ ಎಂಟು ಪಟ್ಟು ದೊಡ್ಡದು) ಯಾರೂ

ಮುಂದೆ ಬರಲಿಲ್ಲ. ಅವನು ಹೇಳಿದಷ್ಟು ವೇಗವಾಗಿ ಬರೆಯಲು ಯಾರಿಂದಲೂ ಆಗುತ್ತಿರಲಿಲ್ಲ. ಕೊನೆಗೆ ಗಣೇಶ ತಾನು ಬರೆಯುವಷ್ಟು ವೇಗವಾಗಿ ಹೇಳುತ್ತಲೇ ಇರಬೇಕು. ಮಧ್ಯೆ ಎಲ್ಲಿಯೂ ನಿಲ್ಲಿಸಬಾರದು ಎಂಬ ಷರತ್ತಿನೊಂದಿಗೆ ಬರೆಯಲು ಒಪ್ಪಿ ಬಂದ. ವ್ಯಾಸನೂ ಅದಕ್ಕೆ ಒಪ್ಪಿಕೊಂಡ. ಆದರೆ- ಜಾನಪದ ಪಾಠ ಹೇಳುವಂತೆ- ಗಣೇಶನಾದರೋ ದೇವರು, ವ್ಯಾಸನಾದರೋ ಮಾನವ, ಮಾನವ ಸಹಜ ದೇಹ ಬಾಧೆಗಳನ್ನು ತೀರಿಸಿಕೊಳ್ಳಲೇಬೇಕಲ್ಲ. ಅಲ್ಲದೆ ಸರಿಯಾದ ಪದಗಳನ್ನು ಹೇಳಲೂ ಕೆಲವೊಮ್ಮೆ ಅವನಿಗೆ ಯೋಚಿಸಬೇಕಾಗುತ್ತಿತ್ತು. ಅದಕ್ಕಾಗಿ ವ್ಯಾಸ ಆಗಾಗ ಗಣೇಶನ ಕೈಯಲ್ಲಿ ಬರೆಯಲಾಗದಂತಹ ಕಷ್ಟದ ಶಬ್ದಗಳನ್ನು ಹೇಳುತ್ತಾ, ಆ ಸಮಯವನ್ನು ತನ್ನ ಅಗತ್ಯಕ್ಕೆ ಬಳಸಿಕೊಳ್ಳುತ್ತಿದ್ದ. ಮಹಾಭಾರತದ ಸರಳವಾದ 'ಮಹಾಕಾವ್ಯ ಸಂಸ್ಕೃತ' (Epic Sanskrit)ದಲ್ಲಿ ಅಲ್ಲಲ್ಲಿ ಸಿಗುವ ಕಠಿಣ (ಗ್ರಂಥಿ ಅಥವಾ ಗಂಟು) ಶಬ್ದಗಳಿಗೆ ಸಮಜಾಯಿಷಿ ನೀಡಲು ಹೇಳಿರುವ ಕತೆ ಇದು. ಮೌಖಿಕ ಪರಂಪರೆಯನ್ನು ತಿಳಿದ ವಿದ್ವಾಂಸರು ಹೇಳುವಂತೆ ಮಹಾಕಾವ್ಯ ಶೈಲಿಯು ಅರ್ಷೇಯ ಶಬ್ದಗಳನ್ನು ಹೊಂದಿರುತ್ತದೆ. ಹೋಮರನಲ್ಲಿ ಅವನ ಕಾಲದಲ್ಲಿಯೇ ಬಳಕೆಯಲ್ಲಿಲ್ಲದಿದ್ದ ಅನೇಕ ದೀರ್ಘ ಶಬ್ದಗಳು ಬಳಕೆಯಾಗಿವೆ. ಹಾಗೇ ಆಫ್ರಿಕಾದ ಕವಿಗಳಲ್ಲಿಯೂ ಇವೆ. ಬಹುಶಃ ಹಿಂದಿನ ತಲೆಮಾರಿನ ಕೇಳುಗರಿಂದ ಅವು ರವಾನೆಯಾಗಿರಬಹುದು ಅಥವಾ ಅವುಗಳ ಆರ್ಷೇಯಗುಣಗಳನ್ನು ಕಾಯ್ದುಕೊಳ್ಳಲು ಮತ್ತು ತಮ್ಮ ಪ್ರಾಚೀನತೆಯ ಪ್ರತಿಷ್ಠೆಗಾಗಿ ಅವುಗಳನ್ನು ಇಟ್ಟುಕೊಂಡು ಬಂದಿರಬಹುದು.

ಹನ್ನೊಂದನೆಯ ಶತಮಾನದ ಸಂಸ್ಕೃತದ ಕಥಾಸರಿತ್ಸಾಗರವೂ ಮೌಖಿಕ ಕತೆಗಳ ಲಿಖಿತ ಪಠ್ಯವಾಗಿದೆ. ಇದು ತನ್ನ ಹುಟ್ಟು ಮೂಲದ ಬಗ್ಗೆ ಆಸಕ್ತಿದಾಯಕವಾದ ಒಂದು ಕತೆಯಿಂದ ಆರಂಭವಾಗುತ್ತದೆ. ಶಿವನ ಅರ್ಧಾಂಗಿಯಾದ ಪಾರ್ವತಿಯು ಒಮ್ಮೆ ಇದುವರೆಗೆ ಜಗತ್ತಿನಲ್ಲಿ ಯಾರೂ ಹೇಳಿರದ-ಕೇಳಿರದ ಒಂದು ಕತೆಯನ್ನು ಹೇಳು ಎಂದು ಶಿವನನ್ನು ಕೇಳಿದಳು. ಸೆಜ್ಜೆ ಮನೆಯಲ್ಲಿ ಶಿವನು ಪಾರ್ವತಿಯನ್ನು ಕೂರಿಸಿಕೊಂಡು ಕತೆ ಹೇಳಿದ. ಶಿವಗಣಗಳಲ್ಲಿ ಒಬ್ಬನು ಸೊಣವಾಗಿ ರೂಪತಾಳಿ ಬಂದು ಸೆಜ್ಜೆ ಮನೆಯಲ್ಲಿ ಅವಿತಿಟ್ಟುಕೊಂಡು ಕುಳಿತಿದ್ದು ಕತೆ ಕೇಳಿ ಅದನ್ನು ತನ್ನ ಹೆಂಡತಿಗೆ ಹೇಳಿಬಿಟ್ಟ- ಅದು ಬೇರೆಯವರಿಗೆ ಹೇಳುವಂಥದ್ದಾಗಿರಲಿಲ್ಲ. ಪಾರ್ವತಿಯ ಸಖಿಯಾಗಿದ್ದ ಈ ಗಣ ಪತ್ನಿಯು ಸಹಜವಾಗಿಯೇ ತನ್ನ ಗಂಡನಿಂದ ಕೇಳಿದ ಕತೆಯನ್ನು ತಿರುಗಿ ಪಾರ್ವತಿಗೆ ಹೇಳಿದಳು. ಎಲ್ಲರಿಗೂ ಗೊತ್ತಿರುವ ಕತೆಯನ್ನೇ ಶಿವನು ಹೇಳಿದ್ದಾನೆಂದು ಪಾರ್ವತಿ ಕೋಪಗೊಂಡಳು. ಈ ಕತೆ ನಾನು ಯಾರಿಗೂ ಹೇಳಿರಲಿಲ್ಲವಲ್ಲ, ಬೇರೆಯವರಿಗೆ ಹೇಗೆ ಗೊತ್ತಾಯಿತು ಎಂದು ಶಿವನು ಯೋಚಿಸಿ- ತಿಳಿದುಕೊಂಡ.

ಆ ಗಣನನ್ನು ಕರೆದು ನೀನು ಭೂಮಿಯಲ್ಲಿ ಪಿಶಾಚನಾಗಿ (ಪೈಶಾಚಿ ಭಾಷೆ ಮಾತನಾಡುವವ-ಅನುವಾದಕ) ಹುಟ್ಟಿ ಹೋಗು ಎಂದು ಶಾಪಕೊಟ್ಟ. ನೀನು ಶಿವಕತೆಯನ್ನು ಬರೆದಾಗಲೇ ನಿನಗೆ ಈ ಪಿಶಾಚ ಜನ್ಮದಿಂದ ಮುಕ್ತಿ ಎಂದೂ ಹೇಳಿದ. ಅವನು ಕಾಡಿನಲ್ಲಿ ಅಲೆಯುತ್ತಾ ತನ್ನ ರಕ್ತದಿಂದಲೇ (ಬರೆಯಲು ಅಲ್ಲಿ ಬೇರೆ ಏನೂ ಇರಲಿಲ್ಲ) ಎಲೆಗಳ ಮೇಲೆ ಶಿವಕತೆಯನ್ನು ಬರೆದ. ಹತ್ತಿರದ ರಾಜ್ಯದ ರಾಜನಿಗೆ ತಾನು ಬರೆದ ರಕ್ತಾಕ್ಷರದ ಎಲೆಗಳ (ತಾಳೆಗರಿ) ಹಸ್ತಪ್ರತಿಯನ್ನು ಕಳಿಸಿದ. ರಾಜ ಅದನ್ನು ನೋಡಿ ಅಸಹ್ಯಪಟ್ಟುಕೊಂಡು ತಿರಸ್ಕರಿಸಿದ. ನಿರಾಶನಾದ ಕವಿ ತನ್ನ ಹಸ್ತಪ್ರತಿಯನ್ನು ಹರಿದು ಹಾಕುವುದಕ್ಕೆ ಮೊದಲು ಕಾಡಿನ ಹಕ್ಕಿ-ಪಕ್ಷಿಗಳಿಗೆ,

ಕ್ರೂರ ಮೃಗಗಳಿಗೆ ಅದನ್ನು ಓದಿ ಹೇಳಿದ. ರಾಜ ಈ ಸುದ್ದಿಯನ್ನು ಕೇಳಿ, ಕಾಡಿಗೆ ಓಡಿಬಂದು ಎಲ್ಲ ಹರಿಯುವ ಮುಂಚೆ ಚೂರುಪಾರು ಉಳಿಸಿದ. ಹಾಗೆ ಮೂಲದಿಂದ ಉಳಿದ ಅಲ್ಪಸ್ವಲ್ಪ ಕತೆಗಳಿವು.

ಇದರ ಕಥನ ಕ್ರಮದಲ್ಲಿ ಯಾವ ಕತೆಯೂ ಗುಟ್ಟಾಗಿ ಉಳಿಯುವುದಿಲ್ಲ, ನಾಲ್ಕು ಗೋಡೆಗಳ ಮಧ್ಯೆ ಅದನ್ನು ಕಟ್ಟಿಹಾಕಲು ಸಾಧ್ಯವಿಲ್ಲ ಎಂಬುದು ತಿಳಿಯುತ್ತದೆ. ಗೋಡೆ ಮೇಲಿನ ನೊಣವಾದರೂ ಸರಿ ಅದನ್ನು ಕೇಳಿ ಇತರರಿಗೆ ಹೇಳುತ್ತದೆ. ಮೌಖಿಕ ಕತೆಯು ಹಲವಾರು ಅಸ್ತಿತ್ವಗಳಲ್ಲಿ ಇರುತ್ತದೆ. ಹೇಳುಗರ ಬಾಯಲ್ಲೇ ಬದುಕಿರುತ್ತದೆ. ವ್ಯಕ್ತಿಯಿಂದ ವ್ಯಕ್ತಿಗೆ, ತಲೆಮಾರಿನಿಂದ ತಲೆಮಾರಿಗೆ ರವಾನೆಯಾಗುತ್ತದೆ. ಹಾಗಾಗಿ ಒಂದು ಮೂಲಕತೆ-ಅಖಂಡಕತೆ ಎಂಬುದು ಇರುವುದಿಲ್ಲ. ಅದು ಮೂಲದ ಹಲವಾರು ಪಾಠಾಂತರಗಳ ಸರಪಳಿಯಲ್ಲಿ, ಅನೇಕ ಭಿನ್ನ ರೂಪಾಂತರದ ಕತೆಗಳೊಳಗೆ ಕಳೆದುಹೋಗಿರುತ್ತದೆ. ಅದೂ ಅಲ್ಲದೆ ಮೌಖಿಕ ಕತೆಯ ಭಾಷೆಯು ಪೈಶಾಚಿ ಭಾಷೆಯಾಗಿದೆ. (ಉನ್ನತ ಭಾಷೆಯಲ್ಲ, ಜನಸಾಮಾನ್ಯರು ಮಾತಾಡುವ ಪ್ರಾದೇಶಿಕ ಉಪಪ್ರಬೇಧ.)

ಕಸುಬುದಾರರಾದ ಕತೆಗಾರರಾದರೆ ಶೈಲೀಕೃತ ಅಲಂಕರಣಗಳೊಂದಿಗೆ ಕತೆಯನ್ನು ಸ್ವಾರಸ್ಯಭರಿತವನ್ನಾಗಿ ಮಾಡಬಲ್ಲರು. ಆದರೆ ಸಾಮಾನ್ಯವಾಗಿ ಜಾನಪದ ಕತೆ ಹೇಳುವವರು ಕಸುಬುದಾರರಾಗಿರುವುದಿಲ್ಲ. ಅವರು ತಮ್ಮದೇ ಕಾಲ ಮತ್ತು ಸ್ಥಳದ ಭಾಷೆಯ ಮೂಲಕವೇ ಹೇಳುತ್ತಾರೆ. ಇವರು ಸಾಮಾನ್ಯವಾಗಿ ನಿರಕ್ಷರರಾಗಿರುತ್ತಾರೆ. ಮತ್ತು ಕೇಳುಗರಲ್ಲಿ ಮಕ್ಕಳು ಮರಿ ಇರುವಂತಹ ಕೌಟುಂಬಿಕ ಪರಿಸರದಲ್ಲಿ ಕತೆಗಳನ್ನು ಹೇಳುತ್ತಾರೆ.

ವ್ಯಂಗ್ಯವೆಂದರೆ ಗುಟ್ಟಿನ ಕತೆಯನ್ನು ಕದ್ದು ಕೇಳುವ ಅಪರಾಧಿಗೆ ಭೂಮಿಯಲ್ಲಿ ಕೆಳಜಾತಿಯಲ್ಲಿ ಹುಟ್ಟುವ ಶಾಪ ನೀಡಲಾಗುತ್ತದೆ. ಆ ಕತೆ ಅದೂ ಹಕ್ಕಿ ಪಕ್ಷಿ-ಕ್ರೂರ ಮೃಗಗಳಿಂದ ಮೊದಲುಗೊಂಡು ಗೊತ್ತಿಲ್ಲದಿರುವ ಎಲ್ಲರಿಗೂ ತಿಳಿಯುವಂತೆ ಬರೆದಾಗಲೇ ಕೆಳಜಾತಿಯ (ಪಿಶಾಚ) ಜನ್ಮದಿಂದ ಬಿಡುಗಡೆ. ಆ ಕತೆಯನ್ನು ಅವನು ಮೊದಲು ತನ್ನದನ್ನಾಗಿ ಮಾಡಿಕೊಂಡು, ಇಂಕಿಗೆ ರಕ್ತವನ್ನೂ ಹಾಳೆಗೆ ಎಲೆಗಳನ್ನೂ (ಸಹಜವಾದ ಪ್ರಾಕೃತಿಕ ಅಂಶಗಳನ್ನು ಸಾಂಸ್ಕೃತಿಕ ಸೃಷ್ಟಿ ಪರಿಕರಗಳನ್ನಾಗಿ ಮಾಡಿಕೊಂಡು) ಬಳಸಿಕೊಂಡು ಮೌಖಿಕವಾದುದನ್ನು ಅಕ್ಷರಕ್ಕೆ ಪರಿವರ್ತಿಸುತ್ತಾನೆ. ಜಾನಪದವನ್ನು ಶಿಷ್ಟಗೊಳಿಸುತ್ತಾನೆ. ಜೀವಂತವಾದ ಆದರೆ ಅಲ್ಪಕಾಲಿಕವಾದ ಮಾಧ್ಯಮವನ್ನು ಘನೀಕೃತಗೊಳಿಸಿ ದೀರ್ಘಕಾಲಿಕವಾದುದನ್ನಾಗಿ ಮಾಡುತ್ತಾನೆ.

ಪ್ರಾಚೀನ ಗ್ರಂಥಗಳು ಮೌನವಾಗಿ ಓದಿಕೊಳ್ಳುವ ಮೂಲಕ ಬರೆಯುವ ಮೂಲಕ ಪ್ರಕಟಗೊಳ್ಳುತ್ತಿರಲಿಲ್ಲ. ಅವು ಒಡ್ಡೋಲಗ ಅಥವಾ ವಿದ್ವಜ್ಜನರ ಸಭೆಯಲ್ಲಿ ಆಶ್ರಯದಾತನೂ ಕೇಳುಗರೂ ಇರುವ ಸಭೆಗೆ ಗಟ್ಟಿಯಾಗಿ ಓದಿ ಹೇಳುವ ಮೂಲಕ ಪ್ರಕಟಗೊಳ್ಳುತ್ತಿದ್ದವು. ಕವಿ ಗುಣಾಢ್ಯನು ಯಾವ ಆಶ್ರಯದಾತನನ್ನೂ ಪಡೆದಿರಲಿಲ್ಲವಾದ್ದರಿಂದ- ಪ್ರಪ್ರಾಚೀನ ಕೃತಿಗಳು ರಚಿತವಾಗುತ್ತಿದ್ದಂತೆ- ಮೌಖಿಕ ವಸ್ತುವನ್ನು ಅಕ್ಷರಕ್ಕಿಳಿಸಿ ತನ್ನ ಕೃತಿ ರಚಿಸಿದ. ಅದನ್ನು ಹಕ್ಕಿ ಪಕ್ಷಿಗಳಿಗೂ, ಕಾಡುಮೃಗಗಳಿಗೂ ಓದಿ ಹೇಳಿದ. ಬಹಳ ಹಿಂದೆ ಆರಂಭದ ಹಂತದಲ್ಲಿ ಬರವಣಿಗೆಯು 'ನೆನಪಿನ ಸಾಧನ' (aide-memoire) ವಾಗಿತ್ತು; ಬರವಣಿಗೆಯೆಂದರೆ ಬರೆದುಕೊಳ್ಳುವುದು, ವಾಚನವೆಂದರೆ ಗಟ್ಟಿಯಾಗಿ ಓದುವುದು ಎಂದೇ ಆಗಿತ್ತು. ಎಲೆ ಅಥವಾ

ಪುಟಗಳ ಮೇಲಿನ ಪದಗಳು ಜೀವಂತ ದನಿಯಿಂದ ಎಚ್ಚರಗೊಳ್ಳಲಿಕ್ಕಾಗಿಯೇ ಸುಪ್ತಾವಸ್ಥೆಯಲ್ಲಿದ್ದಂಥವು. ರಾಜನು ಮೊದಲು ಆ ಎಲೆಗಳನ್ನು ನೋಡಿ ರಕ್ತದಲ್ಲಿ ಇಂಕನ್ನು ಕಾಣಲಾಗದೆ- ನೋವಿನ ದನಿಗಳಲ್ಲಿ ಪದಗಳನ್ನೂ ಕಾಣಲಾಗದೆ ಅಸಹ್ಯ ಪಟ್ಟುಕೊಳ್ಳುತ್ತಾನೆ. ಆದರ ಅವನಿಗ ಅದನ್ನು ತಿಳಿಯಲು ಸಾಧ್ಯವಾದಾಗ ಹಾಳಾಗುತ್ತಿದ್ದ ಕೃತಿಯನ್ನು- ಎಷ್ಟು ಉಳಿಯಬಲ್ಲುದೋ ಅಷ್ಟನ್ನು- ಸಂರಕ್ಷಿಸುತ್ತಾನೆ.

ಲಿಖಿತ ಪಠ್ಯಗಳಿಗ ಹಾಗೆಯೇ ಮೌಖಿಕ ರಚನೆಗಳಿಗೆ ಸಂಬಂಧಿಸಿದಂತೆ ಅನೇಕ ಕಥನಗಳಲ್ಲಿ ಹೇಳಿರುವಂತೆ ಈಗ ನಾವು ಪಡೆದಿರುವುದು ಮೂಲದ ಅಗಾಧ ಸೃಷ್ಟಿಯ ಒಂದೇ ಒಂದು ಭಾಗದಷ್ಟನ್ನು ಮಾತ್ರ. ಉದಾಹರಣೆಗೆ ವೇದಗಳನ್ನು ರಾಕ್ಷಸನೊಬ್ಬ ಕದ್ದುಕೊಂಡು ಹೋಗಿ ಸಮುದ್ರದ ಕೆಳಗೆ ಬಚ್ಚಿಟ್ಟು ಬಿಟ್ಟಿದ್ದನಂತೆ. ವಿಷ್ಣುವು ವರಾಹಾವತಾರ ತಾಳಿ ಆ ರಾಕ್ಷಸನನ್ನು ಕೊಂದು ಮನುಷ್ಯ ಜಗತ್ತಿಗೆ ವೇದಗಳನ್ನು ತಂದು ಕೊಟ್ಟನಂತೆ. ಕೆಲವು ಲಿಖಿತ ಪಠ್ಯಗಳಲ್ಲಿ ಮತ್ತು ದಂತಕತೆಯಾಗಿ ಪ್ರಚಾರದಲ್ಲಿರುವಂತೆ ರಾಮಾಯಣವು ಹನುಮಂತನಿಂದ ಬರೆಯಲ್ಪಟ್ಟಿತು. ಲಂಕಾಯುದ್ಧದಲ್ಲಿ ಭಾಗವಹಿಸಿ ರಾಮನ ಬಂಟನಾಗಿದ್ದ ಹನುಮಂತ ಸ್ವಯಂ ವಿದ್ಯಾವಂತನೂ ಜ್ಞಾನಿಯೂ ಆಗಿದ್ದು ರಾಮಾಯಣವನ್ನು ಬರೆದ. ಆದರೂ ಅವನು ಕಪಿಯಾದ್ದರಿಂದ ಸ್ವಭಾವ ಸಹಜವೆಂಬಂತೆ ಒಮ್ಮೆ ಬೆಟ್ಟದ ಮೇಲೆ ಆಟದ ರೀತಿ ತಾನು ಬರೆದದ್ದನ್ನೆಲ್ಲಾ ಹರಿದು ಚೆಲ್ಲಾಡಿದ. ಈಗ ನಾವು ಪಡೆದಿರುವ ರಾಮಾಯಣ ಹಾಗೆ ಚೆಲ್ಲಾಡಿ ಅಳಿದುಳಿದಿದ್ದು ಮಾತ್ರ. ಮೌಖಿಕ ಪರಂಪರೆಯ ಕ್ರಿಯಾಶೀಲ ವಾಹಕರಾದ ಸಂಗ್ರಾಹಕರು ಮತ್ತು ಹೇಳುಗರು ಸಂರಕ್ಷಿಸಿಟ್ಟಿರುವುದು ನಿಜಕ್ಕೂ ಸೃಷ್ಟಿಯಾದದ್ದರ ಒಂದು ಚಿಕ್ಕ ಭಾಗವನ್ನು ಮಾತ್ರ. ಪ್ರಾಚೀನ ಲಿಖಿತ ಸಂಪ್ರದಾಯಗಳೂ ಕೂಡ ಇದೇ ಗತಿಯನ್ನೇ ಕಂಡಿವೆ. ಒಂದು ಹಳೇ ತಮಿಳು ನಾಣ್ಣುಡಿಯು ಹೇಳುವಂತೆ ಪಂಚಭೂತಗಳಾದ ಗಾಳಿ, ನೀರು, ಬೆಂಕಿ, ಮಣ್ಣು, ಆಕಾಶಗಳೆಲ್ಲವೂ ಲಿಖಿತ ಪಠ್ಯಗಳ ವೈರಿಗಳೇ.

## ಕೇಳುಗ ಸಮುದಾಯ

ಪ್ರಾಚೀನ ಲಿಖಿತ ಮತ್ತು ಮೌಖಿಕ ಪಠ್ಯಗಳೆರಡೂ ಪ್ರಕಟಗೊಳ್ಳುತ್ತಿದ್ದುದು ಯೋಗ್ಯ (ಸಹೃದಯ) ಶ್ರೋತೃ ಸಮುದಾಯದೆದುರು ಪ್ರಸ್ತುತಪಡಿಸಿದಾಗ ಎಂದು ನಾನು ಈ ಮೇಲೆ ಹೇಳಿದ್ದೇನೆ. ಈ ಶ್ರೋತೃಜನ ಹೇಗೆ 'ಪಠ್ಯಸಮುದಾಯ'ವಾಗಿ (Textual Community) ರೂಪಗೊಳ್ಳುತ್ತಾರೆ? ರಾಮಾಯಣ ಅಥವಾ ಬೈಬಲ್‌ಗಳಂತಹ ಪಠ್ಯಗಳಿಂದ- ಪರಸ್ಪರ ನಿಯಂತ್ರಿತವಾಗುವ ಮತ್ತು (ಶ್ರೋತೃ+ಪಠ್ಯ) ಒಟ್ಟಿಗೇ ಬೆಸೆದುಕೊಂಡ ಈ ಶ್ರೋತೃ ಸಮುದಾಯವು ಹೇಗೆ ಪಠ್ಯ ಸಮುದಾಯವಾಗಿ ರೂಪಗೊಳ್ಳುತ್ತದೆ ಎಂಬುದು ಒಂದು ಆಕರ್ಷಕ ದಂತಕತೆಯ ವಿಷಯವಾಗಿದೆ. ಹನ್ನೊಂದನೇ ಶತಮಾನದ ತಮಿಳು ಕವಿ ಕಂಬನ್‌ನ ರಾಮಾಯಣ ರಚನೆ ಕುರಿತ ದಂತಕತೆಯಲ್ಲಿ ಇವನ್ನು ನೋಡಬಹುದು. ಈ ದಂತಕತೆಯು ಕಂಬನ್ ಪಠ್ಯವನ್ನು ಸ್ವೀಕರಿಸಿರುವ-ಮಲಯಾಳಂ ಸೂತ್ರ ಬೊಂಬೆಯಾಟವು ಪ್ರಯೋಗವಾಗುವ ಪ್ರದೇಶದಲ್ಲಿ ಇವತ್ತಿಗೂ ಚಾಲ್ತಿಯಲ್ಲಿ ಇದೆ. ಇಂಥ ಹಲವಾರು ಮೌಖಿಕ ಕಥನ ವಿವರಗಳನ್ನು ನಾಖಲಿಸಿರುವ ೧೯ನೇ ಶತಮಾನದ ಗ್ರಂಥವೊಂದರಲ್ಲಿಯೂ ಈ ದಂತಕತೆಯ ಉಲ್ಲೇಖವಿದೆ.

(ವಿನೋದ ರಸಮಂಜರಿ ವೀರಾಸಾಮಿ ಚೆಟ್ಟಿಯಾರ್-೧೮೯೬) ಅದರ ಒಂದು ಭಾಗವನ್ನು ಇಲ್ಲಿ ಸಂಕ್ಷಿಪ್ತವಾಗಿ ಹೇಳುತ್ತೇನೆ.

ಒಮ್ಮೆ ಚೋಳರಾಜನಿಗೆ ಕಂಬನ್‌ನಿಂದ ತಮಿಳಿನಲ್ಲಿ ರಾಮಾಯಣವನ್ನು ಬರೆಸಬೇಕು ಅನ್ನಿಸಿತು. ಕಂಬನೊಬ್ಬನಿಗೇ ಹೇಳುವ ಬದಲು ಅವನ ವಿರೋಧಿಕವಿ (ಒಟ್ಟಕುಟ್ಟನ್)ಗೂ ಏಕಕಾಲದಲ್ಲಿ ರಾಮಾಯಣ ಬರೆಯಲು ಹೇಳಿದರೆ ಕಂಬನು ಚೆನ್ನಾಗಿ ಬರೆಯುತ್ತಾನೆಂದು ಯೋಚಿಸಿ- ಇಬ್ಬರಿಗೂ ರಾಮಾಯಣ ಬರೆಯಲು ಹೇಳಿದನು. ಒಟ್ಟಕುಟ್ಟನ್ ಶಾಸ್ತ್ರೀಯ ಹಾಗೂ ಶ್ರಮಶೀಲ ಕವಿ. ಹೀಗಾಗಿ ಅವನು ಕ್ರಮವಾಗಿ ಕಾವ್ಯ ಬರೆಯಲು ತೊಡಗಿದನು. ಆದರೆ ಕಂಬನು ವಿನೋದದಲ್ಲಿ ಬಹಳ ಕಾಲ ಕಳೆದನು. ಒಟ್ಟಕುಟ್ಟನ್ ಆಗಲೇ ೫ ಕಾಂಡಗಳನ್ನು ಪೂರ್ತಿಯಾಗಿ ಬರೆದಿದ್ದರೆ, ಕಂಬನ್ ಇನ್ನು ಏನನ್ನೂ ಬರೆದಿರಲಿಲ್ಲ. ರಾಜನು ಇಬ್ಬರನ್ನೂ ಕರೆಸಿ ಕೇಳಿದಾಗ ತನ್ನ ವಿರೋಧಿ ಕವಿಯೆದುರು ಕಡಿಮೆಯಾಗಬಾರದೆಂದು ಐದು ಕಾಂಡಗಳಿಗೂ ಸ್ವಲ್ಪ ಹೆಚ್ಚು ಬರೆದಿರುವುದಾಗಿ ಕಂಬನ್ ಹೇಳಿದನು. ರಾಜನು ಆತನ ಇತ್ತೀಚಿನ ಕೆಲವು ಸಾಲುಗಳನ್ನು ಹೇಳೆಂದು ಕೇಳಿದನು. ಆಗಲೇ ಅಲ್ಲೇ ಕೆಲವು ಸಾಲುಗಳನ್ನು ಆಶುಕಾವ್ಯದಂತೆ ರಚಿಸಿ ಕಂಬನ್ ಹೇಳಿದನು. ರಾಜನಿಗೆ ಸಂತೋಷವಾಯಿತು. ಆದರೆ ಅಲ್ಲೇ ಇದ್ದ ಕಂಬನ್‌ನ ಕಟುವಿಮರ್ಶಕನಾದ ಒಟ್ಟಕುಟ್ಟನ್ 'ಅವನು ಯಾರೂ ಕೇಳಿರದ ತುಮಿ ಎಂಬ ಶಬ್ದವನ್ನು ಬಳಸಿದ್ದಾನೆ. ಅದು ಅಪಬಳಕೆ' ಎಂದನು. ಕಂಬನ್ ನಿಜವಾಗಿಯೂ ಅಪಬಳಕೆಯನ್ನೇ ಮಾಡಿದ್ದನು. ಆ ಶಬ್ದ ಅಸ್ತಿತ್ವದಲ್ಲಿಯೇ ಇರಲಿಲ್ಲ. ಆದರೂ ವಿರೋಧಿಯ ಸವಾಲಿನಿಂದ ಎದೆಗುಂದದೆ ಕಂಬನ್ 'ಅದೊಂದು ಉಪಭಾಷಾ ಶಬ್ದ. ದನ ಮೇಸುವ ಗೊಲ್ಲರು ಅದನ್ನು ಆಡುತ್ತಾರೆ' ಎಂದನು. 'ಅದಕ್ಕೆ ಸಾಕ್ಷಿ ಏನು' ಎಂದು ಒಟ್ಟಕುಟ್ಟನ್ ಕೇಳಿದಾಗ 'ನಾಳೆ ಗೊಲ್ಲಕೇರಿಗೆ ಬಾ ಅಲ್ಲಿ ನಿನಗೆ ಈ ಶಬ್ದ ಆಡುವುದನ್ನು ಕೇಳಿಸುತ್ತೇನೆ' ಎಂದನು.

ಕಂಬನ್‌ನಿಗೆ ಪೀಕಲಾಟಕ್ಕಿಟ್ಟುಕೊಂಡಿತು. ಯಾಕೆಂದರೆ ಆ ಶಬ್ದ ಬಳಕೆಯಲ್ಲಿಲ್ಲವೆಂದು ಅವನಿಗೆ ಗೊತ್ತಿತ್ತು. ಅವನು ವಿದ್ಯಾಧಿದೇವತೆಯಾದ ಶಾರದೆಯನ್ನು ಪ್ರಾರ್ಥಿಸಿದನು. 'ಓ ಶಾರದೆಯೇ ನಿನ್ನ ಆಶೀರ್ವಾದದಿಂದ ನಾನು ಕವಿಯಾಗಿದ್ದೇನೆ. ತಮಿಳಿನಲ್ಲಿ ತುಮಿ ಎಂಬ ಶಬ್ದ ಪ್ರಯೋಗದಲ್ಲಿದೆಯೆಂದು ನಾನು ನಾಳೆ ತೋರಿಸಬೇಕಾಗಿದೆ. ನನ್ನ ಕೈ ಬಿಡಬೇಡ'. ಶಾರದೆಯು ಪ್ರಸನ್ನಳಾಗಿ 'ಕಂಬನ್, ನಾಳೆ ನಿನ್ನ ರಾಜ ಮತ್ತು ವಿರೋಧಿ ಒಟ್ಟಕುಟ್ಟನ್‌ನೊಂದಿಗೆ ಇಷ್ಟು ಹೊತ್ತಿಗೆ ಸರಿಯಾಗಿ ಗೊಲ್ಲಕೇರಿಗೆ ಬಾ' ಎಂದಳು. ಮಾರನೇ ದಿನ ಶಾರದೆಯು ಗೊಲ್ಲತಿಯಾಗಿ ವೇಷ ತೊಟ್ಟಳು. ಕಲೆ ವಿಜ್ಞಾನಗಳಿಗೆಲ್ಲ ತನ್ನ ಮಕ್ಕಳಾಗಿ ವೇಷಾಂತರ ಮಾಡುವಂತೆ ಆಜ್ಞಾಪಿಸಿದಳು. ಎಲ್ಲರೂ ಗೊಲ್ಲಕೇರಿಯಲ್ಲಿ ಒಂದು ಗುಡಿಸಿಲಿನಲ್ಲಿ ತಂಗಿದರು. ಕಂಬನು ರಾಜನನ್ನೂ ತನ್ನ ವಿರೋಧಿಯನ್ನೂ ಗುಡಿಸಲಿನ ಎದುರು ಕರೆದುಕೊಂಡು ಬಂದಾಗ, ಒಳಗೆ ಆ ಹೆಂಗಸು ತನ್ನ ಮಕ್ಕಳಿಗೆ 'ತುಮಿಯನ್ನು ಚೆಲ್ಲಬೇಡಿರೋ' ಎಂದು ಎಚ್ಚರಿಕೆ ನೀಡುತ್ತಿದ್ದುದು ಕೇಳಿಸಿತು. ರಾಜ ಮತ್ತು ವಿರೋಧಿಗಳಿಬ್ಬರೂ ಕಂಬನ ಶಬ್ದ ಜ್ಞಾನವನ್ನು ಕಂಡು ಆಶ್ಚರ್ಯಪಟ್ಟರು. ಆದರೆ ಆಮೇಲೆ ಸ್ವಲ್ಪ ದಿನಗಳ ನಂತರ ಒಟ್ಟಕುಟ್ಟನ್ ಮತ್ತೆ ಆ ಶಬ್ದವನ್ನು ಕೇಳಿ ಪರೀಕ್ಷಿಸಿಕೊಳ್ಳಲು ಅಲ್ಲಿಗೆ ಹೋಗಿ ನೋಡಿದರೆ ಅಲ್ಲಿ ಆ ಗುಡಿಸಲಾಗಲೀ

ಹೆಂಗಸು ಮಕ್ಕಳಾಗಲೀ ಇರದೆ ಎಲ್ಲವೂ ಮಾಯವಾಗಿತ್ತು. ಆದರೆ ತುಮಿ ಶಬ್ದ ಮಾತ್ರ ಭಾಷೆಗೆ ಸೇರಿಹೋಗಿತ್ತು.

ಹೀಗೆ ಕವಿಯಾದವನು ಭಾಷೆಗೆ ಕೇವಲ ಮರೆತುಹೋದ ಆರ್ಷೇಯ ಶಬ್ದಗಳನ್ನು ಮಾತ್ರ ಮರಳಿ ತರುವುದಿಲ್ಲ. ಜೊತೆಗೆ ನವಪದ ನಿರ್ಮಾಣವನ್ನೂ ಮಾಡುತ್ತಾನೆ. ಇದುವರೆಗೂ ಯಾರೂ ಕೇಳಿರದಂಥ ಶಬ್ದಗಳನ್ನೂ ಸೃಷ್ಟಿಸಿ ಸೇರಿಸುತ್ತಾನೆ.

ಕಂಬನ್ ರಾಮಾಯಣವನ್ನು ಬರೆದ ಮೇಲೆ ಶ್ರೀರಂಗಮ್‌ನ ವಿಷ್ಣುದೇವಾಲಯದ ಸಭೆಯಲ್ಲಿ ತನ್ನ ರಾಮಾಯಣವು ಒಪ್ಪಿತವಾಗಬೇಕೆಂದು ಬಯಸಿದನು. ತನ್ನ ತಾಳೆಗರಿ ಹಸ್ತಪ್ರತಿಯೊಂದಿಗೆ ಅಲ್ಲಿಗೆ ಹೋದಾಗ ಅಲ್ಲಿನ ಪೂಜಾರಿಗಳು 'ದುರಾದೃಷ್ಟ, ನಾವೇನು ಮಾಡೋಣ. ದೇವಭಾಷೆಯಾದ ಸಂಸ್ಕೃತದಲ್ಲಿ ಅದನ್ನು ಬರೆಯದೇ ತಮಿಳಿನಲ್ಲಿ ನೀನು ಬರೆದಿದ್ದೀಯ. ತಮಿಳು ಕೃತಿಗಳನ್ನು ಪರೀಕ್ಷಿಸಲು ನಮ್ಮಿಂದಾಗದು. ಪ್ರಖ್ಯಾತ ಯಾತ್ರಾಸ್ಥಳ ಮತ್ತು ಶ್ರೇಷ್ಠವಾದ ದೇವಾಲಯ ನಗರಿಯಾದ ಚಿದಂಬರಮ್‌ನಲ್ಲಿ ಶಿವಭಕ್ತರಾದ ಮೂರುಸಾವಿರ ತಮಿಳು ವಿದ್ವಾಂಸರಿದ್ದಾರೆ. ಅವರು ನಿನ್ನ ಕೃತಿಯನ್ನು ಒಪ್ಪುವುದಾದರೆ ನಾವು ಸ್ವೀಕರಿಸಲು ಸಿದ್ಧರಿದ್ದೇವೆ ಎಂದರು. ಕಂಬನ್ ಚಿದಂಬರಂಗೆ ಹೋದನು. ಒಮ್ಮೆಗೇ ಮೂರುಸಾವಿರ ಜನರನ್ನು ಭೇಟಿ ಮಾಡುವುದಾದರೂ ಹೇಗೆ? ಒಬ್ಬೊಬ್ಬರನ್ನೇ ಭೇಟಿ ಮಾಡುತ್ತಾ ಬಂದನು. ಕೆಲವರು ಚಾತುರ್ಯದಿಂದ ತಪ್ಪಿಸಿಕೊಂಡರು. ಕೆಲವರು ಭೇಟಿಯನ್ನು ಮುಂದೂಡುತ್ತ ಹೋದರು. ಕೆಲವರು ತಿಂಗಳುಗಟ್ಟಳೆ ಕಾಯಿಸಿದರು. ಕೊನೆಗೆ ಕಂಬನ್ ವಿಷ್ಣುವನ್ನು ಬೇಡಿಕೊಂಡ. 'ಸ್ವಾಮಿ ನಿನ್ನ ಗೌರವಕ್ಕಾಗಿ ಸಂಪೂರ್ಣ ರಾಮಾಯಣವನ್ನು ರಚಿಸಿದ್ದೇನೆ. ಈ ಕಾವ್ಯ ಪ್ರಕಟಗೊಂಡು ಜನಮನ್ನಣೆ ಗಳಿಸುವುದು ನಿನಗೆ ಇಷ್ಟವಿಲ್ಲವೇ?' ಎಂದು ಪ್ರಾರ್ಥಿಸಿದ. ಆಗ ವಿಷ್ಣು ಪ್ರತ್ಯಕ್ಷನಾಗಿ 'ಕಂಬನ್, ನೀನು ನಾಳೆ ಬೆಳಗ್ಗೆ ಆ ಮೂರುಸಾವಿರ ವಿದ್ವಾಂಸರ ಪ್ರಧಾನ ವಿದ್ವಾಂಸನ ಮನೆಗೆ ಹೋಗು. ಎಲ್ಲರೂ ಹಾವು ಕಡಿದು ಸತ್ತ ಅವನ ಹಿರಿಮಗನ ಸಂಸ್ಕಾರಕ್ಕಾಗಿ ಸೇರಿರುತ್ತಾರೆ. ನನ್ನ ಕಾವ್ಯದ ಸಾಲುಗಳನ್ನು ಓದಿ ಅವನಿಗೆ ಜೀವ ಬರಿಸುತ್ತೇನೆ ಎಂದು ಹೇಳುಹೋಗು' ಎಂದನು.

ಮಾರನೇ ದಿನ ಅಲ್ಲಿಗೆ ಹೋದಾಗ ನಿಜವಾಗಿಯೂ ಪ್ರಧಾನ ವಿದ್ವಾಂಸನ ಹಿರಿ ಮಗ ಹಾವು ಕಡಿದು ಸತ್ತಿದ್ದ. ಮೂರುಸಾವಿರ ವಿದ್ವಾಂಸರೆಲ್ಲರೂ ಸಂಸ್ಕಾರಕ್ಕಾಗಿ ಅಲ್ಲಿ ನೆರೆದಿದ್ದರು. ಕಂಬನ್ ತನ್ನ ಮಹಾಕಾವ್ಯವನ್ನು ನೋಡಿರೆಂದು ಹೇಳಲು, ಅವರು 'ಏನು ಇಲ್ಲಿ ನಮ್ಮ ಪ್ರಧಾನ ಪಂಡಿತರ ಮಗ ಹಾವು ಕಚ್ಚಿ ಸತ್ತು ಬಿದ್ದಿರುವಾಗ ನಿನ್ನ ಕಾವ್ಯವನ್ನು ನಾವು ಓದಬೇಕಾ?' ಎಂದು ರೇಗಿದರು. ತನಗೇನೂ ಗೊತ್ತಿಲ್ಲದೇ ಆಗ ತಾನೇ ಸಾವಿನ ಸುದ್ದಿ ಕೇಳಿದವನಂತೆ ಕಂಬನ್ 'ಹೌದಾ? ಹಾವು ಕಚ್ಚಿತಾ! ಅಯ್ಯೋ ನನಗೆ ಗೊತ್ತೇ ಇರಲಿಲ್ಲವಲ್ಲ! ಇದನ್ನು ನಿವಾರಿಸುವ ಉಪಾಯ ನನಗೆ ಗೊತ್ತಿದೆ' ಎನ್ನುತ್ತಾ ಸರ್ಪಾಸ್ತ್ರದಿಂದ ಘಾತಗೊಂಡ ಲಕ್ಷ್ಮಣನಿಗೆ ಹನುಮಂತನು ಶುಶ್ರೂಷೆ ಮಾಡುವ ಭಾಗದ ಸಾಲುಗಳನ್ನು ತೆಗೆದು ಓದತೊಡಗಿದ. ಮಂತ್ರೋಚ್ಚಾರದ ರೀತಿಯಲ್ಲಿ ಅವನು ಆ ಸಾಲುಗಳನ್ನು ಓದುತ್ತಿದ್ದಂತೆಯೇ ಎಲ್ಲಿಂದಲೋ ಒಂದು ನಾಗರ ಹಾವು ಬಂದು, ಹುಡುಗನ ಗಾಯದಿಂದ ವಿಷವನ್ನು ಹೀರಿ, ವಿದ್ವಾಂಸರು

ನೋಡುನೋಡುತ್ತಿದ್ದಂತೆಯೇ ಸತ್ತು ಬಿದ್ದಿತು. ವಿದ್ವಾಂಸರ ತಂಡವು ಕಂಬನ್‌ನ ಕಾವ್ಯಶಕ್ತಿಯ ಬಗ್ಗೆ ಅತ್ಯಾಶ್ಚರ್ಯಗೊಂಡು ಅವನ ಕಾವ್ಯ ಕೇಳಲು ಕಾತರಗೊಂಡರು. ಉತ್ಸಾಹದಿಂದಲೇ ಅವನ ಕಾವ್ಯದ ಶ್ರೇಷ್ಠತೆಯನ್ನೂ ಮಾನ್ಯ ಮಾಡಿದರು.

ಈ ಭಾಗದಲ್ಲಿ ಕವಿಗಳ ಪವಾಡ ಸದೃಶ ಶಕ್ತಿಯನ್ನೂ, ರಾಮಾಯಣದಂತಹ ಪಠ್ಯಗಳ ಮಾಂತ್ರಿಕ ಅಥವಾ ಪ್ರವಾದಿಕ ಬಳಕೆಯನ್ನೂ ಓದುಗರಿಗೆ ತಿಳಿಸಲಾಗಿದೆ.

ಇಲ್ಲಿಗೆ ಕತೆ ಮುಗಿಯುವುದಿಲ್ಲ. ಶ್ರೀರಂಗಮ್‌ನ ವಿಷ್ಣು ದೇವಾಲಯಕ್ಕೆ ಕಂಬನ್ ಹೋದಾಗ ಅರ್ಚಕರು ಆಗಲೂ ಸಂತೃಪ್ತರಾಗಲಿಲ್ಲ. ಅವರು ಜೈನ ಸಮುದಾಯದ ಒಪ್ಪಿಗೆ ಪಡೆದು ಬರುವಂತೆ ತಿಳಿಸಿದರು. ಆಗ ಕಂಬನ್ ಜೈನರಲ್ಲಿಗೂ ಹೋಗಿ ಅವರ ಸಿದ್ಧಾಂತಗಳೂ ತನ್ನ ರಾಮಾಯಣದಲ್ಲಿ ಇವೆಯೆಂದು ತೋರಿಸಿ ಅವರ ಒಮ್ಮತವನ್ನು ಪಡೆದನು. ಆಮೇಲೆ ಮಹಾ ವಿಮರ್ಶಕನಾದ-ವಿದ್ಯಾವಂತನಾದ ಆಸ್ಥಾನ ವಿದ್ವಾಂಸನೊಬ್ಬನ ಹತ್ತಿರ ಅವನನ್ನು ಕಳಿಸಲಾಯಿತು. ಅವನೂ ಕಂಬನ್‌ನ ಕಾವ್ಯವನ್ನು ಓದಿ ತಲೆದೂಗಿದನು. ಹೀಗೆ ಹಲವಾರು ಭಿನ್ನ ಓದುಗ ಸಮುದಾಯಗಳಿಗೆ ಕಂಬನ್‌ನನ್ನು ಕಳಿಸಲಾಗಿ, ಎಲ್ಲರಿಗೂ ಅವರವರಿಗೆ ಸಂಬಂಧಿಸಿದ ಏನಾದರೂ ತನ್ನ ಕಾವ್ಯದಲ್ಲಿ ಇದೆಯೆಂದು ತೋರಿಸಿ ಸಮ್ಮತಿ ಪಡೆದನು.

ಇಂಥ ತಿರುಗಾಟಗಳಿಂದ ಕಂಬನ್ ನಿಜವಾಗಿಯೂ ತನ್ನ ಶ್ರೋತೃಗಳನ್ನೂ (ಓದುಗರನ್ನು) ಕಟ್ಟಿಕೊಳ್ಳುತ್ತಿದ್ದಾನೆ. ಪಠ್ಯವನ್ನು ತನ್ನ ಹೃದಯಕ್ಕೆ ಸ್ವೀಕರಿಸುವ ಒಂದು 'ಪಠ್ಯ ಸಮುದಾಯ'ವನ್ನು ಸುತ್ತಣ ಸಮಾಜದಿಂದ ಸೃಷ್ಟಿಸುತ್ತಿದ್ದಾನೆ. ಆ ಮೂಲಕ ತನ್ನ ಕಾವ್ಯವು ಸಮಗ್ರ ಸಮುದಾಯವನ್ನೂ ಪ್ರತಿನಿಧಿಸುವ ಒಂದು ಸೂಕ್ಷ್ಮ ಜಗತ್ತು ಎಂಬುದನ್ನು ಸಾಬೀತುಗೊಳಿಸಿದ್ದಾನೆ. ಹೀಗೆ ಇಲ್ಲಿ ಶ್ರೋತೃಗಳು (Audience) ಕೃತಿಯ ಅವಿಭಾಜ್ಯ ಅಂಗವಾಗಿದ್ದಾರೆ.

## ಉಪಸಂಹಾರ

ಕಥೆಯ ನಿಯಮಗಳನ್ನೇ ಮುರಿಯುವ ಕತೆಗಳನ್ನು ಹೇಳುವ ಮೂಲಕ ಈ ಅಧ್ಯಾಯವನ್ನು ಮುಕ್ತಾಯಗೊಳಿಸುತ್ತೇನೆ. ನೀವು ನಿಯಮಗಳನ್ನು ಮುರಿದಾಗ ಏನಾಗುತ್ತದೆ ಎಂಬುದನ್ನು ಇವು ಕಥನ ನಿಯಮಗಳನ್ನು ದೃಢೀಕರಿಸುವ ಮೂಲಕವೇ ತೋರಿಸಿಕೊಡುತ್ತವೆ. ಕನ್ನಡದಿಂದ ಇಂಥಾ ಒಂದು ಉದಾಹರಣೆ ನೋಡಿ.

## ಎಲ್ಲ ಕತೆಗಳ ಮುಕ್ತಾಯಕ್ಕೆ ಒಂದು ಕತೆ

ಕತೆಗಳೆಂದರೆ ಬಲು ಇಷ್ಟವಾದ ಒಬ್ಬ ರಾಜನಿದ್ದ. ಅವನಿಗೆ ತೃಪ್ತಿ ಎನ್ನುವುದೇ ಇರಲಿಲ್ಲ. ಎಷ್ಟು ಹೇಳಿದರೂ ಇನ್ನೂ ಬೇಕು ಬೇಕು ಎನ್ನುತ್ತಿದ್ದ. ಅವನಿಗೆ ಕತೆ ಹೇಳಿಹೇಳಿ ಎಲ್ಲರೂ ಸುಸ್ತಾಗಿದ್ದರು. ಆದರೂ ಅವನು ನನಗೆ ಸಾಕು ಎನ್ನುವಷ್ಟು ಕತೆ ಹೇಳುವವನಿಗೆ ಒಂದು ಸಾವಿರ ಚಿನ್ನದ ನಾಣ್ಯಗಳನ್ನು ಬಹುಮಾನವಾಗಿ ಕೊಡುವುದಾಗಿ ಬೀದಿ ಬೀದಿಯಲ್ಲಿ ಡಂಗುರ ಸಾರಿಸಿದ. ಅನೇಕರು ಕತೆ ಹೇಳಲು ಬಂದು ತಾವೇ ಸೋತು ಹೋದರು.

ಅರಮನೆಯಿಂದ ಹಾಗ ಸೋತು ಹೋಗುತ್ತಿದ್ದ ಒಬ್ಬ ಕತೆಗಾರನಿಗೆ ದಾರಿಯಲ್ಲಿ ಒಬ್ಬ ಬುದ್ಧಿವಂತ ಗೆಳೆಯ ಸಿಕ್ಕ. ಆ ಗೆಳೆಯ ರಾಜನಿಗೆ ಸಾಕೆನ್ನಿಸುವ ದಾರಿ ನನಗೆ ಗೊತ್ತು ಎಂದ.

ಮಾರನೇ ದಿನ ಅವನು ಅರಮನೆಗೆ ಹೋದ. ರಾಜ ಯಥಾರೀತಿ ಕತೆ ಕೇಳಲು ಕೂತ. ಕತೆ ಶುರುವಾಯ್ತು. 'ಒಂದಾನೊಂದು ಕಾಲದಲ್ಲಿ ಒಂದು ದೊಡ್ಡ ಗಿಳಿಹಿಂಡು ಬಂದು ಒಂದು ಮರದ ಮೇಲೆ ಕೂತಿತು. ಆ ಮರದ ಪಕ್ಕವೇ ಒಂದು ಕಣ ಇತ್ತು. ಅಲ್ಲಿ ಕಾಳುಗಳನ್ನು ಆಗತಾನೇ ಒಕ್ಕಿ ರಾಶಿರಾಶಿ ಹಾಕಿದ್ದರು. ಹಿಂಡಿನಿಂದ ಒಂದುಗಿಳಿ ಕೆಳಗೆ ಹಾರಿ ಬಂದು ಕಾಳನ್ನು ಕಚ್ಚಿಕೊಂಡು ಹೋಯಿತು. ಆಮೇಲೆ ಇನ್ನೊಂದು ಗಿಳಿ ಕೆಳಗೆ ಬಂತು ಕಾಳು ಎತ್ತಿಕೊಂಡು ಹೋಯಿತು. ಆಮೇಲೆ ಇನ್ನೂ ಒಂದು ಗಿಳಿ ಕೆಳಗೆ ಬಂದು ಕಾಳು ಎತ್ತಿಕೊಂಡು ಹೋಯ್ತು. ಆಮೇಲೆ ಇನ್ನೂ ಒಂದು ಗಿಳಿ....' ಹೀಗೆ ಗಂಟೆಗಟ್ಟಲೆ ಹೇಳುತ್ತ ಹೋದ. ರೂಢಿಯಂತೆ ರಾಜ ಕೇಳುವಾಗ ತಲೆಹಾಕುತ್ತಾ ಊಗುಟ್ಟಬೇಕಾಗಿತ್ತು. ರಾಜನಿಗೆ ಕೇಳಿದ್ದೇ ಕೇಳಿ ಸುಸ್ತಾಗಿ ನಿದ್ದೆ ಬರುವಂತಾಯ್ತು. 'ನೀನು ಇನ್ನೂ ಎಷ್ಟು ಹೊತ್ತು ಹೀಗೇ ಇನ್ನೂ ಒಂದು ಗಿಳಿ ಕೆಳಗೆ ಬಂತು. ಅದೂ ಕಾಳು ಎತ್ತಿಕೊಂಡು ಹೋಯ್ತು ಅಂತ ಹೇಳ್ತೀಯಾ?' ಎಂದು ಕೇಳಿದ. 'ರಾಶಿಯಲ್ಲಿರುವ ಕಾಳುಗಳೆಲ್ಲ ಮುಗಿಯುವವರೆಗೆ ಪ್ರಭೂ' ಎಂದು ಮತ್ತೆ ಅವನು ಮುಂದುವರೆಸಿದ. 'ಆಮೇಲೆ ಇನ್ನೂ ಒಂದು....' ರಾಜನಿಗೆ ತಡೆಯಲಾಗಲಿಲ್ಲ. ಅವನು ಸೋಲೊಪ್ಪಿಕೊಂಡ. ಹೇಳುಗನಿಗೆ ಸಾವಿರ ಚಿನ್ನದ ನಾಣ್ಯಗಳನ್ನು ಕೊಟ್ಟು ಮನೆಗೆ ಕಳಿಸಿದ.

ಈ ಕತೆಯಲ್ಲಿ ರಾಜನು ನಿಜಕ್ಕೂ ತಾನು ಆಸೆಪಡುವಷ್ಟು ಕತೆಗಳನ್ನು ಕೇಳಿಸಲಾಗದ ಹಿರಿಯರನ್ನು ಪೀಡಿಸುವ ಮಗುವಿನ ಹಾಗೆ. ಇಂಥ ಕತೆಗಳು ಯಾವಾಗಲೂ ಮಕ್ಕಳನ್ನು ರೇಗಿಸಲು (ಪ್ರಸನ್ನಗೊಳಿಸಲು) ಹೇಳುವ ಕತೆಗಳು. ಕಥನದ ಒಪ್ಪಂದದ ಕೆಲವು ಮೂಲ ನಿಯಮಗಳನ್ನು ಈ ಕತೆ ಮುರಿಯುತ್ತದೆ. ಉದಾಹರಣೆಗೆ ಒಂದು ಕಥನವು ಮುಕ್ತಾಯವನ್ನು ಹೊಂದಿರಬೇಕು. 'ಅಲೈಸ್ ಇನ್ ವಂಡರ್‌ಲ್ಯಾಂಡ್'ನಲ್ಲಿ ರಾಣಿಯು ಅಲೈಸ್‌ಗೆ ಹೇಳುವಂತೆ-ಕತೆ ಹೇಳು, ಮುಕ್ತಾಯಕ್ಕೆ ಬಾ, ಮುಗಿಸು ಎಂಬಂತೆ ಇದೊಂದು ಹೇಳುಗನೊಂದಿಗಿನ ಅಘೋಷಿತ ಒಪ್ಪಂದ. ಅವನ ಕತೆ ನೈಜ ಜೀವನದಂತಲ್ಲ, ಮುಗಿಯುವಂಥದ್ದು. ಸಾಮಾನ್ಯವಾಗಿ ಕಲೆ ಮತ್ತು ಸಾಹಿತ್ಯದ ಕೆಲಸವೆಂದರೆ ಯಾವುದು ಅಗಾಧ ಮತ್ತು ಅನಂತವಾದುದೋ ಅದನ್ನು ಒಂದು ಚೌಕಟ್ಟು ಮತ್ತು ರೂಪಕ್ಕೆ ಹೊಂದಿಸುವುದು. ಇವುಗಳ ಆಶಯ ಕೇವಲ ಒಂದೇ ಗಂಟೆಯಲ್ಲಿ ಶಾಶ್ವತತೆಯನ್ನು ಹಿಡಿದಿಡುವುದಷ್ಟೇ ಅಲ್ಲ, ಒಂದೇ ಗಂಟೆಯಲ್ಲಿ ಅದನ್ನೆಲ್ಲ ಒಳಗೊಳ್ಳುವುದೂ ಕೂಡ. ಇವು ನಿಮ್ಮ ಕೈಯಲ್ಲಿ ಜಗತ್ತನ್ನೇ ಹಿಡಿಯುವಂತೆ ಮಾಡುತ್ತವೆ. ಭೂಪಟಕ್ಕೆ ಗಡಿಗಳೆಂಬುವು ಇಲ್ಲ. ಬೋರ್ಗೆಸನ ಭೂಪಟ ತಯಾರಕರ ಕತೆಯನ್ನು ನಾವಿಲ್ಲಿ ನೆನಪಿಸಿಕೊಳ್ಳಬೇಕು. ಆ ಭೂಪಟ ತಯಾರಕರು ತಮ್ಮ ದೇಶದ ಕಲ್ಲು, ಹೊಂಡ, ಪ್ರತಿಯೊಂದನ್ನೂ ಪ್ರತಿನಿಧಿಸುವಂತಹ ಒಂದು ಭೂಪಟ ತಯಾರಿಸಲು ಉದ್ದೇಶಿಸಿದರು. ಪ್ರತಿಸಾರಿ ಪರೀಕ್ಷಿಸಿದಾಗಲೂ ಏನೋ ಒಂದು ಬಿಟ್ಟುಹೋಗಿದೆ ಅನ್ನಿಸಿ, ಮುಳ್ಳು ಪೊದೆಗಳನ್ನು ಬಿಡದಂತೆ ಎಲ್ಲವನ್ನೂ ಗುರ್ತಿಸುತ್ತಾ ಭೂಪಟ ಅಗಲ ಮಾಡುತ್ತಾ ಹೋದರು. ಕೊನೆಗೆ ಭೂಪಟ ಎಷ್ಟು ಅಗಲವಾಯಿತೆಂದರೆ, ಅವರ ದೇಶದಷ್ಟೇ ಅಗಲವಾಯಿತು.

•

ಯಾವುದೇ ಕತೆಯು ತಾನು ಏನನ್ನು ಕಥಿಸುತ್ತದೋ ಅಷ್ಟೇ ಸಮವಿಸ್ತಾರವನ್ನು ಹೊಂದಿರಲಾಗದು, ಹೊಂದಿರಕೂಡದು. ನಿಜ ಜೀವನದಷ್ಟೇ ಅಥವಾ ಕಲ್ಪನೆಯಷ್ಟೇ ಕತೆಯು ದೊಡ್ಡದಾಗುತ್ತಾ ಹೋಗುವುದೆಂದರೆ ಅದು ಹೇಗೆ ಸಾಧ್ಯ? ಕಥನ ಮತ್ತು ವಾಸ್ತವ, ಸಂಕಥನ (Discourse) ಮತ್ತು ಅದರ ವಸ್ತು ಬೇರೆಬೇರೆ ನಿಯಮಗಳನ್ನು ಅನುಸರಿಸುತ್ತವೆ. ಮೊದಲನೆಯವು ಅಂತ್ಯವುಳ್ಳವಾದರೆ ಎರಡನೆಯವು ಅನಂತವಾದವು. ಈಗ ಹೇಳಿದಂತಹ ಕೆಲವು ಅಣಕುಕತೆಗಳನ್ನು ಬಿಟ್ಟರೆ ಮಿಕ್ಕೆಲ್ಲವೂ ಅಂತ್ಯವುಳ್ಳವೇ. ಆದರೂ ಮುಕ್ತಾಯವಿಲ್ಲದಿದ್ದರೂ ಕೂಡ ಈ ಕತೆಗಳೂ ಅಂತ್ಯಗೊಳ್ಳುತ್ತವೆ.

ಅಂತ್ಯವಿಲ್ಲದ ಇನ್ನೊಂದು ರೀತಿಯ ಸರಪಳಿ ಕತೆಯಿದೆ. ಕಥಕನು ಇಲ್ಲಿ ಕೇಳುಗನನ್ನು ಇಬ್ಬಂದಿತನದಲ್ಲಿ ಸಿಕ್ಕಿಸುತ್ತಾನೆ. ಬಹುತೇಕ ಭಾರತೀಯರು ಬಾಲ್ಯದಲ್ಲಿ ಈ ರೇಗಿಸುವ ಕತೆಯನ್ನು ಕೇಳಿರುತ್ತಾರೆ. ಇದು ಮಾಮೂಲಿಯಾಗಿ ಶುರುವಾಗಿ ಹೀಗೆ ಬೆಳೆಯುತ್ತದೆ-

ಒಂದಾನೊಂದು ಕಾಲದಲ್ಲಿ ಒಬ್ಬ ಅಜ್ಜಿ ಇದ್ದಳು. ಅವಳು ಒಂದು ದಿನ ನದಿ ದಾಟುತ್ತಿರುವಾಗ ತನ್ನ ಸೂಜಿಯನ್ನು ನೀರಿನಲ್ಲಿ ಬೀಳಿಸಿಬಿಟ್ಟಳು. ಆ ಸೂಜಿ ಅವಳಿಗೆ ಮತ್ತೆ ಸಿಕ್ಕುತ್ತಾ?

ಮಗು ಹ್ಞೂ ಎಂದು ಹೂಂಗುಟ್ಟುತ್ತದೆ.

ನೀನು ಹೂಂ ಅಂದುಬಿಟ್ಟರೆ ಅವಳಿಗೆ ಆ ಸೂಜಿ ಸಿಕ್ಕಿಬಿಡುತ್ತಾ?

ಇಲ್ಲ.

ನೀನು ಇಲ್ಲ ಅಂದರೆ ಅವಳಿಗೆ ಆ ಸೂಜಿ ಸಿಕ್ಕಿ ಬಿಡುತ್ತಾ?

ಅಯ್ಯೋ ಅದಕ್ಕೆ ನಾನೇನು ಹೇಳ್ಲಿ?

ನೀನು 'ಅಯ್ಯೋ ಅದಕ್ಕೆ ನಾನೇನು ಹೇಳ್ಲಿ' ಅಂದರೆ ಅವಳಿಗೆ ಆ ಸೂಜಿ ಸಿಕ್ಕಿಬಿಡುತ್ತಾ?

ಮೌನ.

ನೀನು ಏನೂ ಹೇಳ್ದೆ ಸುಮ್ನೆ ಇದ್ದುಬಿಟ್ರೆ ಅವಳಿಗೆ ಆ ಸೂಜಿ ಸಿಕ್ಕಿಬಿಡುತ್ತಾ?

ಹೀಗೆ ಕೇಳುವ ಮಗುವಿಗೆ ಕೊನೆಗೆ ರೇಗಿ ಹೋಗಿ ಹೇಳುಗನಿಗೆ ಹೊಡೆಯುವ- ಕೈಗೆ ಸಿಕ್ಕಿದ್ದನ್ನು ಎಸೆಯುವವರೆಗೆ ಕತೆ ಮುಂದುವರೆಯುತ್ತಲೇ ಹೋಗುತ್ತದೆ. ಈ ರೀತಿಯ ಕತೆಗಳೂ ಕೂಡ ಕಥನ ನಿಯಮಗಳನ್ನು ಮುರಿಯುತ್ತವೆ. (ಕತೆಯ ಹೊರಗಿನ) ಕೇಳುಗನನ್ನು (ಕತೆಯ ಒಳಗಿನ) ಪಾತ್ರಗಳ ಸ್ಥಿತಿಗತಿಗೆ ಜವಾಬ್ದಾರರನ್ನಾಗಿ ಮಾಡುತ್ತವೆ. ಹೀಗೆ ಸಂವಾದಕ್ಕೆ ಒಂದು ಅಂತ್ಯವಿಲ್ಲದೆಯೇ ಕತೆಯು ಮುಕ್ತಾಯಗೊಳ್ಳುತ್ತದೆ. ಕೋಪದ, ಕೆರಳುವಿಕೆಯ ಆರಂಭವೇ ಕತೆಯ ಕೊನೆ.

ಯಾವುದೇ ಗಂಭೀರವಾದ ಭಾರತೀಯ ಸಂಸ್ಕೃತಿ ಶೋಧನೆಗೆ ಮೌಖಿಕ ಸಂಪ್ರದಾಯದ ಪ್ರಾಮುಖ್ಯತೆ ಎಷ್ಟು ಎಂದು ಮತ್ತು ಮೌಖಿಕ ಸಂಪ್ರದಾಯವು ಹೇಗೆ ಇನ್ನಿತರ ಮಾಧ್ಯಮಗಳನ್ನು ಪೋಷಿಸಿದೆ ಎಂದು ಮಾತನಾಡುತ್ತಾ ಈ ಲೇಖನವನ್ನು ಆರಂಭಿಸಿದೆ. ಇವತ್ತು ಹಳ್ಳಿಯ ಕುಟುಂಬಗಳು ಕೂಡಾ ವಿದ್ಯುನ್ಮಾನ ಮಾಧ್ಯಮಗಳ ಸಂಪರ್ಕ ಹೊಂದಿವೆ. (ವರದಕ್ಷಿಣೆಯ

ಸಾಮಾನ್ಯವಾಗಿ ಟಿ.ವಿ ಸೆಟ್ಟನ್ನು ಹೊಂದಿರುತ್ತವೆ) ಈ ಹೊಸ ಅಥವಾ ನವ ಮೌಖಿಕತೆಯು (Secondary Orality) ಮೂಲ ಮೌಖಿಕ ಜಗತ್ತನ್ನು ಗಂಭೀರವಾಗಿ ಮಾರ್ಪಡಿಸುತ್ತಿದೆ. ಆದರೆ ಹೊಸ ಮಾಧ್ಯಮವು ನಾವು ಈಗಾಗಲೇ ಕಂಡಿರುವಂತೆ ಮೌಖಿಕ ಸಂಪ್ರದಾಯವನ್ನು ಒಳಗು ಮಾಡಿಕೊಂಡಿದೆ ಮತ್ತು ಸ್ಥಳೀಯವನ್ನು ಸ್ಥಳೀಯಾಂತರವನ್ನಾಗಿ (Translocal) ಮಾಡಿದೆ. ಇಂಥ ರಾಷ್ಟ್ರೀಕರಣವು ವಿಶೇಷವಾಗಿ ರೇಡಿಯೊ ಅಥವಾ ಟಿವಿಗಳು ಸರ್ಕಾರದಿಂದ ನಿಯಂತ್ರಿತಗೊಳ್ಳುವಂತಹ ರಾಷ್ಟ್ರದಲ್ಲಿ ಒಂದು ರಾಷ್ಟ್ರೀಯ ಚರ್ಚೆಯ ವಿಷಯವಾಗಿದೆ. ಆದಾಗ್ಯೂ ಭಾರತದಲ್ಲಿ- ಎಲ್ಲ ಕಡೆಯೂ- ವಿದ್ಯುನ್ಮಾನ ಮಾಧ್ಯಮವು ಜ್ಞಾನ ಮತ್ತು ಕಲೆಗಳನ್ನು ವಿಕೇಂದ್ರೀಕರಣಗೊಳಿಸುವ ಮತ್ತು ಪ್ರಜಾಪ್ರಭುತ್ವೀಕರಣಗೊಳಿಸುವ ಮೂಲಕ ಮಾನವ ಎಲ್ಲೆಕಟ್ಟುಗಳಿಗಾಗಿ ದುಡಿಯಲಿದೆ. ಈ ಕೆಳಗಿನ ದೃಷ್ಟಾಂತ ಹೇಳುವಂತೆ ಎಲ್ಲ ರೀತಿಯ ಮೌಖಿಕ ಕಥನಗಳೂ ಮಾನವೀಯವಾಗಿರುವುದರ ಭಾಗಗಳೇ.

ಒಬ್ಬನು ಮನಸ್ಸಿನ ಬಗೆಗೆ ತಿಳಿದುಕೊಳ್ಳಬೇಕೆಂದು ಆಸೆಪಟ್ಟನು. ಆಕೃತಿಕವಾಗಿ ಅಲ್ಲ. ಆದರೆ ತನ್ನ ದೊಡ್ಡ ಖಾಸಗಿ ಕಂಪ್ಯೂಟರಿನಲ್ಲಿ. ಗುಂಡಿಗಳನ್ನೊತ್ತಿ ಆ ಕಂಪ್ಯೂಟರಿಗೆ (ಅನುಮಾನವೇ ಇಲ್ಲ. ಅದು ಅತ್ಯುತ್ತಮ ಫೋರ್‌ಟ್ರಾನೇ.) 'ಮನುಷ್ಯನ ಹಾಗೇ ಯೋಚಿಸುವಂಥಾ ಮನಸ್ಸನ್ನು ನೀನು ಮಾಡುವೆಯಾ?' ಎಂದು ಕೇಳಿದನು. ಆ ಯಂತ್ರವು ಸ್ವಾಭಾವಿಕವಾಗಿ ತನ್ನದೇ ಗಣಕೀಕೃತ ರೂಢಿಯಂತೆ ಕೆಲಸ ಮಾಡಲಾರಂಭಿಸಿತು. ಎಲ್ಲ ಕಂಪ್ಯೂಟರ್‌ಗಳೂ ಮಾಡುವಂತೆ ಅದೂ ತನ್ನ ಉತ್ತರವನ್ನು ಸಿದ್ಧಗೊಳಿಸಿತು. ಒಂದು ತುಂಡು ಹಾಳೆಯಲ್ಲಿ ಮುದ್ರಿಸಿತು. ಅವನು ಆತುರದಿಂದ ಏನು ಉತ್ತರ ಬಂದಿರಬೇಕೆಂದು ತೆಗೆದು ನೋಡಿದಾಗ ನೀಟಾಗಿ ಹೀಗೆ ಮುದ್ರಿಸಲಾಗಿತ್ತು. **'ಅದು ನನಗೊಂದು ಕತೆಯನ್ನು ನೆನಪಿಸುತ್ತಿದೆ'.**

**ಗೋಡೆಗಳಿಗೆ ಇದನ್ನು ಹೇಳಿ**

**- ಭಾರತೀಯ ಸಂಸ್ಕೃತಿಯಲ್ಲಿನ ಜಾನಪದ ಕತೆಗಳ ಕುರಿತು**

ಲಿಯೋನಾರ್ಡ್ ಎ ಗೋರ್ಡಾನ್ ಮತ್ತು ಫಿಲಿಪ್ ಓಲ್ಡೆನ್‌ಬರ್ಗ್ ಸಂಪಾದಿಸಿದ 'ಇಂಡಿಯಾ ಬ್ರೀಫಿಂಗ್' ಎಂಬ ಪುಸ್ತಕಕ್ಕಾಗಿ ವಿಶೇಷವಾಗಿ ಎ. ಕೆ. ರಾಮಾನುಜನ್ ಅವರು ಬರೆದ ಲೇಖನವಿದು. ಇದನ್ನಿಲ್ಲಿ ಮರು ಮುದ್ರಿಸಲಾಗಿದೆ.

- (ಬೌಲ್ಡರ್ ಕೊಲರಾಡೊ : ವೆಸ್ಟ್‌ವ್ಯೂ ಪ್ರೆಸ್, ೧೯೯೨)



---

ರಾಮಲಿಂಗಪ್ಪ. ಟಿ. ಬೇಗೂರು. ನಂ. ೪೫೮, ೨ನೇ ಮೈನ್ ೯೦ನೇ ಕ್ರಾಸ್, ಪಿ.ಕೆ.ಎ. ಬನಶಂಕರಿ ೩ನೇ ಹಂತ, ೩ನೇ ಸ್ಟೇಜು, ಬೆಂಗಳೂರು - ೮೫, ದೂರವಾಣಿ : ೬೮೯೦೨೦೯

# ಸಂಗೀತ : ಹೊಸ ಚರ್ಚೆ

ಇಂಗ್ಲಿಷ್ ಮೂಲ : ರಾಘವ ಆರ್. ಮೆನನ್
ಕನ್ನಡಕ್ಕೆ : ಆರ್. ವಿಜಯರಾಘವನ್

ಡಾ॥ ಎಸ್. ರಾಧಾಕೃಷ್ಣನ್ ಬನಾರಸ್ ಹಿಂದೂ ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿದ್ದಾಗ ಅಲನ್‌ಡೇನಿಲ್ಲೋವ್ ಒಂದು ಮಾತು ಹೇಳಿದ್ದರು: "ಪಾಶ್ಚಿಮಾತ್ಯ ಶಾಸ್ತ್ರೀಯ ಸಂಗೀತವನ್ನು ಹಂಚಿಕೊಳ್ಳುವಂತೆ ಭಾರತೀಯ ಶಾಸ್ತ್ರೀಯ ಸಂಗೀತವನ್ನು ಹಂಚಿಕೊಳ್ಳಲಾಗುವುದಿಲ್ಲ. ಭಾರತೀಯ ಶಾಸ್ತ್ರೀಯ ಸಂಗೀತ ಸಂಪೂರ್ಣ ಮೌಖಿಕ ಪರಂಪರೆಯಲ್ಲಿ ಹರಿದು ಬರುವಂಥದ್ದು ಮತ್ತು ತುಂಬ ಖಾಸಗಿಯಾದದ್ದು. ರಾಗಗಳು ಇಲ್ಲಿ ಅತ್ಯಲ್ಪ ಕಾಲ ಬದುಕುತ್ತವೆ; ಈ ಕ್ಷಣ ಹುಟ್ಟಿ ಮರುಕ್ಷಣ ಸತ್ತುಹೋಗುತ್ತವೆ." ಅಂದೂ ಸಹ ಈ ಮಾತು ಕಲೆಯ ಕೊಡುಕೊಳ್ಳುವಿಕೆಯ ವಿಚಾರದಲ್ಲಿ ಬಹಳ ಗಂಭೀರವಾದ ಅಭಿಪ್ರಾಯವಾಗಿ ತೋರಿತ್ತು. ರಾಗದ ಪರಂಪರೆಯು ವೈಯಕ್ತಿಕ ಸಾಧನೆಯೆಂದು, ಅದು ಹಾಗೆಯೇ ಇರಬೇಕಾಗಿರುವುದೆಂದು ಎಲ್ಲರೂ ಬಲ್ಲರು. ಕಲೆಯನ್ನು ಶೈಕ್ಷಣಿಕ ಶಿಸ್ತಿಗೆ ಒಳಪಡಿಸಲು ಸಾಧ್ಯವಾಗದೆ ಹೋಗುವುದಕ್ಕೆ ಇರುವ ಹಲವು ಕಾರಣಗಳಲ್ಲಿ ಇದೂ ಒಂದಾಗಿರಬೇಕು. ಜ್ಯೂಲಿಯರ್ಡ್ ಮತ್ತು ಸಂತ ಸಿಸೀಲಿಯಾರ ಹಾಗೆ.

ರಾಗದ ಸಂಗೀತವನ್ನು ಆಧ್ಯಾತ್ಮಿಕ ಸಾಧನೆಯೆಂದು ಗ್ರಹಿಸಲಾಗಿದೆ ಹಾಗೂ ಅದನ್ನು ಹಾಗೆಯೇ ಒಪ್ಪಿಕೊಳ್ಳಲಾಗಿದೆ ಎಂಬ ತಿಳಿವಳಿಕೆಯು ಈ ಬಿಕ್ಕಟ್ಟಿನ ಕಾರಣಗಳಲ್ಲಿ ಒಂದು. ಕಲೆಯ ಶಿಷ್ಯನನ್ನು ಮಾಯದ ಮೋಡಿಗೆ ಒಳಪಡಿಸಿ, ದಾರಿತಪ್ಪಿಸಿ, ಆಧ್ಯಾತ್ಮದ ಹಾದಿಗೆ ಕೊಂಡೊಯ್ಯುವುದು ಈ ತಿಳಿವಳಿಕೆಯ ಉದ್ದೇಶವಾಗಿತ್ತು. ಒಮ್ಮೆ ಆತ ಗಮ್ಯಕ್ಕೆ ತಲುಪಿದನೆಂದರೆ ಅಲ್ಲಿಂದ ಮರಳಿ ಬರುವ ಮಾತಿಲ್ಲ! ಆದಾಗ್ಯೂ ಈ ಶತಮಾನದಲ್ಲಿ ರಾಗವಿದ್ಯೆಯ ಕುರಿತ ತಿಳಿವಳಿಕೆಯಲ್ಲಿ ಹಲವಾರು ಬದಲಾವಣೆಗಳಾಗಿವೆ. ಇದಕ್ಕೆ ಮೊದಲ ಕಾರಣ ಧ್ವನಿಮುದ್ರಕ ಕಂಪೆನಿಗಳು ಭಾರತದೊಳಕ್ಕೆ ಕಾಲಿರಿಸಿದ್ದು. ಮೊದಲ ಕಂಪೆನಿಯು ೧೯೧೦ರ ಸುಮಾರಿಗೆ ಕಲ್ಕತ್ತಾ ನಗರದ ಸಮೀಪದ ಡಂಡಂನಲ್ಲಿ ಕಾರ್ಖಾನೆ ಪ್ರಾರಂಭಿಸಿತು. ಈ ಘಟನೆ ಒಂದರ್ಥದಲ್ಲಿ ರಾಗದ ಸತ್ವವನ್ನು ಪುನರಾವರ್ತಿಸಲು ಆಗದು ಎಂಬ ನಂಬಿಕೆಯನ್ನು ಸಾವಗೆಡವಿತು. ರಾಗಗಳು

ಎಂದೆಂದೂ ಕಾಲಾತೀತವೂ ಇತಿಹಾಸರಹಿತವೂ ಆಗಿದ್ದವು. ಹೇಗೆ ಹಳೆಯ ನದಿಗಳೂ, ಹಳೆಯ ಸಾಗರಗಳೂ, ಹಳೆಯ ಗಾಳಿಯೂ ಇರಲು ಸಾಧ್ಯವಿಲ್ಲವೋ ಹಾಗೆ ಹಳೆಯ ರಾಗಗಳೂ ಇರಲು ಸಾಧ್ಯವಿಲ್ಲ. ಅವೆಲ್ಲವೂ ಚಲನಶೀಲಾತ್ಮಕ, ಕ್ಷಣ ಕ್ಷಣಗಳಿಗೂ ಸಮಕಾಲೀನವಾದಂಥವು. ಯಾವುದೋ ಒಂದು ಅಭಿವ್ಯಕ್ತಿಯನ್ನು ಅದರ ತಳದೊತ್ತಾಯವಿಲ್ಲದೆಯೂ, ಅದರ ಆತ್ಮವಿಲ್ಲದೆಯೂ ಅಕ್ಷರಶಃ ಅದರೆಲ್ಲಾ ಸೂಕ್ಷ್ಮ ಭೌತಿಕ ಸ್ವರೂಪದಲ್ಲಿ ಮತ್ತೆ ಪ್ರತ್ಯಕ್ಷಗೊಳಿಸಬಹುದೆಂಬ ತಾಂತ್ರಿಕ ಆವಿಷ್ಕಾರದ ಆಧುನಿಕ ವಿಚಾರದಿಂದಲೇ ರಾಗದ ಸಾರ್ವಭೌಮ ಪರಮಾಧಿಕಾರವು ಸೂಕ್ಷ್ಮವಾಗಿ ಲುಪ್ತವಾಗಿ ಹೋಗಿತ್ತು.

ಈ ಕೃತ್ರಿಮವು ಭಾರತೀಯ ಸಂಗೀತಜ್ಞನ ಭೌತಿಕ ಗುಣಧರ್ಮಗಳನ್ನೆಲ್ಲಾ ಬದಲಿಸಿಬಿಟ್ಟಿಲ್ಲ. ಅಷ್ಟೇ ಅಲ್ಲ, ಅವನ ಸ್ಮೃತಿಯ ಸ್ವರೂಪವನ್ನು ವ್ಯತ್ಯಸ್ತಗೊಳಿಸಿ ಕಲೆಯ ಸಂವಹನದ ವಿಧಾನವನ್ನೂ, ಯಾವುದನ್ನವನು ತನ್ಮಯತೆಯೆಂದು ಕರೆಯುತ್ತಿದ್ದನೋ ಅದನ್ನೂ ಸಾರಾಸಗಟಾಗಿ ಬದಲಾಯಿಸಿಬಿಟ್ಟಿತು. ಶ್ರೋತೃವಾಗಿ ಕಛೇರಿಗಳಿಗೆ ಹೋಗುತ್ತಿದ್ದ ಹಳೆಯ ವಿಧಾನವೊಂದು ಮುಂದೆ ಅಗತ್ಯವಾಗಿ ಉಳಿಯಲಿಲ್ಲ. ಶಬ್ದ ತರಂಗಗಳ ಧ್ವನಿವರ್ಧನೆ ಹಾಗೂ ಮತ್ತೆ ಮತ್ತೆ ಕೇಳುವ ಸೌಲಭ್ಯವು ಸಂಗೀತವನ್ನು ಒಂದು ಕ್ಯಾಶುವಲ್ ವಿಚಾರವನ್ನಾಗಿಸಿತು. ಹಿಂದೆ ಸಂಗೀತಗಾರನೊಬ್ಬ ಹಾಡುತ್ತಿದ್ದರೆ ಅವನ ಶ್ರೋತೃಗಳು ಅವನನ್ನು ಎಂತಹ ತನ್ಮಯತೆಯಿಂದ ಕೇಳುತ್ತಿದ್ದರೆಂದರೆ ಅವರು ಸಾಯುವ ಮನುಷ್ಯನೊಬ್ಬನ ಕೊನೆಯ ಮಾತುಗಳನ್ನು ಕೇಳುತ್ತಿರುವವರಂತೆ ಭಾಸವಾಗುತ್ತಿದ್ದರು. ಏಕೆಂದರೆ ಆ ಸ್ಪರ್ಶ, ಆ ಗಮಕ ಅಥವಾ ಆ ವರ್ಣ ಮತ್ತೆಂದೂ ಮರಳಿ ಬಾರದ ಸ್ಪರ್ಶ, ಗಮಕ, ವರ್ಣಗಳಾಗಿರುತ್ತಿದ್ದವು.

ಪಂಡಿತ ವಿಷ್ಣು ದಿಗಂಬರ ಪಾಲುಸ್ಕರ ಬಹುದೊಡ್ಡ ಸಂಗೀತ ವಿದ್ವಾಂಸ ಹಾಗೂ ಅಷ್ಟೇ ದೊಡ್ಡ ಪ್ರಚಾರಕ. ಈತ ಕಲೆಗೆ ಹೊಸ ಚೈತನ್ಯದ ಆಯಾಮವೊಂದನ್ನು ದೊರಕಿಸಿಕೊಡಲು ಬಹಳ (ಹತಾಶೆಯ) ಪ್ರಯತ್ನವನ್ನು ಮಾಡಿದವರು. ಇವರು ಬಂದಿಷ್ಟನ್ನು ಸಂಗೀತಕ್ಕೆ ಅಳವಡಿಸುತ್ತಿದ್ದುದ್ದು ಹೇಗೆಂದರೆ, ಸಂಗೀತಗಾರರಲ್ಲಿ ಮತ್ತು ಘರಾನಾಗಳಲ್ಲಿ ಪ್ರತಿಯೊಂದು ರಚನೆಯ ನಡೆ ಹಾಗೂ ಬಂಧಕ್ಕೆ ಸಂಬಂಧಪಟ್ಟಂತೆ ಪ್ರಾಥಮಿಕವಾಗಿ ಒಮ್ಮತವನ್ನು ರೂಪಿಸುವತ್ತ ಅದು ದುಡಿಯುತ್ತಿತ್ತು. ಈ ಮನೋಧರ್ಮವನ್ನೇ ಈಗಲೂ ಸಹ ಆತನ ವಿಖ್ಯಾತ ಗಂಧರ್ವ ಮಹಾವಿದ್ಯಾಲಯದಲ್ಲಿ ಬೋಧಿಸಲಾಗುತ್ತಿದೆ. ಆನಂತರ ಪಂಡಿತ ಭಾತ್ಕಂಡೆ ಈ ಕ್ಷೇತ್ರದಲ್ಲಿ ಸ್ಮರಣೀಯ ಕೆಲಸ ಮಾಡಿದರು. ಬ್ರಿಟಿಷ್ ವಿದ್ಯಾಭ್ಯಾಸ ನೀತಿಯು ರಾಷ್ಟ್ರಾದ್ಯಂತ ಬಹುವೇಗವಾಗಿ ಹರಡುತ್ತಿದ್ದ ಶಿಕ್ಷಣ ಕ್ರಮಕ್ಕೆ ಅನುಸಾರವಾಗಿ ಶಾಲಾ ಕೊಠಡಿಯ ಪಾಠದ ಸ್ವರೂಪದಲ್ಲಿ ಕಲೆಯ ತತ್ವಗಳನ್ನು ಹೇಳಿಕೊಡಲಾಗುತ್ತಿತ್ತು. ಪಂಡಿತ್ ಜೀ ಇದನ್ನು 'ತಾನ್‌ಸೇನರ ಬದಲಿಗೆ ನೂರಾರು ಕಾನ್‌ಸೇನರನ್ನು ಸೃಷ್ಟಿಸಲು ಸಂಗೀತಕ್ಕೊದಗಿದ ಅವಕಾಶ' ಎಂದು ವಿವರಿಸುತ್ತಿದ್ದರು. ಪಂಡಿತ ಭಾತ್ಕಂಡೆಯವರಿಗೆ ಭಾರತೀಯ ಶಾಸ್ತ್ರೀಯ ಸಂಗೀತವನ್ನು ಅದರ ಶುದ್ಧ ಹಾಗೂ ಸ್ವಾಭಾವಿಕ ಸ್ವರೂಪದಲ್ಲಿ ಕಲಿಸಿಕೊಡುವುದು ಕಷ್ಟಕರವೆಂಬುದು ತಿಳಿದಿತ್ತು.

ಏಕೆಂದರೆ ಕಲೆಯ ವಿಷಯದ ಜ್ಞಾನ ಅಭಿವ್ಯಕ್ತಿಗಳಿಗೂ, ಸಂವಹನ ಪ್ರಕ್ರಿಯೆಯಲ್ಲಿರುವ ಕಲೆಗೂ ಯಾವ ಸಂಬಂಧವೂ ಇರುವುದಿಲ್ಲ. ಅದೇನಿದ್ದರೂ ಒಳಗೇ ನಡೆಯುವ ರೂಪಾಂತರಕ್ಕೆ ಸಂಬಂಧಪಟ್ಟಿದ್ದು. ಪಂಡಿತ ವಿಷ್ಣು ದಿಗಂಬರರ ಕಾಲದ ಗುರು, ಶಿಷ್ಯರಿಗೆ ಟಿಪ್ಪಣಿಗಳನ್ನು

ಬರೆದುಕೊಳ್ಳಲು ಬಿಡುತ್ತಿರಲಿಲ್ಲ. ಕಲೆಯ ಎಲ್ಲಾ ಅಂಶಗಳೂ ಶಿಷ್ಯನ ವ್ಯಕ್ತಿತ್ವದ ತಿರುಳಿನಂತೆ, ಆತನ ಭಾವಕೋಶದ ಬೀಜದೊಳಗಿನ ಅಂಕುರದಂತೆ ಆಗಿ ಹೋಗಬೇಕು, ಜ್ಞಾನದ ಕೌಶಲ್ಯದ ಭಾಗವಾಗಿ ಅಲ್ಲ ಎಂಬಲ್ಲಿ ಅವರ ಲಕ್ಷ್ಯವಿತ್ತು. ಈ ಕಾರಣದಿಂದಲೇ ಹಿಂದೂಸ್ಥಾನಿ ಶಾಸ್ತ್ರೀಯ ಸಂಗೀತವನ್ನು ಸಮಾಜದ ಮುಖ್ಯ ಪ್ರವಾಹದಿಂದ- ಬಹುಜನ ಸಾಮಾಜಿಕ ಬದುಕಿನಿಂದ- ಬಹು ಸೂಕ್ಷ್ಮವಾಗಿ ಪ್ರತ್ಯೇಕಿಸಿ ಇಡಲಾಗಿತ್ತು. ಸಂಗೀತವನ್ನು ಅಪಾಯಗಳಿಂದ ರಕ್ಷಿಸುವಂತೆ, ಹೊಂಚಿಕೂತ ಉಪದ್ರವಗಳಿಂದ ಕಾಪಾಡುವಂತೆ ಈ ಯೋಜನೆಯಿತ್ತು.

ಶಿಷ್ಯರು ಕಲೆಯನ್ನು ಗಂಭೀರವಾಗಿ ಪರಿಗಣಿಸಿ ತಮ್ಮ ಬದುಕನ್ನು ಕಲೆಗಾಗಿಯೇ ಮುಡುಪಿಟ್ಟಾಗ ಬಹಳ ಕುತೂಹಲಕಾರಿಯಾಗಿ, ಊಹಿಸಲು ಅಸಾಧ್ಯವಾದ ರೀತಿಯಲ್ಲಿ ಅವರು ದಕ್ಕಿಸಿಕೊಂಡ ಕಲೆಯೇ ಅವರಿಗೆ ಬಿಡುಗಡೆಯನ್ನು ತಂದುಕೊಟ್ಟು ಬಿಡುತ್ತಿತ್ತು. ಇದಕ್ಕೆ ಹಲವಾರು ಉದಾಹರಣೆಗಳಿದ್ದವು. ಅಂದರೆ ಶಿಷ್ಯ ಬಂಡುಕೋರನೋ, ಸಮಾಜದ್ರೋಹಿಯೋ ಆದನೆಂದು ಅರ್ಥವಲ್ಲ. ಅವುಗಳನ್ನು ಕಲಿಸುವುದು ತುಂಬ ಸುಲಭ. ಶಿಷ್ಯ ಅಂದಿನ ಸಿದ್ಧ ಮೌಲ್ಯಗಳಿಗೂ ಸಾಮಾಜಿಕ ವ್ಯವಸ್ಥೆಗೂ ಸೊಪ್ಪು ಹಾಕಲಿಲ್ಲ, ಕಿಮ್ಮತ್ತುಕೊಡಲಿಲ್ಲ. "ಮಹಮದಾಲಿ ಜಿನ್ನಾ ಬಾನುಲಿ ಸ್ಟೇಷನ್‌ಗೆ ಭೇಟಿ ನೀಡುತ್ತಿದ್ದಾರೆ. ಒಂದು ತಾಸಿನ ನಂತರ ಕಾರ್ಯಕ್ರಮ ನೀಡಲು ಸಾಧ್ಯವಾ?" ಎಂದು ಮಹಾನ್ ಸಾರಂಗಿ ವಾದಕ ನವಾಜ್ ಉಸ್ತಾದ್ ಬುಂಡು ಅಲಿಖಾನ್‌ರನ್ನು ಕೇಳಲಾಯಿತು. "ಹಾಗೋ, ದಯಮಾಡಿ ಆತನೊಂದಿಗೆ ನುಡಿಸಲು ಅವಕಾಶ ಮಾಡಿಕೊಡಿ. ನಾನು ಈ ಹಿಂದೆ ಎಂದೂ ಆತನೊಂದಿಗೆ ಸಾರಂಗಿ ನುಡಿಸಿಲ್ಲ' ಎಂದು ಖಾನ್ ವಿನಂತಿಸಿಕೊಂಡರಂತೆ.

"ಜಿನ್ನಾ ಮುಸ್ಲಿಂ ಲೀಗ್‌ನ ಅಧ್ಯಕ್ಷ, ಕಡೆಗೂ ಭಾರತಕ್ಕೆ ಬಿಡುಗಡೆ ಲಭಿಸುತ್ತಿರುವುದು ತಮಗೆ ತಿಳಿಯದೇ?" ಎಂದು ಸ್ಟೇಷನ್ ಡೈರೆಕ್ಟರ್ ಖಾನ್‌ರನ್ನು ಪ್ರಶ್ನಿಸಿದರು. ಉಸ್ತಾದ್ ತಮ್ಮ ಎಲ್ಲ ಮುಗ್ಧತೆಯಲ್ಲಿ ಕೇಳಿದರು: "ಬಿಡುಗಡೆಯೇ? ಯಾರಿಂದ?" ತಾವು ಬಯಸುವುದಕ್ಕಿಂತ ಕಡಿಮೆ ಸ್ವಾತಂತ್ರ್ಯ ತಮಗಿರುವುದೆಂದೊ, ಯಾರಾದರೂ ಬೇರೆ ಯಾರಿಗಾದರೂ ಬಿಡುಗಡೆ ತಂದುಕೊಡಬಲ್ಲರೆಂದೊ ಅವರಿಗೆ ಎಂದೂ ಅನ್ನಿಸಿರಲಿಲ್ಲ. ನಿಜವಾದ ಬಿಡುಗಡೆ ಒಂದು ಮಾನಸಿಕ ಅವಸ್ಥೆ. ಬಿಡುಗಡೆ ಪಡೆಯಲು ಹಿಡಿಯುವ ಬೇರೆ ಯಾವ ಮಾರ್ಗಕ್ಕೂ ಅರ್ಥವಿಲ್ಲ. ಅದು ನಮ್ಮನ್ನು ಮತ್ತಷ್ಟು ದಾಸ್ಯಕ್ಕೆ ದೂಡೀತು ಅಷ್ಟೆ!

ಬಹಳ ಹಿಂದಿನಿಂದಲೂ ಹಿಂದೂಸ್ಥಾನೀ ಸಂಗೀತಕ್ಕೆ ಒದಗಿದ ಸಮಸ್ಯೆಯಿದು. ಅಪ್ರತಿಮ ಸಂಗೀತ ಸಾಧಕರಲ್ಲಿ ಪ್ರತಿಯೊಬ್ಬನೂ ತನ್ನ ಸಾಧನೆಯ ಕಾಲದ ಆರಂಭದಲ್ಲಿಯೇ ಮನೆ ಬಿಟ್ಟು ಓಡಿಹೋಗಬೇಕಾಗಿ ಬಂದದ್ದಕ್ಕೆ ಕಾರಣವೂ ಇದೇನೆ. ಸ್ವಲ್ಪ ಮಟ್ಟಿಗೆ ಕರ್ನಾಟಕ ಸಂಗೀತ ಪರಂಪರೆ ಕಲೆಯನ್ನು ಇಂತಹ ಅಪಾಯಗಳಿಂದ ದೂರಮಾಡಲು ಮೊದಮೊದಲೆ ಕೆಲವು ಕ್ರಮಗಳನ್ನು ಕೈಗೊಂಡಿತ್ತು. ಸಂಗೀತ ತಂತ್ರದ ಮೇಲೆ ಸಂಪ್ರದಾಯವು ಕಟ್ಟುನಿಟ್ಟಿನ ನಿಗಾವಹಿಸಿ ನೆರವಲ್, ಸ್ವರ-ಪ್ರಸ್ತಾರ, ಆಲಾಪನೆ ಮತ್ತು ಲಯ ವಿನ್ಯಾಸದಲ್ಲಿನ ಮನೋಧರ್ಮಕ್ಕೆ ಅಗ್ನಿಸ್ಪರ್ಶಗೊಂಡು ಹೊಳೆಯುತ್ತ ಸುತ್ತುವ ಭೂಚಕ್ರದಂತಹ ಅದ್ಭುತ ಸೌಂದರ್ಯದ ಲಯಾತ್ಮಕ ಸಂಚಲನೆಯನ್ನು ಒದಗಿಸಿಕೊಟ್ಟಿತು. ಅದೇ ವೇಳೆ ರಾಗದೊಂದಿಗಿನ ಧ್ಯಾನಾವಸ್ಥೆ ಹಾಗೂ ಮಾನಸಿಕ ಅನುಸಂಧಾನದಲ್ಲಿ ತೊಡಗುವ ಅಪಾಯಗಳಿಂದ ದೂರ ಉಳಿಯಿತು. ಘರಾನಾ

ಎಂಬ ಪರಂಪರೆಯೊಳಗೆ ಬಂದಿಷ್ ಅನ್ನು ತನ್ನೊಳಗಿನಿಂದಲೇ ಸೃಷ್ಟಿಸಬೇಕಾದ ಬಿಕ್ಕಟ್ಟಿನ ಸ್ಥಿತಿಯೊಂದರಿಂದ ಕರ್ನಾಟಕ ಸಂಗೀತಗಾರನನ್ನು ಮಹಾನ್ ವಾಗ್ಗೇಯಕಾರ ತ್ರಿಮೂರ್ತಿಗಳಂತಹವರ ಕೃತಿಗಳು ಕಾಪಾಡಿದವು. ತಾಳ ಪದ್ಧತಿಯನ್ನು ಸಹ ಬಹಳ ಭಿನ್ನವಾಗಿ, ವೈಶಿಷ್ಟ್ಯಪೂರ್ಣವಾಗಿ ರೂಪಿಸಲಾಯಿತು. ತಾಳದ ಒಂದೊಂದು ಮಾತ್ರೆಯನ್ನು ಕೃತಿಯ ಒಂದೊಂದು ಅಕ್ಷರಕ್ಕೂ ಕೂಡಿಸಿ ಹೊಲಿಗೆ ಹಾಕಿದ್ದರಿಂದ ಗೀತೆಯ ಮಾತು ಕೃತಿಯನ್ನು ಅದರ ಆಕಾರದಲ್ಲಿ ಸಂಬದ್ಧವೂ, ಪರಿಪೂರ್ಣವೂ ಆದ ಹೊಲಿದ ಉಡುಪಿನಂತೆ ಮಾಡಿಟ್ಟಿತು. ಆದರೆ ಅದೇ ಹಿಂದೂಸ್ತಾನಿ ಸಂಗೀತಗಾರ ತಾಳವನ್ನು ಗೀತೆಯ ಸುತ್ತ ಸೀರೆಯೊಂದನ್ನು ಸುತ್ತಿದಂತೆ ಸುತ್ತಿಬಿಡುತ್ತಿದ್ದ. ಕೃತಿಯ ಸ್ವರೂಪವು ಅಲ್ಲಿ ಅಧ್ಯಾಹಾರವಾಗಿರುತ್ತಿತ್ತು. ಅದು ತೀರಾ ಅಕ್ಷರಶಃವಲ್ಲದ ರೀತಿಯಲ್ಲಿ ಮತ್ತು ಏಕಾಂತದಲ್ಲಿ ಅರ್ಥಮಾಡಿಕೊಳ್ಳುವಂತೆ. ಅದರಿಂದಲೇ ಪ್ರತೀಬಾರಿ ಬಂದಿಷ್ ಅನ್ನು ಹಾಡಿದಾಗಲೂ ತಾಳದೊಂದಿಗಿನ ಅದರ ನೆಂಟಸ್ತಿಕೆ ಹೊಚ್ಚ ಹೊಸದಾಗಿ ತೋರುತ್ತಿತ್ತು. ತ್ರಿಮೂರ್ತಿಗಳ ಕೃತಿಗಳು ಕರ್ನಾಟಕ ಸಂಗೀತಗಾರರಿಗೆ ಬಹಳ ದೊಡ್ಡ ವರ. ಈ ಕೃತಿಗಳು ಶಿಷ್ಯನನ್ನು ಜಾಗರೂಕತೆಯಿಂದ ಕೈ ಹಿಡಿದು ನಡೆಸುತ್ತಾ ರಾಗದ ಅನಂತ ಅರಿವಿಗೆಟುಕದಷ್ಟು ಆಳದ ಶರಧಿಯಲ್ಲಿ ರಾಗದಿಂದ ಅವರನ್ನು ರಕ್ಷಿಸುತ್ತಾ ಇವೆ. ಭದ್ರವಾಗಿ ಕೃತಿಯಿಂದ ಕಟ್ಟಿದ ಹರಿಗೋಲು ಅವನನ್ನು ಅನೂಹ್ಯದೆಡೆಗೆ ಸುರಕ್ಷಿತವಾಗಿ ತೇಲಿಸಿಕೊಂಡು ಒಯ್ಯುತ್ತಿದೆ. ಈ ಕಾರಣದಿಂದಲೇ ವಿದೇಶಿಯರು ಉತ್ತರಾದಿ ಸಂಗೀತವನ್ನು ಬಿಟ್ಟು ಕರ್ನಾಟಕ ಸಂಗೀತವನ್ನು ಕಲಿಯಲು ಮುತ್ತುತ್ತಾರೆ. ಕರ್ನಾಟಕ ಸಂಗೀತ ಸಂಪ್ರದಾಯವು ಅವರಿಗೆ ಕ್ರಮಬದ್ಧವಾಗಿರುವ, ನಿರ್ದಿಷ್ಟವಾದ, ನಿಖರತೆಯ ಬಗ್ಗೆ ಜಾಗರೂಕವಾಗಿರುವ ಹಾಗೂ ಪರಿಶ್ರಮದಿಂದ ರೂಪುಗೊಂಡದ್ದಾಗಿರುವ ಪರಂಪರೆಯಾಗಿ ಕಂಡಿದೆ. ಹಿಂದೂಸ್ಥಾನೀ ಸಂಗೀತದ ತಾಳ ಸ್ವರೂಪ ಕರ್ನಾಟಕ ಸಂಗೀತದ ತಾಳ ಸ್ವರೂಪದ ಹಾಗೇ ಸಂಖ್ಯಾನುಸಾರವಾಗಿಯೇ ಇದ್ದರೂ ಇಲ್ಲಿನ ಸಂಗೀತ ವ್ಯಾಕರಣವು ಭಾಷೆ ಹಾಗೂ ತಾಳಲಯದ ಜೊತೆ ಸೂಕ್ಷ್ಮವಾಗಿ ಥಳುಕು ಹಾಕಿಕೊಂಡಿರುತ್ತದೆ. ಆದರೆ ಬಂದಿಷ್‌ನ ಗೀತ ವಸ್ತುವಿನ ಜೊತೆಗೆ ಅದರ ಸಂಬಂಧವು ಎಷ್ಟು ಖಾಸಗಿಯಾಗಿರುತ್ತದೆ ಎಂದರೆ ಗಾಯಕನಿಗೆ ವೈಯಕ್ತಿಕ ಭಾಷಿಕ ಸೊಗಡನ್ನು, ಸ್ವರದ ಮೇಲಿನ ಒತ್ತು ಮತ್ತು ನಡುವಣ ಮೌನವನ್ನು ಅಭಿವ್ಯಕ್ತಿಗೊಳಿಸಲು ವಿಫುಲ ಅವಕಾಶಗಳು ದೊರೆಯುತ್ತವೆ.

ಮುನ್ನೂರು ವರ್ಷಗಳ ಹಿಂದೆ ಕ್ರೈಸ್ತ ಮಿಶನರಿಗಳು ಭಾರತಕ್ಕೆ ಹಾರ್ಮೋನಿಯಂ ಅನ್ನು ತಂದರು. ಇದರಿಂದ ಭಾರತೀಯ ಶಾಸ್ತ್ರೀಯ ಸಂಗೀತಗಾರನಿಗೆ ಭಾರತೀಯ ಸಂಗೀತದ ವಿಸ್ತೃತತೆಯನ್ನು ಅಳತೆಗೆ ಸಿಗುವ ಹೊರ ಚೌಕಟ್ಟಿನಲ್ಲಿಡಲು ಅವಕಾಶ ದೊರೆಯಿತು. ಇಂದು black five ಅಥವಾ black four and a half, white first (ಕರಿ ಐದು ಅಥವಾ ನಾಲ್ಕೂವರೆ, ಮೊದಲು ಬಿಳಿ) ಇತ್ಯಾದಿ ಪಾರಿಭಾಷಿಕ ಪದಗಳು ಸಂಗೀತಗಾರರ ಭಾಷೆಯಲ್ಲಿ ಸೇರಿಹೋಗಿವೆ.

ನಾವು ಸ್ವತಂತ್ರರಾದ ಮೇಲೆ ನಮ್ಮ ಸಂಗೀತ ತೀರಾ ಭಿನ್ನ ರೀತಿಯಲ್ಲಿ ಸಾರ್ವಜನಿಕ ವಾಯಿತು. ಅಲ್ಲಿಯವರೆಗೂ ಖಾಸಗಿಯಾಗಿದ್ದ ಸಂಗೀತ ಕಲೆಗೆ ಸರ್ಕಾರೀ ಆಶ್ರಯ ದೊರೆಯಿತು. ಕೇಂದ್ರ- ರಾಜ್ಯಮಟ್ಟದ ಪ್ರಶಸ್ತಿಗಳು, ಸಂಗೀತ ನಾಟಕ ಅಕಾಡೆಮಿಯ ಶಿಷ್ಯವೇತನಗಳು,

ನಮ್ಮ ವಿದೇಶಿ ನೀತಿಯಲ್ಲಿ ಅಳವಡಿಸಲಾದ ಸಂಗೀತ ಕುರಿತ ವಿಚಾರಗಳು ಹೀಗೆ ಬಗೆ ಬಗೆಯ ಪ್ರೋತ್ಸಾಹ ಸಂಗೀತಕ್ಕೆ ದೊರೆಯುವಂತಾಯಿತು. ಈ ಪ್ರೋತ್ಸಾಹ ಸಂಗೀತಕ್ಕೆ ದೊರೆತಿದ್ದು ಸಂಗೀತದ ಕಾರಣಕ್ಕಲ್ಲ, ರಾಷ್ಟ್ರೀಯತೆಯ ಕಾರಣಕ್ಕೆ. ಸಂಗೀತ ಪ್ರಶಸ್ತಿಗಳು ಹಾಗೂ ಇತರೆ ಪುರಸ್ಕಾರಗಳು ಸ್ವತಂತ್ರ ಭಾರತದ ಒಂದು ಅಂಶವಾದವೇನೋ ನಿಜ. ಆದರೆ ಸಂಗೀತವನ್ನು ನಮ್ಮ ರಾಷ್ಟ್ರಪ್ರಜ್ಞೆಯ ಬಹುಮುಖ್ಯ ಅಂಶವನ್ನಾಗಿ ಗ್ರಹಿಸುವ ತಿಳಿವಳಿಕೆ ಮಾತ್ರ ನಮಗಿನ್ನೂ ಸರಿಯಾಗಿ ರಕ್ತಗತವಾಗಿಲ್ಲ.

ನಾವು ಪ್ರಜಾಪ್ರಭುತ್ವ, ನ್ಯಾಯಾಂಗ, ಚುನಾವಣೆ ವ್ಯವಸ್ಥೆ, ಆರ್ಥಿಕ ವಲಯದ ಬೇರೆ-ಬೇರೆ ಅಂಶಗಳು, ಜಾಹಿರಾತು ಮುಂತಾದ ರಾಜ್ಯಾಡಳಿತ ಕ್ರಮದ ಬಹುಪಾಲು ವ್ಯವಸ್ಥೆಗಳನ್ನು ಹೊರಗಿನಿಂದ ಎರವಲು ತಂದುಕೊಂಡಿದ್ದೇವೆ. ಆದರೆ ನಮ್ಮ ಸಂಗೀತ ಮಾತ್ರ ಹೊರಗಿನ ಪ್ರಭಾವಗಳಿಗೆ ಒಳಗಾಗದೆ ಉಳಿದಿದೆ. ಇದಕ್ಕೆ ಕಾರಣ ನಮ್ಮ ಸಂಗೀತ ಧಾರ್ಮಿಕ ಪರಿಭಾಷೆಯ ವಿವರಣೆಗೆ ದಕ್ಕುವುದಲ್ಲ. ಅದು ಆಧ್ಯಾತ್ಮಿಕ ಪರಿಭಾಷೆಯಲ್ಲಿ ವಿವರಿಸಲ್ಪಟ್ಟಿರುವುದು. ಅದರಿಂದಾಗಿಯೇ ಚರಿತ್ರೆಯ ಪಲ್ಲಟಗಳೊಳಗೆ, ಬದಲಾಗುತ್ತಿರುವ ರೀತಿ ರಿವಾಜುಗಳ ನಡುವೆ ಮತ್ತೆ ಮತ್ತೆ ಬೀಸಿ ಹೋಗುವ ಅಮುಖ್ಯ ಸುಳಿ ಗಾಳಿಗಳ ನಡುವೆ ಯಾವುದರ ಬಲೆಗೂ ಸಿಲುಕದೆ ಸಂಗೀತವು ಉಳಿದುಬಂದಿದೆ.

ಆದರೂ ಬಹುಪಾಲು ಭಾರತೀಯರಿಗೆ ಈ ಕಲೆಯ ಉಪಾಸನೆಯಲ್ಲಿ ತೊಡಗಿಕೊಳ್ಳಲು ಸಾಧ್ಯವಾಗಿಲ್ಲ. ಏಕೆಂದರೆ ಕೆಲವರಿಗೆ ಮಾತ್ರ ಈ ಕಲೆ ಏಕಾಗಿ ಇದೆ ಮತ್ತೆ ಇದರ ನಿಗೂಢ ವಿಸ್ಮಯಗಳೇನು ಎಂದು ಗೊತ್ತಿದೆ; ವೈಯಕ್ತಿಕ ನೆಲೆಯಲ್ಲಿ ಇದು ಎಷ್ಟು ಆವರಿಸಿಕೊಳ್ಳು ವಂತಹುದು, ಹೇಗೆ ವಿಘಟನಕಾರಿ ಎಂಬುದರ ಅರಿವಿದೆ. ಈ ಶತಮಾನದ ಆದಿಯಲ್ಲಿಯೇ ಭಾರತೀಯರು ಹದವರಿತ ಮಾನದಂಡವನ್ನು ಅನುಸರಿಸಿ, Subversive ಶಕ್ತಿಯ ಸ್ವರದ ಬದಲಿಗೆ ನೋಟ್ಸ್‌ಗಳನ್ನು ಬಳಸಲು ಪ್ರಾರಂಭಿಸಿದ್ದರೆ ಐಡೆಂಟಿಟಿಯನ್ನು ಕುರಿತ, ತುಡಿತವನ್ನು ಕುರಿತ ಉದ್ವೇಗಾತುರಗಳನ್ನು ದೂರವಿಡಬಹುದಾಗಿತ್ತು.

ಮೈದುಂಬಿಕೊಂಡು ಜೀವಂತವಾಗಿ ಉಳಿದು ಬಂದಿರುವ ಈ ಕಲೆಯನ್ನು ಅಲನ್ ಡೇನಿಲ್ಲೋವ್ ಆಶಿಸಿದ ರೀತಿಯಲ್ಲಿ ಹಂಚಿಕೊಳ್ಳಲು ಸಾಧ್ಯವಿತ್ತು. ವೈಯಕ್ತಿಕ ಔನ್ನತ್ಯದ, ಒಂದು ಬಗೆಯ ಮೋಕ್ಷ ಸಾಧನೆಯ ಪಥವಾಗಿ ಅದು ಉಳಿಯಬೇಕಾದ ಅಗತ್ಯವಿರಲಿಲ್ಲ.

ನಾವು ಬಿಡಿಸಿಕೊಳ್ಳಬೇಕಾದ ಎರಡು ಬಂಧನಗಳಿವೆ: ನಮ್ಮ ಪರಂಪರೆಯನ್ನು ನಿರಾಕರಿಸುವುದು ಒಂದು. ಸಂಗೀತ ಕಲೆಯ ಮಾಯದ ಮೋಡಿಯಿಂದ ಬಿಡಿಸಿಕೊಳ್ಳುವುದು ಇನ್ನೊಂದು.



---

ಆರ್. ವಿಜಯರಾಘವನ್, ಸೀನಿಯರ್ ಮೇನೇಜರ್, ಕೋಲಾರ ಗ್ರಾಮೀಣ ಬ್ಯಾಂಕ್, ಕೇಂದ್ರ ಕಛೇರಿ, ಕೋಲಾರ-೫೬೩ ೧೦೧

# ಜಾನಪದ : ಮದುವೆ ಮಾತುಕತೆಯ ವೈರುಧ್ಯ ಚಿತ್ರಗಳು

## ಸೌರಾಜರು ಮೆಚ್ಚಿದ ಹುಡುಗೀನ್ನೊಡ್ತೀವಿ

ಗುಜು ಗುಜು ರೇಕಿನ ಕಾಲ್ಸರವು
ಗುಜಾ ರೇಕಿನ ಕಾಲ್ಸರವು
ಸಾಧುಗಳೊಪ್ಪಿದ ಕಾಲ್ಸರವು
ಸೌರಾಜರು ಮೆಚ್ಚಿದ ಕಾಲ್ಸರವು ॥

ಗುಜು ಗುಜು ರೇಕಿನ ಹುಡುಗೀನ್ನೊಡವು
ಗುಜಾ ರೇಕಿನ ಹುಡುಗೀನ್ನೊಡವು
ಸಾಧುಗಳೊಪ್ಪಿದ ಹುಡುಗೀನ್ನೊಡವು
ಸೌರಾಜರು ಮೆಚ್ಚಿದ ಹುಡುಗೀನ್ನೊಡವು॥

ಗುಜುಗುಜು ರೇಕಿನ ವಡ್ಯಾಣವು
ಗುಜಾ ರೇಕಿನ ವಡ್ಯಾಣವು
ಸಾಧುಗಳೊಪ್ಪಿದ ವಡ್ಯಾಣವು
ಸೌರಾಜರು ಮೆಚ್ಚಿದ ವಡ್ಯಾಣವು॥

ಗುಜುಗುಜು ರೇಕಿನ ಹುಡುಗೀನ್ನೊಡವು
ಗುಜಾರೇಕಿನ ಹುಡುಗೀನ್ನೊಡವು
ಸಾಧುಗಳೊಪ್ಪಿದ ಹುಡುಗಿನ್ನೊಡವು
ಸೌರಾಜರು ಮೆಚ್ಚಿದ ಹುಡುಗೀನ್ನೊಡವು॥

ಗುಜುಗುಜು ರೇಕಿನ ಕಡಗಗಳೋ
ಗುಜಾ ರೇಕಿನ ಕಡಗಗಳೋ
ಸಾಧುಗಳೊಪ್ಪಿದ ಕಡಗಗಳೋ
ಸೌರಾಜರು ಮೆಚ್ಚಿದ ಕಡಗಗಳೊ॥

ಗುಜುಗುಜು ರೇಕಿನ ಹುಡುಗೀನ್ನೊಡೆವು
ಗುಜಾರೇಕಿನ ಹುಡುಗೀನ್ನೊಡೆವು
ಸಾಧುಗಳೊಪ್ಪಿದ ಹುಡುಗೀನ್ನೊಡೆವು
ಸೌರಾಜರು ಮೆಚ್ಚಿದ ಹುಡುಗೀನ್ನೊಡೆವು॥

ಗುಜುಗುಜು ರೇಕಿನ ತಂಬಿಟ್ಟು
ಗುಜಾ ರೇಕಿನ ತಂಬಿಟ್ಟು
ಸಾಧುಗಳೊಪ್ಪಿದ ತಂಬಿಟ್ಟು
ಸೌರಾಜರು ಮೆಚ್ಚಿದ ತಂಬಿಟ್ಟು॥

ಗುಜ ಗುಜ ರೇಕಿನ ಹುಡುಗೀನ್ನೊಡೆವು
ಗುಜಾ ರೇಕಿನ ಹುಡುಗೀನ್ನೊಡೆವು
ಸಾಧುಗಳೊಪ್ಪಿದ ಹುಡುಗೀನ್ನೊಡೆವು
ಸೌರಾಜರು ಮೆಚ್ಚಿದ ಹುಡುಗೀನ್ನೊಡೆವು॥

ಗುಜುಗುಜು ರೇಕಿನ ಜರಿಸೀರೆ
ಗುಜಾ ರೇಕಿನ ಜರಿಸೀರೆ
ಸಾಧುಗಳೊಪ್ಪಿದ ಜರಿಸೀರೆ
ಸೌರಾಜರು ಮೆಚ್ಚಿದ ಜರಿಸೀರೆ॥

ಗುಜಗುಜ ರೇಕಿನ ಹುಡುಗೀನ್ನೊಡೆವು
ಗುಜಾ ರೇಕಿನ ಹುಡುಗೀನ್ನೊಡೆವು
ಸಾಧುಗಳೊಪ್ಪಿದ ಹುಡುಗೀನ್ನೊಡೆವು
ಸೌರಾಜರು ಮೆಚ್ಚಿದ ಹುಡುಗೀನ್ನೊಡೆವು॥

ಗುಜುಗುಜು ರೇಕಿನ ಕಳ್ಳುಬಾನೆ
ಗುಜಾ ರೇಕಿನ ಕಳ್ಳುಬಾನೆ
ಸಾಧುಗಳೊಪ್ಪಿದ ಕಳ್ಳುಬಾನೆ
ಸೌರಾಜರು ಮೆಚ್ಚಿದ ಕಳ್ಳುಬಾನೆ॥

ಗುಜಗುಜ ರೇಕಿನ ಹುಡುಗೀನ್ನೊಡ್ತೇವಿ
ಗುಜಾ ರೇಕಿನ ಹುಡುಗೀನ್ನೊಡ್ತೇವಿ
ಸಾಧುಗಳೊಪ್ಪಿದ ಹುಡುಗೀನ್ನೊಡ್ತೇವಿ
ಸೌರಾಜರು ಮೆಚ್ಚಿದ ಹುಡುಗೀನ್ನೊಡ್ತೇವಿ॥

ಗುಜುಗುಜು ರೇಕಿನ ತುಕುಡಗಳು
ಗುಜಾ ರೇಕಿನ ತುಕುಡಗಳು
ಸಾಧುಗಳೊಪ್ಪಿದ ತುಕುಡಗಳು
ಸೌರಾಜರು ಮೆಚ್ಚಿದ ತುಕುಡಗಳು॥

ಗುಜು ಗುಜು ರೇಕಿನ ಹುಡುಗೀನ್ನೊಡ್ತೇವಿ
ಗುಜಾ ರೇಕಿನ ಹುಡುಗೀನ್ನೊಡ್ತೇವಿ

ಸಾಧುಗಳೊಪ್ಪಿದ ಹುಡುಗೀನ್ಕೊಡ್ತೀವಿ
ಸೌರಾಜರು ಮೆಚ್ಚಿದ ಹುಡುಗೀನ್ಕೊಡ್ತೀವಿ॥

- ಸಂಗ್ರಹಾನುವಾದ : **ಲಕ್ಷ್ಮೀಪತಿ ಕೋಲಾರ**

## ಬರ್ತೀನಿ ಬಾವನೋರೆ ನಾಗವಲ್ಲಿಗೆ

ಮೂರು ಸಾವಿರ ಕೊಡುತೀವಿ
ಮೂಗು ಬೊಟ್ಟು ಕೊಡುತೀವಿ
ಬನ್ನಿರಿ ಬಾವನೋರೆ ನಾಗವಲ್ಲಿಗೆ

ಮೂರು ಸಾವಿರ ಬೇಕಿಲ್ಲ
ಮೂಗುಬೊಟ್ಟು ಬೇಕಿಲ್ಲ
ಬರೊಲ್ಲ ಬಾವನೋರೆ ನಾಗವಲ್ಲಿಗೆ

ನಾಲ್ಕು ಸಾವಿರ ಕೊಡುತೀವಿ
ಬೆರಳಿಗುಂಗುರ ಕೊಡುತೀವಿ
ಬನ್ನಿರಿ ಬಾವನೋರೆ ನಾಗವಲ್ಲಿಗೆ

ನಾಲ್ಕು ಸಾವಿರ ಬೇಕಿಲ್ಲ
ಬೆರಳಿಗುಂಗುರ ಬೇಕಿಲ್ಲ
ಬರೊಲ್ಲ ಬಾವನೋರೆ ನಾಗವಲ್ಲಿಗೆ

ಐದು ಸಾವಿರ ಕೊಡುತೀವಿ
ಬಾಳೆಹಣ್ಣು ಕೊಡುತೀವಿ
ಬನ್ನಿರಿ ಬಾವನೋರೆ ನಾಗವಲ್ಲಿಗೆ

ಐದು ಸಾವಿರ ಬೇಕಿಲ್ಲ
ಬಾಳೆ ಹಣ್ಣು ಬೇಕಿಲ್ಲ
ಬರೋಲ್ಲ ಬಾವನೋರೆ ನಾಗವಲ್ಲಿಗೆ

ಆರು ಸಾವಿರ ಕೊಡುತೀವಿ
ಮುದ್ದೆ ಬೆಲ್ಲ ಕೊಡುತೀವಿ
ಬನ್ನಿರಿ ಬಾವನೋರೆ ನಾಗವಲ್ಲಿಗೆ

ಆರು ಸಾವಿರ ಬೇಕಿಲ್ಲ
ಮುದ್ದೆಬೆಲ್ಲ ಬೇಕಿಲ್ಲ
ಬರೋಲ್ಲ ಬಾವನೋರೆ ನಾಗವಲ್ಲಿಗೆ

ಏಳುಸಾವಿರ ಕೊಡುತೀವಿ
ಎತ್ತಿನ ಬಂಡಿ ಕೊಡುತೀವಿ
ಬನ್ನಿರಿ ಬಾವನೋರೆ ನಾಗವಲ್ಲಿಗೆ

ಏಳು ಸಾವಿರ ಬೇಕಿಲ್ಲ
ಎತ್ತಿನ ಬಂಡಿ ಬೇಕಿಲ್ಲ
ಬರೊಲ್ಲ ಬಾವನೋರೆ ನಾಗವಲ್ಲಿಗೆ

ಎಂಟು ಸಾವಿರ ಕೊಡುತೀವಿ
ಹೆಗ್ಗಣದಮರಿ ಕೊಡುತೀವಿ
ಬನ್ನಿರಿ ಬಾವನೋರೆ ನಾಗವಲ್ಲಿಗೆ

ಎಂಟು ಸಾವಿರ ಬೇಕಿಲ್ಲ
ಹೆಗ್ಗಣದಮರಿ ಬೇಕಿಲ್ಲ
ಬರೋಲ್ಲ ಬಾವನೋರೆ ನಾಗವಲ್ಲಿಗೆ

ಒಂಬತ್ತು ಸಾವಿರ ಕೊಡುತೀವಿ
ತುಳಿಯೊ ಸೈಕಲ್ ಕೊಡುತೀವಿ
ಬನ್ನಿರಿ ಬಾವನೋರೆ ನಾಗವಲ್ಲಿಗೆ

ಒಂಬತ್ತು ಸಾವಿರ ಬೇಕಿಲ್ಲ
ತುಳಿಯೊ ಸೈಕಲ್ ಬೇಕಿಲ್ಲ
ಬರೊಲ್ಲ ಬಾವನೋರೆ ನಾಗವಲ್ಲಿಗೆ

ಹತ್ತುಸಾವಿರ ಕೊಡುತೀವಿ
ರೇಷ್ಮೆ ಹಾಸಿಗೆ ಕೊಡುತೀವಿ
ಬನ್ನಿರಿ ಬಾವನೋರೆ ನಾಗವಲ್ಲಿಗೆ

ಹತ್ತುಸಾವಿರ ಬೇಕಿಲ್ಲ
ರೇಷ್ಮೆ ಹಾಸಿಗೆ ಬೇಕಿಲ್ಲ
ಬರೋಲ್ಲ ಬಾವನೋರೆ ನಾಗವಲ್ಲಿಗೆ

ಒಂದು ಲಕ್ಷ ಕೊಡುತೀವಿ
ಲಕ್ಷ್ಮೀದೇವೀನ ಕೊಡುತೀವಿ
ಬನ್ನಿರಿ ಬಾವನೋರೆ ನಾಗವಲ್ಲಿಗೆ

ಒಂದು ಲಕ್ಷ ಕೊಡಿರಿ
ಲಕ್ಷ್ಮೀದೇವಿನ ಕೊಡಿರಿ
ಬರ್ತೀನಿ ಬಾವನೋರೆ ನಾಗವಲ್ಲಿಗೆ

-ಸಂಗ್ರಹಾನುವಾದ : ಸ. ರಘುನಾಥ

## ನನ್ನ ಮುದುಕನಿಗೆ ಕೊಡಬೇಡ

ಅಪ್ಪಾ, ನನ್ನ ಬಂಗಾರದಂಥಾ ಅಪ್ಪಾ
ನನ್ನ ಮುದುಕಂಗೆ ಕೊಡಬೇಡಪ್ಪ

ನನ್ನ ಮುದುಕಂಗೆ ಕೊಡಬೇಡಪ್ಪಾ
ನನ್ನ ಮುದುಕಂಗೆ ಕೊಟ್ಟರೆ ನೀನು
ಮುಂಡೆ ಆದೇನು ತಿಳಕೋ ನೀನು

ನನ್ನ ಆಳಿಗೆ ಕೊಡಬೇಡಪ್ಪಾ
ಅವ ಒಡೆಯನ ಗುಲಾಮನಪ್ಪಾ
ನಾ ನಸುಕಲ್ಲೆ ಏಳಬೇಕಪ್ಪಾ
ನನ್ನ ನೀ ದೂರ ಕಳಿಸಬೇಡಪ್ಪಾ

ಸರಿ ಗಂಡನ ಹುಡುಕುವಿಯಾದರೆ
ನಿಂಗೆ ನೆರೆಯಲೆ ಸಿಗುತಾನೆ ಕುರುಬ
ನೀ ಕೇಳು ಕೇಳು ನನ್ನ ಮಾತ
ಗಟ್ಟಿಮುಟ್ಟಾಗಿ ಇರುತಾನವನು
ಕಲ್ಲು ಗುಂಡಂತೆ ಇರುತಾನವನು
ಬೇಡ ಬೇಡಪ್ಪಾ ನನಗೆ ಮುದುಕ
ಮುಂಡೆ ಆದೇನು ತಿಳಕೋ ನೀನು

ನಾನು ಕುರುಬನೇ ಪ್ರಿಯನೆಂದೇನು
ಬಾಡು ಕೊಡುತಾನೆ ತಿನುವಷ್ಟು ಅವನು
ಕಂಬಳಿ ತರುತಾನೆ ಚಳಿಗಾಲಕ್ಕವನು
ನಾನು ಕುರುಬನೇ ಪ್ರಿಯನೆಂದೇನು

ಅಪ್ಪ ಬೇಡಪ್ಪ ಬೇಡ ನನ್ನಪ್ಪ
ನನ್ನ ಮುದುಕಂಗೆ ಕೊಡಬೇಡಪ್ಪ

(ಒಂದು ಗದ್ಬಿ ಹಾಡು- **Sitakantha Mahapatra- The Ethnic Space)**



---

ಆರ್. ವಿಜಯರಾಘವನ್, ಸೀನಿಯರ್ ಮೇನೇಜರ್, ಕೋಲಾರ ಗ್ರಾಮೀಣ ಬ್ಯಾಂಕ್, ಪ್ರಧಾನಕಛೇರಿ, ಕೋಲಾರ-೫೬೩೧೦೧

ರೆ

ಮೂಲ : ರಡ್ಯಾರ್ಡ್ ಕಿಪ್ಲಿಂಗ್
ಅನು : ಹಾಲಾಡಿ ಮಾರುತಿರಾವ್

ನಿನ್ನ ಸುತ್ತ ಮುತ್ತಿನವರೆಲ್ಲಾ ವಿವೇಕ ಶೂನ್ಯರಾಗಿ ಅದಕ್ಕಾಗಿ
ನಿನ್ನನ್ನು ದೂರಿದರೂ, ನೀನು ತಲೆ ನೆಟ್ಟಗಿಟ್ಟುಕೊಳ್ಳುವಂತಿದ್ದರೆ,
ಎಲ್ಲರೂ ನಿನ್ನನ್ನು ಶಂಕಿಸಿದಾಗ ಆ ಶಂಕೆಗೂ ಸ್ವಲ್ಪ ಮಾನ್ಯತೆ ನೀಡಿ
ನಿನ್ನ ಆತ್ಮವಿಶ್ವಾಸವನ್ನು ನೀನು ಕಳೆದುಕೊಳ್ಳದಿದ್ದರೆ,
ನೀನು ಸಾಕಷ್ಟು ಕಾದೂ, ಕಾಯುವುದು ಸಾಕಪ್ಪ ಎಂದೆನಿಸದಿದ್ದರೆ,
ಅಥವಾ ನಿನ್ನ ಬಗ್ಗೆ ಯಾರೆಷ್ಟು ಸುಳ್ಳು ಹಬ್ಬಿಸಿದರೂ, ಸುಳ್ಳಾಡದಿದ್ದರೆ
ಅಥವಾ ನಿನ್ನನ್ನು ಯಾರೆಷ್ಟು ದೂಷಿಸಿದರೂ, ದೂಷಣೆಗೆ ತುತ್ತಾಗದಿದ್ದರೆ
ಹೀಗಿದ್ದೂ ನೀನು ಸಜ್ಜನನಂತೆ ತೋರಿಸಿಕೊಳ್ಳದೆ, ಪ್ರಾಜ್ಞನಂತೆ ಮಾತನಾಡದಿದ್ದರೆ;

ನೀನು ಕನಸು ಕಾಣುವಂತಿದ್ದೂ- ಆ ಕನಸುಗಳ ಗುಲಾಮನಾಗದಿದ್ದರೆ,
ನೀನು ಚಿಂತಿಸುವಂತಿದ್ದು- ಆ ಚಿಂತನೆಗಳೇ ನಿನ್ನ ಅಂತಿಮ ಗುರಿಯಾಗದಿದ್ದರೆ,
ನೀನು ಗೆಲುವಪ್ಪ ಮತ್ತು ಸೋಲಪ್ಪರನ್ನು ಸಂಧಿಸಿಯೂ,
ಆ ಠಕ್ಕರೀರ್ವರನ್ನು ಒಂದೇ ರೀತಿಯಲ್ಲಿ ಕಾಣಬಲ್ಲೆಯಾದರೆ,
ನೀ ನುಡಿದ ಸತ್ಯವನ್ನು ಕಿವುಚಿ ಆ ಬೋನಿನಸಲ್ಲಿ ಮೂರ್ಖರನ್ನು
ಸೆರೆ ಹಿಡಿದು ಸ್ವಾರ್ಥಸಾಧಿಸುವ ನೀಚರ ವರ್ತನೆ ನೀನು ಸಹಿಸುವಂತಿದ್ದರೆ,
ಅಥವಾ ಜೀವವನ್ನೇ ಕೊಟ್ಟು ಕಟ್ಟಿದ್ದನ್ನು ಬೇರೆಯವರು ಕೆಡವಿದಾಗ, ಕೆರಳದೆ
ಮತ್ತೆ ಸೊಂಟ ಬಗ್ಗಿಸಿ ನಿನ್ನ ಸವಕಲು ಸಾಧನಗಳಿಂದ ಮತ್ತೆ ಕಟ್ಟುವೆಯಾದರೆ;

ನೀನು ಗಳಿಸಿದ್ದನ್ನೆಲ್ಲಾ ಒಂದು ಗಂಟು ಮೂಟೆ ಕಟ್ಟಿ,
ದಾಳದ ಒಂದೇ ಎಸೆತದಲ್ಲಿ ಸರ್ವವನ್ನೂ ಕಳಕೊಂಡು,
ಅದರ ಬಗ್ಗೆ ತುಟಿಪಿಟಕ್ಕೆನ್ನದೆ, ಮತ್ತೆ ಹೊಸದಾಗಿ
ನೀನು ಗಳಿಸಲು ಪ್ರಾರಂಭ ಮಾಡುವಿಯಾದರೆ,
ಸರಿದುಹೋದ ನಿನ್ನ ಗುಂಡಿಗೆ ಮತ್ತು ಮಾಂಸ ಬಲವನ್ನು

ಬಲವಂತದಿಂದ ನಿನ್ನ ಸರದಿ ಬಂದಾಗ ಬಳಸಿಕೊಂಡು,
ನಿನ್ನಲ್ಲಿ ಬೇರೇನೂ ಇಲ್ಲದಿದ್ದರೂ ಹಟವೊಂದೆ ಸಾಕಾಗಿ
"ನಡೆ ಮುಂದೆ" ಎಂದಂದುಕೊಂಡು ನೀ ಮುನ್ನುಗ್ಗುವಿಯಾದರೆ!

ಮಂದಿಯೊಡನೆ ಸಂಪರ್ಕವಿಟ್ಟುಕೊಂಡೂ ನೀನು ವರ್ಚಸ್ಸು ಉಳಿಸಿಕೊಂಡರೆ
ಮಹಾಜನರೊಡಗೂಡಿಯೂ ನೀನು ಸಾಮಾನ್ಯರ ಸಂಪರ್ಕ ಕಡಿದುಕೊಳ್ಳದಿದ್ದರೆ
ಶತೃಗಳಾಗಲಿ, ಆಪ್ತರಾಗಲೀ ನಿನಗೆ ಕೆಡಕು ಮಾಡದಂತೆ ನೀನಿದ್ದರೆ
ಎಲ್ಲರೂ ಬೇಕಾದವರಾಗಿ ಯಾರೂ ನಿನಗೆ ಹೆಚ್ಚಿನವರಂತಾಗದಿದ್ದರೆ
ನಿಷ್ಕರುಣೆ ನಿಮಿಷದ ಬೊಗಸೆಯಲಿ ಅರವತ್ತು ಸೆಕೆಂಡುಗಳ
ಓಟ ನೀನು ತುಂಬ ಬಲ್ಲವನಾದರೆ
ಈ ಜಗತ್ತೇ ನಿನ್ನದು ಅದರೊಳಗಿನ ಸರ್ವಸ್ವವೂ ಸೇರಿ,
ಮತ್ತೆ ಎಲ್ಲಕ್ಕೂ ಮಿಗಿಲಾಗಿ- ನೀನು ಗಂಡುಗಲಿಯಾಗುವೆ, ಮಗನೆ!



---

**ಪಾಲಾಡಿ ಮಾರುತಿರಾವ್**, ೩೫೧, ಮ್ಹಾಳಸಾ ನಿವಾಸ, ಅಬ್ಬಿಗೆರೆ, ಚಿಕ್ಕಬಾಣಾವರ ರಸ್ತೆ
ಬೆಂಗಳೂರು-೫೬೦ ೦೯೦

# ಶಿಗಾ ದೇವಾಲಯದ ಅರ್ಚಕ

ಮೂಲ : ಯಾಕಿಯೊ ಮಿಷಿಮಾ
ಕನ್ನಡಕ್ಕೆ : ಸಂಧ್ಯಾ ಎಸ್.

ಯೆಶಿನ್‌ನ 'ಮುಕ್ತಿ ಸಾಧನೆಯ ಮಾರ್ಗಗಳು' ಗ್ರಂಥದಲ್ಲಿ ಪವಿತ್ರನಾಡಿನ ಆನಂದಸಾಗರದ ಮುಂದೆ ದಶವಿಧ ಭೋಗಗಳು ಸಾಗರದ ಒಂದು ಹನಿನೀರಿಗೆ ಸಮ ಎಂದು ಹೇಳಿದೆ. ಪವಿತ್ರ ಲೋಕದಲ್ಲಿ ಪಚ್ಚೆಯ ನೆಲ; ರಸ್ತೆಗಳ ಅಂಚನ್ನು ಚಿನ್ನದ ಹಗ್ಗಗಳಿಂದ ಬಿಗಿದಿದೆ. ನೆಲದ ಮೇಲ್ಮೈಗೆ ಅಂತ್ಯವೇ ಇಲ್ಲದೆ, ಸಮತಟ್ಟಾಗಿದ್ದು ಸೀಮಾತೀತವಾಗಿದೆ. ಪ್ರತಿಯೊಂದು ಪವಿತ್ರ ಆಲಯದ ಒಳಗೂ ಚಿನ್ನ, ಬೆಳ್ಳಿ, ನೀಲಮಣಿ, ಸ್ಫಟಿಕ, ಹವಳ, ಮುತ್ತು, ರತ್ನಖಚಿತ ಐವತ್ತು ಸಾವಿರ ಕೋಟಿ ಮಂದಿರಗಳೂ, ಗೋಪುರಗಳೂ ಇರುತ್ತವೆ. ಪ್ರತಿ ಆಭರಣಖಚಿತ ಡೇಸೀ ಹೂಗಳ ಮೇಲೂ ಬೆಡಗಿನ ಹೊದಿಕೆಗಳನ್ನು ಹೊಂದಿಸಲಾಗಿರುತ್ತದೆ. ಮಂದಿರಗಳ ಒಳಗೂ, ಗೋಪುರಗಳ ಮೇಲೂ ಕಿನ್ನರರು ಸದಾಕಾಲ ಪವಿತ್ರ ಗೀತೆಗಳನ್ನು, ತಥಾಗತ ಬುದ್ಧರನ್ನು ಕೀರ್ತಿಸುವ ಹಾಡುಗಳನ್ನು ಹಾಡುತ್ತಿರುತ್ತಾರೆ. ಮಂದಿರ, ಗೋಪುರ, ಮಠಗಳ ಸುತ್ತ ಇರುವ ತೋಟದಲ್ಲಿ ಚಿನ್ನ ಮತ್ತು ಪಚ್ಚೆಯ ಕೊಳಗಳಿದ್ದು ಭಕ್ತರು ಅವುಗಳಲ್ಲಿ ಮಂಗಳಸ್ನಾನ ಮಾಡಿಕೊಳ್ಳಬಹುದಾಗಿದೆ. ಚಿನ್ನದ ಕೊಳಗಳಿಗೆ ಬೆಳ್ಳಿಮರಳ ದಂಡೆ, ಪಚ್ಚೆಯ ಕೊಳಗಳಿಗೆ ಸ್ಫಟಿಕದ ಮರಳ ದಂಡೆ. ಕೊಳಗಳ ತುಂಬಾ ಅನೇಕ ಬಣ್ಣಗಳ ಫಳಫಳ ಹೊಳೆಯುವ ತಾವರೆ ಗಿಡಗಳು. ತಂಗಾಳಿ ಕೊಳದ ಮೇಲೆ ಬೀಸಿದಂತೆ ಎಲ್ಲಾ ದಿಕ್ಕಿನಲ್ಲೂ ಲಾಸ್ಯವಾಡುವ ಬಣ್ಣ ಬಣ್ಣದ ಬೆಳಕಿನ ಕಿರಣಗಳು. ಹಗಲೆನ್ನದೆ, ರಾತ್ರಿಯೆನ್ನದೆ ಸದಾಕಾಲ ಕೊಕ್ಕರೆ, ಚಕ್ರವಾಕ ಬಾತುಕೋಳಿ, ನವಿಲು, ಗಿಳಿ ಮತ್ತು ಸುಮಧುರ ದನಿಯ ಸುಂದರ ಯುವತಿಯ ಮುಖವುಳ್ಳ ಕಲವಿಂಕ ಪಕ್ಷಿಗಳ ಹಾಡು ವಾತಾವರಣವನ್ನು ತುಂಬಿರುತ್ತದೆ. ಈ ಪಕ್ಷಿಗಳ ಜೊತೆ ಇನ್ನೂ ಅನೇಕ ಆಭರಣಖಚಿತ ಪಕ್ಷಿಗಳು ತಮ್ಮ ಇನಿಗೊರಲನ್ನು ಎತ್ತಿ ಬುದ್ಧನನ್ನು ಕೀರ್ತಿಸುತ್ತಿರುತ್ತವೆ. (ಅವುಗಳ ದನಿ ಎಷ್ಟೇ ಇಂಪಾಗಿದ್ದರೂ ಅಷ್ಟೊಂದು ಪಕ್ಷಿಗಳು ಒಟ್ಟಾಗಿ ಹಾಡುತ್ತಿರಬೇಕಾದರೆ, ಅದು ಗದ್ದಲದಂತೇ ಕೇಳುತ್ತಿರಬೇಕು).

ಕೊಳಗಳ ದಡ ಹಾಗೂ ನದೀತೀರಗಳಲ್ಲಿ ಪವಿತ್ರವಾದ ಅಮೂಲ್ಯ ಮರಗಳಿವೆ. ಈ

ಮರಗಳ ಕಾಂಡ ಚಿನ್ನದ್ದು, ಕೊಂಬೆ ಬೆಳ್ಳಿಯದು, ಹೂವುಗಳು ಹವಳದವು. ಇವುಗಳ ಸೌಂದರ್ಯ ನೀರಿನಲ್ಲೂ ಪ್ರತಿಫಲಿಸುತ್ತಿವೆ. ಆಭರಣಖಚಿತ ಹಗ್ಗಗಳು ಗಾಳಿಯಲ್ಲಿ ತೂಗುಯ್ಯಾಲೆಯಾಡುತ್ತಿವೆ. ಬುದ್ಧನ 'ಪರಮಾರ್ಥ ಧರ್ಮ'ವನ್ನು ನುಡಿಸುತ್ತಿರುವ ಅನೇಕ ಅಮೂಲ್ಯ ಗಂಟೆಗಳು ಗಾಳಿಯಲ್ಲಿ ತೂಗಾಡುತ್ತಿವೆ. ಅಲ್ಲದೆ ಇನ್ನೂ ಅನೇಕ ವಿಚಿತ್ರ ಸಂಗೀತವಾದ್ಯಗಳು ನಿರ್ಮಲ ಆಕಾಶದಲ್ಲಿ ಚಾಚಿಕೊಂಡು ಯಾರು ಮೀಟದಿದ್ದರೂ ತಂತಾನೆ ನುಡಿಯುತ್ತಿರುತ್ತವೆ.

ಇಲ್ಲಿ ಯಾರಿಗಾದರೂ ಏನನ್ನಾದರೂ ತಿನ್ನುವ ಆಸೆಯಾದರೆ ಅವರ ಕಣ್ಣಮುಂದೆ ಒಂದು ಸಪ್ತರತ್ನಖಚಿತ ಥಳಥಳಿಸುವ ಮಣಿ ಮತ್ತು ಅದರ ಮೇಲೆ ಸಪ್ತರತ್ನಖಚಿತ ಬಟ್ಟಲುಗಳಲ್ಲಿ ತುಂಬಿಟ್ಟ ಬಗೆಬಗೆಯ ಅತ್ಯುತ್ಕೃಷ್ಟ ತಿನಿಸುಗಳು ಬಂದು ನಿಲ್ಲುತ್ತವೆ. ಅವುಗಳಿಂದ ತಿನಿಸನ್ನು ಎತ್ತಿ ಬಾಯಲ್ಲಿಡುವ ಅವಶ್ಯಕತೆಯೂ ಇರುವುದಿಲ್ಲ. ಮಾಡಬೇಕಾದ ಒಂದೇ ಕೆಲಸವೆಂದರೆ ತಿನಿಸುಗಳ ಆಕರ್ಷಕ ಬಣ್ಣಗಳನ್ನು ದಿಟ್ಟಿಸುತ್ತ, ಅವುಗಳ ವಾಸನೆಯನ್ನು ಆನಂದಿಸುವುದು. ಇಷ್ಟರಿಂದಲೇ ಹೊಟ್ಟೆಯೂ ತುಂಬಿ, ಶರೀರಕ್ಕೆ ಪುಷ್ಟಿಯೂ ದೊರೆಯುತ್ತದೆ. ಇಷ್ಟಾಗಿಯೂ ಶಾರೀರಕವಾಗಿ ಹಾಗೂ ಪಾರಮಾರ್ಥಿಕವಾಗಿ ಶುದ್ಧವಾಗೇ ಉಳಿಯಬಹುದು. ಈ ರೀತಿ ತಿನ್ನದೆಯೆ ಊಟ ಮುಗಿಸಿದ ಮೇಲೆ ಬಟ್ಟಲು ಮಣೆಗಳು ಗಾಳಿಯಲ್ಲಿ ಲೀನವಾಗಿಬಿಡುತ್ತವೆ.

ಇದೇ ರೀತಿ ಹೊಲೆಯುವ, ಒಗೆಯುವ, ಬಣ್ಣಹಾಕುವ ಅಥವಾ ರಿಪೇರಿ ಮಾಡುವ ಗೋಜುಗಳಿಲ್ಲದೆ ಪ್ರತಿಯೊಬ್ಬನೂ ಬಟ್ಟೆಗಳಿಂದ ಅಲಂಕೃತನಾಗಿರುತ್ತಾನೆ.

ದೀಪಗಳ ಅವಶ್ಯಕತೆಯೂ ಅಲ್ಲಿರುವುದಿಲ್ಲ. ಕಾರಣ ಆಕಾಶವು ಎಲ್ಲೆಡೆ ಪಸರಿಸಿರುವ ಒಂದು ಮಹಾನ್ ಬೆಳಕಿನಿಂದ ಸದಾಕಾಲ ಪ್ರಕಾಶಮಾನವಾಗಿರುತ್ತದೆ. ಇಷ್ಟೇ ಅಲ್ಲ, ಆ ಪವಿತ್ರಲೋಕ ವರ್ಷದ ಎಲ್ಲಾ ಸಮಯದಲ್ಲೂ ಒಂದು ಮಧ್ಯಮತರವಾದ ಉಷ್ಣಾಂಶ ಹೊಂದಿರುವ ಕಾರಣ ಅಲ್ಲಿ ಬಿಸಿಲಿನ ತಾಪವೂ ಇರುವುದಿಲ್ಲ. ಅದಕ್ಕೆ ತಂಪಿನ ಅವಶ್ಯಕತೆಯೂ ಇರುವುದಿಲ್ಲ. ಒಂದು ನೂರು ಸಾವಿರ ಥರದ ಸೂಕ್ಷ್ಮತರ ಸುಗಂಧಗಳು ಗಾಳಿಯಲ್ಲಿ ಸುಳಿಯುತ್ತಿದ್ದು ತಾವರೆ ಪಕಳೆಗಳು ಆಕಾಶದಿಂದ ಸದಾಕಾಲ ಮಳೆಗರೆಯುತ್ತಿರುತ್ತವೆ.

ವಿಚಾರಣಾ ಹೆಬ್ಬಾಗಿಲಿನಲ್ಲಿ ಪವಿತ್ರನಾಡಿನ ಒಳಹೊಗಲು ಪರವಾನಗಿಯನ್ನು ಇನ್ನೂ ಪಡೆಯದವರಿಗೆ ಒಂದು ಸೂಚನಾ ಫಲಕವಿದೆ: ಅಂಥವರು ಮೇಲ್ಮೈ ಕಲ್ಪನಾಶಕ್ತಿಯನ್ನಾದರೂ ಜಾಗ್ರತಮಾಡಿಕೊಂಡಿರಬೇಕು. ಅದಕ್ಕಾಗಿ ಅವರು ಮನಸ್ಸನ್ನು ಮೊದಲು ಒಂದು ಕಡೆ ಕೇಂದ್ರೀಕರಿಸುವುದನ್ನು ಅಭ್ಯಾಸಮಾಡಿ, ಕ್ರಮೇಣ ಅದನ್ನು ವಿಸ್ತರಿಸಿಕೊಳ್ಳುವ ಕಡೆ ಗಮನ ಹರಿಸಬೇಕು. ಇಂಥ ಕಲ್ಪನಾಶಕ್ತಿಯು ಐಹಿಕ ಜೀವನದ ಪಾಶಗಳಿಂದ ಬಿಡುಗಡೆ ಹೊಂದಿ ಬುದ್ಧನನ್ನು ಕಾಣುವ ಸುಲಭ ಮಾರ್ಗವಾಗಬಲ್ಲದು. ನಾವು ಅಂಥ ಕಲ್ಪನಾಶಕ್ತಿ ಹೊಂದಿದ ನಂತರ ಒಂದು ಪದ್ಮಪುಷ್ಪದ ಮೇಲೆ ಗಮನ ಕೇಂದ್ರೀಕರಿಸಿ ಅಲ್ಲಿಂದ ಸೀಮಾತೀತ ದಿಗಂತಗಳವರೆಗೂ ಚಾಚಿಕೊಳ್ಳಲು ಶಕ್ತರಾಗಬಹುದು.

ಈ ರೀತಿ ಪದ್ಮಪುಷ್ಪದ ಸೂಕ್ಷ್ಮತರ ದಿಟ್ಟಿಸುವಿಕೆ ಹಾಗೂ ಭೌಗೋಳಿಕ ಪಸರಿಸುವಿಕೆ

ಕ್ರಿಯೆಯು ಜಗತ್ತಿನ ಬಗೆಗಿನ ನಮ್ಮ ತತ್ವದರ್ಶನಕ್ಕೆ ಹೊಸ ತಳಹದಿ ಹಾಕಬಹುದು: ಅದರಿಂದ ಸತ್ಯದ ಸಾಕ್ಷಾತ್ಕಾರವೂ ಆಗಬಹುದು. ಎಲ್ಲಕ್ಕೂ ಮೊದಲು ಪ್ರತಿಯೊಂದು ಪಕಳೆಯಲ್ಲೂ ಎಂಭತ್ತನಾಲ್ಕು ಸಾವಿರ ನರಗಳಿದ್ದು, ಪ್ರತಿಯೊಂದು ನರವೂ ಎಂಭತ್ತುನಾಲ್ಕು ಸಾವಿರ ಥರದ ಬೆಳಕನ್ನು ನೀಡುತ್ತಿರುತ್ತದೆ ಎನ್ನುವುದು ತಿಳಿದಿರಬೇಕು. ಅಲ್ಲದೆ, ಇವುಗಳಲ್ಲಿ ಅತಿ ಚಿಕ್ಕದೆನ್ನಬಹುದಾದ ಪದ್ಮವೇ ಸುಮಾರು ಇನ್ನೂರೈವತ್ತು ಯೋಜನಗಳಷ್ಟು ಅಗಲವಿರುತ್ತದೆ. ಪವಿತ್ರ ಗ್ರಂಥಗಳಲ್ಲಿ ಹೇಳಿರುವಂತೆ ಒಂದು ಯೋಜನ ಎಪ್ಪತ್ತೈದು ಮೈಲಿಗೆ ಸಮ ಎಂದ ಮೇಲೆ, ಸುಮಾರು ಹತ್ತೊಂಭತ್ತು ಸಾವಿರ ಮೈಲಿಗಳಷ್ಟು ಅಗಲವಿರುವ ಪದ್ಮವೇ ಅತಿಚಿಕ್ಕ ಪದ್ಮವೆಂದು ತಿಳಿಯಬೇಕು.

ಅಂಥ ಒಂದು ಪುಷ್ಪವು ಎಂಭತ್ತನಾಲ್ಕು ಸಾವಿರ ಪಕಳೆ ಹೊಂದಿದ್ದು ಪ್ರತಿ ಎರಡು ಪಕಳೆ ನಡುವೆಯೂ ಒಂದು ದಶಲಕ್ಷ ವಡವೆಗಳಿದ್ದು, ಪ್ರತಿಯೊಂದೂ ಒಂದು ಸಾವಿರ ಥರದ ಬೆಳಕುಗಳನ್ನು ಸೂಸುತ್ತಿರುತ್ತವೆ. ಸುಂದರ ಆಕಾರವುಳ್ಳ ಇವುಗಳ ಪುಷ್ಪಪಾತ್ರೆಯಲ್ಲಿ ನಾಲ್ಕು ರತ್ನಖಚಿತ ಕಂಬಗಳಿದ್ದು, ಪ್ರತಿಯೊಂದು ಕಂಬವೂ ಬೌದ್ಧರ ಕಲ್ಪನೆಯಲ್ಲಿ ಬ್ರಹ್ಮಾಂಡದ ಮಧ್ಯದಲ್ಲಿದೆ ಎನ್ನಲಾದ ಸುಮೇರು ಪರ್ವತದ ಶಿಖರಕ್ಕಿಂತ ಸುಮಾರು ಒಂದು ಸಾವಿರ ಕೋಟಿ ಪಟ್ಟು ದೊಡ್ಡದಾಗಿರುತ್ತದೆ. ಈ ಕಂಬಗಳಿಂದ ನೀಳವಾದ ನಿರಿಗೆಗಳು ಇಳಿದುಬಂದಿದ್ದು, ಒಂದೊಂದು ನಿರಿಗೆಯಲ್ಲೂ ಐವತ್ತು ಸಾವಿರ ರತ್ನಗಳಿರುತ್ತವೆ; ಪ್ರತಿ ರತ್ನವೂ ಎಂಭತ್ತ ನಾಲ್ಕು ಸಾವಿರ ಥರದ ಬೆಳಕನ್ನು ಸೂಸುತ್ತಿದ್ದು, ಪ್ರತಿಬೆಳಕೂ ಎಂಭತ್ತನಾಲ್ಕು ಸಾವಿರ ಚಿನ್ನದ ಬಣ್ಣ ಹೊಂದಿದ್ದು, ಈ ಪ್ರತಿ ಚಿನ್ನದ ಬಣ್ಣವೂ ಸರದಿಯಂತೆ ಅನೇಕ ರೀತಿಯ ಬಣ್ಣ ತಳೆಯುತ್ತಿರುತ್ತವೆ. ಇಂಥ ಚಿತ್ರಗಳ ಮೇಲೆ ಮನಸ್ಸು ಕೇಂದ್ರೀಕರಿಸುವುದನ್ನು 'ಭಗವಾನ್ ಬುದ್ಧರ ಪದ್ಮಾಸನ ಕುರಿತ ಚಿಂತನೆ' ಎನ್ನುತ್ತಾರೆ. ನಮ್ಮ ಕತೆಯ ಹಿನ್ನೆಲೆಯಲ್ಲಿ ಬರುವ ಕಲ್ಪನಾಲೋಕವು ಇಂಥ ಪ್ರಮಾಣದ್ದು ಎಂದು ತಿಳಿಯಬೇಕು.

ಶಿಗಾ ದೇವಾಲಯದ ಮಹಾ ಅರ್ಚಕ ಸದ್ಗುಣಸಂಪನ್ನರಾಗಿದ್ದರು. ಅವರ ಹುಬ್ಬುಗಳು ನೆರೆತಿದ್ದವು. ದೇವಾಲಯದ ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ಒಂದು ಕೋಲನ್ನೂರಿಕೊಂಡು ತಮ್ಮ ಮುಪ್ಪಾದ ಮೂಳೆಮಾಂಸಗಳ ಶರೀರವನ್ನು ಸಾಗಿಸಿಕೊಂಡು ಹೋಗುವುದು ಮಾತ್ರ ಅವರಿಂದ ಸಾಧ್ಯವಾಗುತ್ತಿತ್ತು.

ಇಂಥ ಜ್ಞಾನಿಗಳ ದೃಷ್ಟಿಯಲ್ಲಿ ಈ ಪ್ರಪಂಚವೆಂದರೆ ಕೆಲಸಕ್ಕೆ ಬಾರದ ಹಾಳು ಮೂಳೆಗಳ ರಾಶಿ. ಅನೇಕ ವರ್ಷಗಳಿಂದ ಅವರು ಇಂಥ ಪ್ರಪಂಚದಿಂದ ದೂರವೇ ಇದ್ದರು. ಅವರು ಈಗಿರುವ ನಿವಾಸಕ್ಕೆ ಬಂದ ಮೇಲೆ ತಮ್ಮ ಕೈಯ್ಯಾರೆ ನೆಟ್ಟ ಪೈನ್ ಸಸಿ ಈಗಾಗಲೆ ಬೆಳೆದು ದೊಡ್ಡ ಮರವಾಗಿ, ಅದರ ಕೊಂಬೆಗಳು ಗಾಳಿಯಲ್ಲಲ್ಲಾಡುತ್ತಿವೆ. ಕ್ಷಣಿಕ ಪ್ರಪಂಚವನ್ನು ದೂರವಿಡುವಲ್ಲಿ ಸಫಲರಾಗಿದ್ದ ಇಂಥ ಸನ್ಯಾಸಿಗೆ ತಮ್ಮ ಭವಿಷ್ಯ ಸುಭದ್ರವೆಂಬ ನಂಬಿಕೆಯಿತ್ತು.

ಸದ್ಗುಣಸಂಪನ್ನ ಶ್ರೀಮಂತರನ್ನು ಕಂಡಾಗ ಅರ್ಚಕರು ಇವರು ತಮ್ಮ ವೈಭೋಗವೆಲ್ಲ ವಾಸ್ತವವಾಗಿ ಟೊಳ್ಳುಕನಸುಗಳೆಂದು ಏಕೆ ಅರಿತಿಲ್ಲ ಎಂದು ಕನಿಕರದಿಂದ ಮುಗುಳ್ನಗುತ್ತಿದ್ದರು. ಸುಂದರ ಯುವತಿಯರನ್ನು ಕಂಡಾಗ, ಈ ಅನಿತ್ಯ ಜಗತ್ತಿನಲ್ಲಿ ಮನೆಮಾಡಿ, ಟೊಳ್ಳು ಕನಸುಗಳು

ನೀಡುವ ಸುಖಕ್ಕಾಗಿ ಹಾತೊರೆಯುವ, ಪ್ರಾಪಂಚಿಕ ಸುಖದ ಅಲೆಗಳಿಗೆ ಸಿಕ್ಕಿ ಒದ್ದಾಡುವ ಯುವಕರ ಬಗ್ಗೆ ಮರುಕಹುಟ್ಟುತ್ತಿತ್ತು.

ಯಾವ ಕ್ಷಣದಿಂದ ಒಬ್ಬ ವ್ಯಕ್ತಿಗೆ ಐಹಿಕ ಜಗತ್ತಿನ ಉದ್ದೇಶಗಳು ಯಾವುದೇ ಪ್ರಲೋಭನಗಳನ್ನು ಉಂಟುಮಾಡುವುದಿಲ್ಲವೋ ಆ ಕ್ಷಣದಿಂದ ಆ ವ್ಯಕ್ತಿಗೆ ಇಡೀ ಪ್ರಪಂಚವೇ ಸ್ತಬ್ಧವಾದಂತೆ. ಅರ್ಚಕರ ದೃಷ್ಟಿಯಲ್ಲಿ ಪ್ರಪಂಚ ಎಂದೋ ಸ್ತಬ್ಧವಾಗಿಬಿಟ್ಟಿದೆ. ಪ್ರಪಂಚವೆಂದರೆ ಚೂರು ಕಾಗದದ ಮೇಲೆ ಬರೆದ ಚಿತ್ರ, ಯಾವುದೋ ದೇಶದ ಭೂಪಟ. ಈ ರೀತಿ ಐಹಿಕ ಪ್ರಪಂಚಕ್ಕೆ ಸಂಬಂಧಿಸಿದ ಎಲ್ಲ ಹೇತುಗಳಿಂದ ಮುಕ್ತವಾದ ಮನಃಸ್ಥಿತಿ ಹೊಂದಿದವರಿಗೆ ಭಯ ಎನ್ನುವುದೂ ಮರೆತುಹೋಗಿರುತ್ತದೆ. ಓೀಗಾಗಿ ನರಕದ ಅಸ್ತಿತ್ವದ ಕಾರಣ ಅವರಿಗೆ ತಿಳಿದಿಲ್ಲ. ಈ ವರ್ತಮಾನ ಜಗತ್ತಿಗೆ ತಮ್ಮ ಮೇಲೆ ಯಾವುದೇ ಪ್ರಭಾವ ಬೀರುವ ಶಕ್ತಿ ಖಂಡಿತಾ ಇಲ್ಲವೆಂದು ಅವರು ತಿಳಿದಿದ್ದರು. ಅಹಮಿಕೆಯನ್ನು ಮೀರಿದವರಾದ್ದರಿಂದ ಇದು ತಮ್ಮ ಸಾತ್ವಿಕತೆಯ ಸಾಧನೆ ಎಂಬ ತಿಳುವಳಿಕೆ ಅವರಿಗಿರಲಿಲ್ಲ.

ಅವರ ಶರೀರಕ್ಕೆ ಸಂಬಂಧಿಸಿದಂತೆ, ತಮ್ಮ ಮೈಮಾಂಸ ತಮ್ಮಿಂದ ದೂರವಿರುವ ಅನ್ಯವಸ್ತುವೆಂದು ತಿಳಿದಿದ್ದರು. ಇನ್ನೂ ಹೇಳಬೇಕೆಂದರೆ ಕೆಲವು ಸಂದರ್ಭಗಳಲ್ಲಿ ಉದಾಹರಣೆಗೆ ಸ್ನಾನಮಾಡುವಾಗ ತಮ್ಮ ಉಬ್ಬಿದ ಮೂಳೆಗಳನ್ನು ಸುಕ್ಕುಗಟ್ಟಿದ ಚರ್ಮವು ಬಹಳ ಅಸಹ್ಯಕರ ರೀತಿಯಲ್ಲಿ ಮುಚ್ಚಿರುವುದನ್ನು ಕಂಡು ಅವರು ಹರ್ಷಿಸುತ್ತಿದ್ದರು. ತಮ್ಮ ಶರೀರ ಈ ಹಂತ ತಲುಪಿದ ಮೇಲೆ ಇನ್ನು ತಾವು ಅಸ್ಥಿರ ಜೊತೆ ಇರುವಷ್ಟು ನಿಶ್ಚಿಂತರಾಗಿ ತಮ್ಮ ಶರೀರದ ಬಗ್ಗೆಯೂ ಇರಬಹುದೆಂದು ಭಾವಿಸುತ್ತಿದ್ದರು. ಇಂಥ ಶರೀರವು ಇಹಲೋಕದ ಊಟೋಪಚಾರಗಳಿಗಿಂತ ಪವಿತ್ರಲೋಕದ ಪಾಲನೆಗೆ ತಕ್ಕುದಾಗಿದೆ ಎಂದು ಭಾವಿಸಿದ್ದರು.

ರಾತ್ರಿ ಕನಸನ್ನು ಅವರು ಪವಿತ್ರಲೋಕದಲ್ಲಿ ಕಳೆಯುತ್ತಿದ್ದರು; ಎಚ್ಚರದ ವರ್ತಮಾನದಲ್ಲಿ ಮನಸ್ಸನ್ನು ಆ ಕ್ಷಣಿಕ ಕನಸಿಗೆ ಜೋತುಬಿಟ್ಟು ಅದರಿಂದ ಸಂತೃಪ್ತಿ ಹೊಂದುತ್ತಿದ್ದರು.

ಪುಷ್ಪವೀಕ್ಷಣೆ ಋತುವಿನಲ್ಲಿ ರಾಜಧಾನಿಯಿಂದ ಅನೇಕ ಜನ ಶಿಗಾ ಹಳ್ಳಿಗೆ ಬರುತ್ತಿದ್ದರು. ಇದರಿಂದ ಅರ್ಚಕರಿಗೇನೂ ಬಾಧೆ ಆಗುತ್ತಿರಲಿಲ್ಲ. ಯಾಕೆಂದರೆ ಜಗತ್ತಿನ ಸದ್ದುಗದ್ದಲದಿಂದ ವಿಚಲಿತರಾಗುವ ಹಂತವನ್ನು ಅವರು ಯಾವತ್ತೋ ಮೀರಿದ್ದರು.

ವಸಂತಋತುವಿನ ಒಂದು ಸಂಜೆ ಕೋಲನ್ನೂರುತ್ತ ತಮ್ಮ ಗೂಡಿಂದ ಹೊರಟು ಸರೋವರದ ಬಳಿ ಬಂದರು. ಸಂಧ್ಯಾಕಾಲದ ಮಬ್ಬು ಮಧ್ಯಾಹ್ನದ ಪ್ರಖರತೆಯೊಳಕ್ಕೆ ತೂರಿಕೊಳ್ಳುತ್ತಿದ್ದ ಸಮಯ. ಅಲೆಯುಂಗುರಗಳಿಲ್ಲದೆ ನೀರು ಸ್ತಬ್ಧವಾಗಿತ್ತು. ಅರ್ಚಕರು ಸರೋವರದ ದಡದಲ್ಲಿ ನಿಂತು ನೀರಧ್ಯಾನ ಕ್ರಿಯೆಯಲ್ಲಿ ನಿರತರಾಗಿದ್ದರು.

ಅಷ್ಟರಲ್ಲಿ ಶ್ರೀಮಂತರೊಬ್ಬರ ಎತ್ತಿನ ಬಂಡಿಯೊಂದು ಸರೋವರ ಬಳಸಿ ಬಂದು ಅರ್ಚಕರಿದ್ದ ಕಡೆ ನಿಂತಿತು. ಅದರ ಒಡತಿ ರಾಜಧಾನಿಯ ಕ್ಯೋಗೋಕೂ ಜಿಲ್ಲೆಯವಳು. ದೊರೆಸಾನಿ, ಇವಳು ವಸಂತಋತುವಿನ ಪ್ರಕೃತಿ ಸೌಂದರ್ಯ ವೀಕ್ಷಿಸಲು ಶಿಗಾಕ್ಕೆ ಬಂದಿದ್ದು, ಹಿಂತಿರುಗುವ ಹಾದಿಯಲ್ಲಿ ಬಂಡಿ ನಿಲ್ಲಿಸಿ, ಕೊಳವನ್ನು ಕೊನೇಸಲ ನೋಡಲೆಂಬಂತೆ ಪರದೆ ಸರಿಸಿದ್ದಳು.

ಅರ್ಚಕರು ತಮಗರಿವಿಲ್ಲದಂತೆ ಆ ಕಡೆ ದೃಷ್ಟಿಹಾಯಿಸಿದರು. ಅವಳ ಸೌಂದರ್ಯ ನೋಡಿದ ತಕ್ಷಣ ಮೂಕವಿಸ್ಮಿತರಾದರು. ಇಬ್ಬರ ದೃಷ್ಟಿ ಸೇರಿತು. ಆ ನೇರ ನೋಟದಿಂದ ವಿಚಲಿತರಾಗಲು ಅವರು ಪ್ರಯತ್ನಿಸಲೇ ಇಲ್ಲ. ಆಕೆಯೂ ತನ್ನ ಮುಖವನ್ನು ಬೇರಡೆ ತಿರುಗಿಸುವ ಪ್ರಯತ್ನ ಮಾಡಲಿಲ್ಲ. ಗಂಡಸರು ತನ್ನನ್ನು ಆ ರೀತಿ ದೃಷ್ಟಿ ನೆಟ್ಟು ನೋಡುವುದನ್ನು ವಿರೋಧಿಸದಿರುವುದು ಅವಳ ರೂಢಿ ಎಂದೇನಲ್ಲ. ಆದರೆ ಈ ವಯೋವೃದ್ಧರ ನೋಟದ ಉದ್ದೇಶ ಸಾಮಾನ್ಯ ಜನರ ರೀತಿಯದ್ದಲ್ಲವೆಂದು ಅನಿಸಿರಬೇಕು.

ಕೆಲವು ಕ್ಷಣಗಳ ನಂತರ ಆಕೆ ಪರದೆ ಸರಿಸಿಬಿಟ್ಟಳು. ಬಂಡಿ ನಿಧಾನವಾಗಿ ಚಲಿಸತೊಡಗಿತು. ಶಿಗಾ ಕಣಿವೆಯನ್ನು ದಾಟಿ ರಾಜಧಾನಿ ಬೀದಿಯನ್ನು ಹಿಡಿಯಿತು. ಕತ್ತಲಿಳಿಯುವ ಹೊತ್ತು, ಬೆಳ್ಳಿದೇವಾಲಯದ ರಸ್ತೆ ಮೂಲಕ ಬಂಡಿ ನಗರದೆಡೆ ಸಾಗಿತು. ಬಂಡಿ ಚಿಕ್ಕೆಯಾಗಿ, ಕೊನೆಗೆ ದೂರದ ಮರಗಳ ನಡುವೆ ಮರೆಯಾಗುವವರೆಗೂ ಅರ್ಚಕರು ಬೇರುಬಿಟ್ಟಂತೆ ನಿಂತಕಡೆಯೆ ನಿಂತಿದ್ದರು.

ಕಣ್ಣುಮಿಟುಕಿಸುವುದರಲ್ಲಿ ಇಹಲೋಕವು ತನ್ನ ಭಯಂಕರ ಶಕ್ತಿಯಿಂದ ಅರ್ಚಕರ ವಿರುದ್ಧ ಸೇಡು ತೀರಿಸಿಕೊಳ್ಳುವಂತೆ ಅವರ ಮೇಲೆ ಪ್ರಹಾರ ಮಾಡಿಬಿಟ್ಟಿತ್ತು. ಯಾವುದರ ಬಗ್ಗೆ ಇನ್ನು ತಾವು ನಿರ್ಭೀತಿಯಿಂದಿರಬಹುದೆಂದು ಕೊಂಡಿದ್ದರೊ ಅದೇ ಈಗ ಹಾಳುಗೆಡವಿಬಿದ್ದಿತ್ತು.

ದೇವಾಲಯದೊಳಕ್ಕೆ ಬಂದು, ಬುದ್ಧನ ಮಹಾಮೂರ್ತಿಯ ಮುಂದೆ ನಿಂತರು. ಮಂತ್ರ ಪಠಿಸುತ್ತಿದರು. ಆದರೆ, ಅಪವಿತ್ರ ಆಲೋಚನೆಗಳು ತಮ್ಮ ದಟ್ಟ ಛಾಯೆಯನ್ನು ಅವರ ಸುತ್ತ ಹಬ್ಬಿಸತೊಡಗಿದ್ದವು. ಹೆಣ್ಣಿನ ಸೌಂದರ್ಯವು ಅನಿತ್ಯ ಕ್ಷಣಿಕ; ಮುಂದೊಮ್ಮೆ ಕೊಳೆತು ನಾಶವಾಗುವ ಮೂಳೆ-ಮಾಂಸಗಳ ಅವಸ್ಥೆ ಮಾತ್ರ ಎಂದು ಹೇಳಿಕೊಳ್ಳತೊಡಗಿದರು. ಎಷ್ಟು ಪ್ರಯತ್ನಪಟ್ಟರೂ ಸರೋವರದ ಬಳಿ ಒಂದೇ ಕ್ಷಣದಲ್ಲಿ ಹಲ್ಲೆಮಾಡಿಬಿಟ್ಟಿದ್ದ ಆ ಸೌಂದರ್ಯವನ್ನು ಮನಸ್ಸಿನಿಂದ ದೂರಮಾಡಲು ಅವರಿಗೆ ಸಾಧ್ಯವಾಗಲಿಲ್ಲ. ಅದೊಂದು ಅನತಿದೂರದಿಂದ ಅಪಾರ ಶಕ್ತಿಯಿಂದ ಬಂದ ವಸ್ತುವಿನಂತೆ ಅವರ ಮೇಲೆ ಆಕ್ರಮಣ ಮಾಡಿಬಿಟ್ಟಿತ್ತು. ಈ ನವೀನ ಭಾವನೆ ಶರೀರದ ಕುಚೇಷ್ಟೆಗಳಲ್ಲಿ ಒಂದು ಎಂದುಕೊಳ್ಳಲು ಅರ್ಚಕರೇನು ಶಾರೀರಕವಾಗಲಿ, ಆಧ್ಯಾತ್ಮಿಕವಾಗಲಿ ಯುವಕರೇನಾಗಿರಲಿಲ್ಲ. ಮನುಷ್ಯನ ಮೂಳೆ-ಮಾಂಸಗಳು ಇಷ್ಟು ಬೇಗ ಈ ರೀತಿ ಪರಿವರ್ತನೆಯಾಗದೆಂದು ಅವರಿಗೆ ಚೆನ್ನಾಗಿ ತಿಳಿದಿತ್ತು.

ಅರ್ಚಕರು ತಮ್ಮ ಬ್ರಹ್ಮಚರ್ಯವ್ರತವನ್ನು ಎಂದೂ ಮುರಿದಿರಲಿಲ್ಲ. ಯುವಾವಸ್ಥೆಯಲ್ಲಿ ತಮ್ಮ ಶರೀರದ ಬೇಡಿಕೆಗಳ ವಿರುದ್ಧ ಅವರ ಅಂತರಾಳದಲ್ಲಿ ಉಂಟಾಗಿದ್ದ ಯುದ್ಧದ ಪರಿಣಾಮವಾಗಿ ಎಲ್ಲ ಹೆಂಗಸರನ್ನು ಅವರು ಕೇವಲ ಮಾಂಸಲ ಜೀವಿಗಳು ಎಂದು ಭಾವಿಸತೊಡಗಿದ್ದರು. ತಮ್ಮ ಭಾವನಾಲೋಕದಲ್ಲಿದ್ದುದು ಮಾತ್ರ ಸತ್ಯವಾದ ಮೂಳೆ ಮಾಂಸ: ಶರೀರವೆಂದರೆ ಒಂದು ಆದರ್ಶೀಕೃತ ಅಮೂರ್ತತೆಯ ಹೊರತು ಭೌತಿಕ ಸತ್ಯವಲ್ಲವೆಂದು ನಂಬಿದ್ದರು. ಶಾರೀರಕವಾದದ್ದನ್ನು ಅಂಕೆಯಲ್ಲಿಡುವ ಸಲುವಾಗಿ ಆಧ್ಯಾತ್ಮಿಕ ಶಕ್ತಿಯ ಮೊರೆ ಹೊಕ್ಕಿದ್ದರು. ಈ ಪ್ರಯತ್ನದಲ್ಲಿ ಅವರ ಬಗ್ಗೆ ಯಾರಿಗೂ ಶಂಕೆ ಬಾರದಷ್ಟು ಸಫಲರಾಗಿದ್ದರು.

ಆದರೆ ಗಾಡಿಯ ಪರದೆ ಸರಿಸಿ ಸರೋವರ ದಿಟ್ಟಿಸಿದ ಹೆಣ್ಣಿನ ಮುಖವು ಎಷ್ಟು

ಸುಂದರವಾಗಿತ್ತೆಂದರೆ ಅದು ಕೇವಲ ಮೂಳೆ - ಮಾಂಸಗಳ ಮುದ್ದೆ ಎನ್ನಲು ಅರ್ಚಕರಿಗೆ ಅಸಾಧ್ಯವಾಯಿತು; ಅದಕ್ಕೆ ತಕ್ಕನಾದ ಬೇರೊಂದು ಹೆಸರು ಕೊಡುವುದೂ ಅವರಿಂದ ಸಾಧ್ಯವಾಗದಾಯಿತು. ತುಂಬಾ ಹಿಂದಿನಿಂದ ತಮ್ಮೊಳಗೇ ಅವಿತಿಟ್ಟುಕೊಂಡಿದ್ದ ಯಾವುದೋ ಒಂದು ವಿಶೇಷತೆ ಈಗ ಪ್ರಕಾಶಗೊಂಡಿರಬೇಕು, ಆದ್ದರಿಂದಲೇ ಆ ಒಂದು ವಿಚಿತ್ರ ಕ್ಷಣ ಅರಳಲು ಸಾಧ್ಯವಾಯಿತು. ಆ ವಿಶೇಷತೆ ಬೇರೆ ಯಾವುದೂ ಅಲ್ಲ, ಇದುವರೆಗೂ ಸುಪ್ತಾವಸ್ಥೆಯಲ್ಲಿದ್ದು, ಈಗ ಬೆಳಕಿನಲ್ಲಿ ಪ್ರಕಟಗೊಂಡ ಇಹಲೋಕವೇ ಆಗಿತ್ತು.

ಎರಡು ಎತ್ತಿನ ಗಾಡಿಗಳು ಜೋರುಶಬ್ದ ಮಾಡುತ್ತ ಹೋಗುವಾಗ ಕೈಗಳಿಂದ ಕಿವಿಗಳೆರಡನ್ನೂ ಭದ್ರವಾಗಿ ಮುಚ್ಚಿಕೊಳ್ಳುವಂತೆ ತಮ್ಮ ಕಿವಿಗಳನ್ನೂ ಮುಚ್ಚಿಕೊಂಡು ರಾಜಧಾನಿ ರಸ್ತೆ ಬದಿಯಲ್ಲಿ ನಿಂತುಬಿಟ್ಟಿದ್ದರು. ಇದ್ದಕ್ಕಿದ್ದಂತೆ ಕೈ ತೆಗೆದರು. ಹೊರ ಲೋಕದ ಸದ್ದುಗದ್ದಲ ಅವರನ್ನು ಪೂರ್ತಿ ಆಕ್ರಮಿಸುತ್ತಿರುವುದು ಭಾಸವಾಯಿತು.

ಕ್ಷಣಕ್ಷಣಕ್ಕೂ ಬದಲಾಗುವ ಅವಸ್ಥೆಯ ಏರಿಳಿತಗಳನ್ನು ಗ್ರಹಿಸುವುದು, ಅದರ ಗದ್ದಲಕ್ಕೆ ಕಿವಿಗಡಚಿಕ್ಕುವಂತಾಗುವುದು : ಇವು ತಾವು ಇಹಲೋಕದ ಚಕ್ರದೊಳಗೆ ಸಿಲುಕಿರುವುದಕ್ಕೆ ಸಾಕ್ಷಿ. ಬಾಹ್ಯಲೋಕದ ಜೊತೆಗಿನ ಸರ್ವಸಂಬಂಧವನ್ನು ನಿವಾರಿಸಿಕೊಂಡಿದ್ದ ನಮ್ಮ ಅರ್ಚಕರಿಗೆ ಈಗ ಮತ್ತೊಮ್ಮೆ ಮೋಹದ ಅವಸ್ಥೆಗೆ ಸಿಲುಕಿಕೊಂಡಿರುವುದು ಅರಿವಿಗೆ ಬಂದಿತು.

'ಸೂತ್ರ'ಗಳನ್ನು ಓದುತ್ತಿರುವಾಗ ಆಗಾಗ್ಗೆ ತಮ್ಮಿಂದ ಹೊರಡುತ್ತಿದ್ದ ಬೇಗುದಿಯ ನಿಟ್ಟುಸಿರುಗಳು ಅವರಿಗೂ ಕೇಳಿಸುತ್ತಿತ್ತು. ಪ್ರಕೃತಿ ಸೌಂದರ್ಯವಾದರೂ ತಮ್ಮ ಮನಃಸ್ಥಿತಿ ಸುಧಾರಿಸುವಲ್ಲಿ ಸಹಾಯಕ್ಕೆ ಬಂದೀತೆಂದು ಕಿಟಕಿಯಾಚೆ ಸಂಜೆಯಾಕಾಶದಲ್ಲಿ ಮೇಲೆದ್ದು ನಿಂತಂತೆ ಕಾಣುತ್ತಿದ್ದ ದೂರದ ಪರ್ವತಗಳ ಕಡೆ ದೃಷ್ಟಿ ಹಾಯಿಸಿದರು. ಪ್ರಕೃತಿ ರಮಣೀಯತೆಯ ಕಡೆ ಮನಸ್ಸು ನಿಲ್ಲುವುದರ ಬದಲು ಗುಂಪು ಗುಂಪಾಗಿ ಒಡೆದು ಚೆದುರುವ ಮೋಹದಂತಾಯಿತು. ಚಂದ್ರನ ಮೇಲೆ ದೃಷ್ಟಿ ನಿಲ್ಲಿಸಿದರು. ಆದರೂ ಆಲೋಚನೆಗಳು ಮಾತ್ರ ಮುಂಚಿನಂತೇ ಹರಿಯುತ್ತಿದ್ದವು. ಮನಸ್ಸಿನ ಪವಿತ್ರತೆಯನ್ನು ಪುನಃ ಸ್ಥಾಪಿಸಲು ಮತ್ತೊಂದು ಪ್ರಯತ್ನ ಮಾಡಿದರು; ಮಹಾಮೂರ್ತಿಯ ಮುಂದೆ ಹೋಗಿ ನಿಂತರು. ಆದರೆ ಬರಬರುತ್ತ ಬುದ್ಧನ ಮುಖಚರ್ಯೆ ಗಾಡಿಯಲ್ಲಿದ್ದ ಹೆಂಗಸಿನ ಮುಖಚರ್ಯೆಯಾಗಿ ಬದಲಾಯಿತು. ಅರ್ಚಕರ ಬ್ರಹ್ಮಾಂಡ ಒಂದು ಚಿಕ್ಕ ವೃತ್ತದೊಳಗೆ ಬಂಧಿಯಾಗಿ ಬಿಟ್ಟಿತ್ತು. ಆ ವೃತ್ತದೊಳಗೆ ಈ ಕಡೆ ಅರ್ಚಕರಾದರೆ ಆ ಕಡೆ ಆ ದೊರೆಸಾನಿ.

ಕ್ಯೋಗೋಕೂಪಿನ ದೊರೆಸಾನಿ ಶಿಗಾ ಸರೋವರದ ಬಳಿ ಅರ್ಚಕರು ತನ್ನನ್ನೇ ನೋಡುತ್ತಿದ್ದರು ಎನ್ನುವುದನ್ನು ಮರೆತು ಹೋಗಿದ್ದಳು. ಕೆಲಕಾಲದ ನಂತರ ಒಂದು ಗುಸುಗುಸು ಮಾತು ಅವಳ ಕಿವಿಗೂ ಬಿದ್ದಾಗ ಆ ಘಟನೆ ನೆನಪಾಯಿತು. ದೂರದಲ್ಲಿ ಮರೆಯಾಗುವವರೆಗೂ ತನ್ನ ಬಂಡಿಯನ್ನೇ ನೋಡುತ್ತ ನಿಂತಿದ್ದ ಅರ್ಚಕರನ್ನು ಹಳ್ಳಿಯವನೊಬ್ಬ ನೋಡಿದ್ದ. ಪುಷ್ಪವೀಕ್ಷಣೆಗೆ ಶಿಗಾಕ್ಕೆ ಬಂದಿದ್ದ ಆಸ್ಥಾನದ ಒಬ್ಬನ ಬಳಿ ಈ ಘಟನೆಯ ಬಗ್ಗೆ ಮತ್ತು ಆ ಘಟನೆಯಾದಾಗಿನಿಂದ ಅರ್ಚಕರು ಮೊದಲಿನಂತಿಲ್ಲವೆಂಬುದರ ಬಗ್ಗೆ ಹೇಳಿದ್ದ.

ಆಕೆ ಈ ಗಾಳಿಮಾತನ್ನು ನಂಬದಂತಿದ್ದಳು. ಅರ್ಚಕರ ಸಭ್ಯತೆ ಇಡೀ ರಾಜಧಾನಿಗೇ

ಗೊತ್ತಿತ್ತು. ಹಾಗಾಗಿ ಈ ಘಟನೆಯಿಂದ ಆಕೆಗೆ ಒಂದು ರೀತಿಯ ಗರ್ವ ಬಂದಿದ್ದರೂ ಆಶ್ಚರ್ಯವಿಲ್ಲ.

ಮೇಲಾಗಿ, ಲೌಕಿಕದವರಿಂದ ಅವಳಿಗೆ ದೊರೆತಿದ್ದ ಪ್ರೇಮದಿಂದ ಅವಳು ಬೇಸತ್ತಿದ್ದಳು. ಆಕೆಗೆ ತನ್ನ ಸೌಂದರ್ಯದ ಬಗ್ಗೆ ಗರ್ವವಿತ್ತು. ತನ್ನ ಸೌಂದರ್ಯ ಮತ್ತು ದೊಡ್ಡಸ್ತಿಕೆಗಳನ್ನು ಮಾನ್ಯಮಾಡದಂಥ, ಇವೆರಡಕ್ಕೂ ಮಿಗಿಲಾದ ಆಕರ್ಷಣೆಗೆ ಅದು ಧಾರ್ಮಿಕವಾದದ್ದಾದರೂ ಸರಿ- ಮಾರುಹೋಗುವ ಅವಸ್ಥೆಯಲ್ಲಿ ಅವಳಿದ್ದಳು. ಇಹಲೋಕದ ವ್ಯಾಮೋಹ ಕಡಿಮೆಯಾಗಿ ನಿರಾಸಕ್ತಿ ಮೂಡತೊಡಗಿದ್ದರಿಂದ ಅವಳಿಗೆ 'ಪವಿತ್ರಲೋಕ'ದ ಬಗ್ಗೆ ನಂಬಿಕೆ ಉಂಟಾಗಿತ್ತು. ಸೌಂದರ್ಯ-ದೊಡ್ಡಸ್ತಿಕೆಗಳನ್ನು ಕೀಳೆಂದು ಭಾವಿಸುವ ಜೊಡೊ ಬೌದ್ಧಧರ್ಮವು ದೊರೆಸಾನಿಯಂಥವಳಿಗೆ ಸ್ವಾಭಾವಿಕವಾಗಿ ಹೆಚ್ಚು ಪ್ರಿಯವಾಗತೊಡಗಿತ್ತು. ಅರಮನೆಯ ಭವ್ಯತೆ, ಭೋಗಜೀವನದ ಬಗ್ಗೆ ಭ್ರಮನಿರಸನಗೊಂಡಿದ್ದಳು. ಇಷ್ಟಾದರೂ ತನ್ನ ಪ್ರೇಮವನ್ನು ಆಕೆ ಯಾವ ಗಂಡಸಿನೊಂದಿಗೂ ಹಂಚಿಕೊಂಡಿಲ್ಲದ್ದು ಅವಳಿಗೆ ಇನ್ನೂ ಹೆಮ್ಮೆಯ ವಿಷಯವೆನಿಸಿತ್ತು. ಚಕ್ರವರ್ತಿಯ ಪ್ರತಿ ತನ್ನ ಕರ್ತವ್ಯವನ್ನು ಅತಿ ಅಚ್ಚುಕಟ್ಟಾಗಿ ನಿರ್ವಹಿಸುತ್ತಿದ್ದಳು. ಆದರೂ ಅವಳು ಚಕ್ರವರ್ತಿಯನ್ನೇನು ಪ್ರೀತಿಸುತ್ತಿಲ್ಲವೆಂದು ಎಲ್ಲರಿಗೂ ಗೊತ್ತಿತ್ತು. ಪ್ರೇಮ ಎನ್ನುವುದು ಅಸಾಧ್ಯತೆಯ ಅಂಚಿನಲ್ಲಿದೆ ಎಂದೇ ಭಾವಿಸಿ, ಅದರ ಬಗ್ಗೆ ಅವಳು ಕನಸು ಕಾಣುತ್ತಿದ್ದಳು.

ಸಭ್ಯತೆಗೆ ಇನ್ನೊಂದು ಹೆಸರಾಗಿದ್ದ ಶಿಗಾ ದೇವಾಲಯದ ಮಹಾ ಅರ್ಚಕರು, ಧಾರ್ಮಿಕ ವಯೋವೃದ್ಧರು, ಇಹಲೋಕದಿಂದ ಬಹಳ ದೂರ ಸಾಗಿರುವುದು ಇಡೀ ರಾಜಧಾನಿಗೆ ತಿಳಿದಿದ್ದ ವಿಷಯ. ಹಾಗಾಗಿ ದೊರೆಸಾನಿಯ ಸೌಂದರ್ಯದಿಂದ ಅವರು ವಿಚಲಿತರಾದ ಸುದ್ದಿ ಅವಳಿಗಾಗಿ ಅವರು ಕಷ್ಟಪಟ್ಟು ಪ್ರಾಪ್ತಿಯಾಗಿದ್ದ ಪರಲೋಕವನ್ನು ತ್ಯಜಿಸಿರುವ ಸುದ್ದಿ ಎಲ್ಲರಿಗೂ ಆಶ್ಚರ್ಯ ತಂದಿತ್ತು. 'ಪವಿತ್ರ ಲೋಕ'ದ ಸಾಮೀಪ್ಯಕ್ಕೆ ಹೋಗಿಯೂ, ಅದರ ಆನಂದವನ್ನು ತ್ಯಜಿಸುವುದೆಂದರೆ ಅದಕ್ಕಿಂತ ದೊಡ್ಡ ತ್ಯಾಗ ಯಾವುದಿದೆ?

ಅವಳ ಮುಂದೆ ಹಾಯುತ್ತಿದ್ದ ಯುವಕರ, ಆಸ್ಥಾನಿಕರ ಆಕರ್ಷಣೆಗಳ ಬಗ್ಗೆ ದೊರೆಸಾನಿ ನಿರಾಸಕ್ತಳಾಗಿದ್ದಳು. ಗಂಡಸರ ಶಾರೀರಕ ಹೆಗ್ಗಳಿಕೆಗಳೆಲ್ಲ ಅವಳಿಗೆ ಅರ್ಥಹೀನವೆನಿಸಿದ್ದವು. ಸಾಧ್ಯವಿದ್ದಷ್ಟೂ ಆಳವಾದ, ಶಕ್ತವಾದ ಪ್ರೇಮ ನೀಡಬಲ್ಲ ಪುರುಷನಿಗಾಗಿ ಅವಳು ಹಂಬಲಿಸುತ್ತಿದ್ದಳು. ಇಂಥಾ ಮನೋಭಾವವುಳ್ಳ ಇವಳು ಅದೆಂಥಾ ಭೀಕರ ಸ್ತ್ರೀ.

ಅವಳು ಕೇವಲ ವೇಶ್ಯೆಯಾಗಿದ್ದಿದ್ದರೆ ಪ್ರಾಪಂಚಿಕ ಸುಖಗಳಿಂದ ತೃಪ್ತಳಾಗಬೇಕಿತ್ತು. ಆದರೆ ಈ ದೊರೆಸಾನಿ ಇಹಲೋಕದ ಎಲ್ಲ ಶ್ರೀಮಂತಿಕೆಯನ್ನು ಈಗಾಗಲೆ ಸವಿದಿದ್ದು, ಪರಲೋಕದ ಶ್ರೀಮಂತಿಕೆಯನ್ನು ನೀಡಬಲ್ಲ ಪುರುಷನಿಗಾಗಿ ಕಾಯುತ್ತಿದ್ದಳು.

ಮಹಾಅರ್ಚಕನ ಮೋಹದ ಬಗೆಗಿನ ಗಾಳಿಮಾತು ಆಸ್ಥಾನವನ್ನೆಲ್ಲ ತುಂಬಿತು. ಕಡೆಗೆ ಇದೊಂದು ತಮಾಷೆ ಕತೆ ಅನ್ನುವಂತೆ ಇದನ್ನು ಚಕ್ರವರ್ತಿಗೂ ಹೇಳಲಾಯಿತು. ಈ ಗಾಳಿಮಾತಿನಿಂದ ಖುಷಿಯನ್ನೂ ಪಡದೆ, ತತ್ತರಿಸಿಯೂ ಹೋಗದೆ ದೊರೆಸಾನಿ ಮಾತ್ರ ಶಾಂತವಾಗಿದ್ದಳು. ಇಂಥ ವಿಷಯದ ಬಗ್ಗೆ ಹಗುರವಾಗಿ ಮಾತಾಡಲು ಆಸ್ಥಾನದ ಜನರಿಗೆ ಎರಡು ಕಾರಣಗಳಿದ್ದವು : ಒಂದು, ಮಹಾಅರ್ಚಕರ ವಿಷಯವಾಗಿ ಮಾತಾಡುತ್ತ, ಅಂಥ ಒಬ್ಬ ಸಾಧುವನ್ನು ಧ್ಯಾನದಿಂದ ವಿಚಲಿತನನ್ನಾಗಿಸಬಲ್ಲ ತನ್ನ ಸೌಂದರ್ಯವನ್ನು ಹೊಗಳಲು

ಅವಕಾಶ: ಏರಪಡಿಸಿಯು, ಆ ವೃದ್ಧನ ಪ್ರೇಮಕ್ಕೆ ಅವಳ ಪ್ರತಿಪ್ರೇಮ ಸಿಗುವುದಿಲ್ಲವೆಂಬ ನಂಬಿಕೆ.

ತನ್ನ ಬಂಡಿಯ ಕಿಟಕಿಯಿಂದ ನೋಡಿದ ಅರ್ಚಕರ ಮುಖವನ್ನು ದೊರೆಸಾನಿ ನೆನಪುಮಾಡಿಕೊಂಡಳು. ಆ ಮುಖ ಇದುವರೆಗೆ ತನ್ನನ್ನು ಪ್ರೇಮಿಸಿದ ಯಾವ ಪುರುಷನ ಮುಖವನ್ನೂ ಹೋಲುವುದಿಲ್ಲ. ಪ್ರತಿಪ್ರೇಮ ಪಡೆಯುವ ಯಾವ ಯೋಗ್ಯತೆಯನ್ನೂ ಪಡೆದಿರದ ಪುರುಷನೊಬ್ಬನ ಹೃದಯದಲ್ಲಿ ಪ್ರೇಮ ಉಕ್ಕಿದೆ ಎಂದರೆ ಆಶ್ಚರ್ಯ. ತಮ್ಮ ಪ್ರೇಯಸಿಯರು ನಿರಾಸಕ್ತಿ ತೋರಿದಾಗ ಅವರಿಂದ ಅನುಕಂಪ ಪಡೆಯಲೆಂದು ಕುಕವಿಗಳು ಬಳಸುತ್ತಿದ್ದ ಸಾಲುಗಳು ಅವಳಿಗೆ ನೆನಪಾದವು :

ಎಂಥ ತಬ್ಬಲಿ ಈ ನನ್ನ ಪ್ರೀತಿ
ಕಿಂಚಿತ್ತೂ ಭರವಸೆಯು ಇಲ್ಲದ ಗತಿ

ಅರ್ಚಕರ ನಿರಾಶಾದಾಯಕ ಸ್ಥಿತಿಗೆ ಹೋಲಿಸಿದರೆ, ಒಂದಿಷ್ಟೂ ಅದೃಷ್ಟಶಾಲಿಗಳಲ್ಲದ ಈ ಭವ್ಯಪ್ರೇಮಿ ಕುಕವಿಗಳ ಸ್ಥಿತಿಯೇ - ಅವರ ಕವಿತೆಯ ಸಾಲುಗಳು ಢಾಂಬಿಕತೆ ಮತ್ತು ದುಃಖದ ನಟನೆಗಳ ಗೋಜಲುಗಳಾಗಿದ್ದರೂ ಸಹ - ವಾಸಿ ಎನಿಸುತ್ತಿತ್ತು.

ಇಷ್ಟು ಹೊತ್ತಿಗೆ ಓದುಗನಿಗೆ ತಿಳಿದಿರಬಹುದು, ಈ ದೊರೆಸಾನಿ ಜನರಾಡಿಕೊಳ್ಳುವಂತೆ ಆಸ್ಥಾನದ ಭವ್ಯತೆಯ ಕುರುಹು ಮಾತ್ರವಲ್ಲ. ಆದರ್ಶ ಪ್ರೇಮವೇ ಜೀವನದ ಸಾರ್ಥಕತೆ ಎಂದು ಅರಿತ ಜ್ಞಾನಿಯೂ ಹೌದು. ಅವಳು ಎಷ್ಟು ಉಚ್ಚಸ್ಥಾನದಲ್ಲಿದ್ದರೂ ಮೂಲತಃ ಹೆಣ್ಣಾದ ಕಾರಣ ಇಂಥ ನಿರ್ಜೀವ ಪ್ರಪಂಚದ ಎಲ್ಲ ಅಧಿಕಾರ-ಶಕ್ತಿಗಳೂ ಟೊಳ್ಳೆಂದು ಬಲ್ಲವಳು. ಅವಳ ಪರಿಸರದಲ್ಲಿದ್ದ ಪುರುಷರು ರಾಜಕೀಯ ಕಾರಣಗಳಿಗಾಗಿ ಸದಾ ಹೋರಾಟದಲ್ಲಿ ತೊಡಗಿದ್ದವರು. ಆದರೆ ಇವಳ ಕನಸು ಇಂಥ ಹೋರಾಟಕ್ಕೆ ವಿರುದ್ಧವಾದ ರೀತಿಯಲ್ಲಿ ಪ್ರಪಂಚವನ್ನು ತನ್ನೊಳಗು ಮಾಡಿಕೊಳ್ಳುವುದರ ಬಗ್ಗೆ. ಅವಳ ಗುರುತಿನ ಅನೇಕ ಮಹಿಳೆಯರು ಈಗಾಗಲೆ ಕೇಶತ್ಯಾಗ ಮಾಡಿ ಪ್ರಾಪಂಚಿಕ ವಿಷಯಗಳಿಂದ ನಿವೃತ್ತರಾಗಿದ್ದರು. ಅಂಥವರನ್ನು ಕಂಡಾಗ ಇವಳಿಗೆ ನಗು ಬರುತ್ತಿತ್ತು. ಯಾಕೆಂದರೆ ಪ್ರಾಪಂಚಿಕ ಆಸೆಗಳಿಂದ ದೂರವಾಗುವುದರ ಬಗ್ಗೆ ಯಾರು ಏನೇ ಹೇಳಲಿ ಇವಳಿಗೆ ಮಾತ್ರ ತಾನು ಪಡೆದಿರುವುದನ್ನು ಬಿಟ್ಟುಕೊಡಲು ಅಸಾಧ್ಯವಾಗಿತ್ತು. ಅವಳ ಪ್ರಕಾರ ತಮ್ಮ ಆಸ್ತಿ ಪಾಸ್ತಿ ತ್ಯಜಿಸಲು ಪುರುಷರು ಮಾತ್ರ ಸಮರ್ಥರು.

ಸರೋವರದ ಬಳಿಯಲ್ಲಿ ಕಂಡ ಆ ವಯೋವೃದ್ಧ ಅರ್ಚಕರು ತಮ್ಮ ಜೀವನದ ಒಂದು ಘಟ್ಟದಲ್ಲಿ ಈ ತೇಲಿಹೋಗುವ ಪ್ರಪಂಚವನ್ನು ಮತ್ತದರ ಸುಖವನ್ನು ತ್ಯಾಗಮಾಡಿ ಬಿಟ್ಟಿದ್ದರು. ದೊರೆಸಾನಿಯ ದೃಷ್ಟಿಯಲ್ಲಿ ತನಗೆ ಪರಿಚಯವಿದ್ದ ಆಸ್ಥಾನದ ಎಲ್ಲ ಪುರುಷರಿಗಿಂತ ಇವರೇ ಹೆಚ್ಚು ಪೌರುಷವುಳ್ಳವರಾಗಿ ತೋರಿದರು. ಹಿಂದೊಂದು ದಿನ ಈ ಕ್ಷಣಿಕ ಪ್ರಪಂಚವನ್ನು ಪವಿತ್ರಲೋಕ ಪ್ರಾಪ್ತಿಗಾಗಿ ತ್ಯಜಿಸಿದ್ದ ಹಾಗೆ ಈಗ ಅವರು ಈಕೆಗಾಗಿ ಪವಿತ್ರಲೋಕ ಪ್ರಾಪ್ತಿಯ ಹಂಬಲವನ್ನೆ ತ್ಯಾಗಮಾಡಲು ಸಿದ್ಧರಿದ್ದಾರೆ.

ದೊರೆಸಾನಿ ಪವಿತ್ರವಾದ ಪದ್ಮಪುಷ್ಪದ ಭಾವವನ್ನು ಮನಸ್ಸಿಗೆ ತಂದುಕೊಂಡಳು. ಅವಳ ಆಳವಾದ ನಂಬಿಕೆಯೇ ಅದನ್ನು ಮನಸ್ಸಿನ ಮುಂದೆ ಅಚ್ಚೊತ್ತುತ್ತಿದ್ದು ಇನ್ನೂರ ಐವತ್ತು ಯೋಜನ ಅಗಲವಾದ ಬೃಹತ್ ಪುಷ್ಪವನ್ನು ಮನಸ್ಸಿನ ಮುಂದೆ ತಂದುಕೊಂಡಳು. ರಾಜಧಾನಿಯ

ಕೊಳಗಳಲ್ಲಿ ತೇಲುತ್ತಿದ್ದ ಪುಟ್ಟಪುಟ್ಟ ತಾವರೆಗಳಿಗಿಂತ ಆ ಬೃಹತ್ ಪದ್ಮಪುಷ್ಪವೇ ತನ್ನ ಸ್ವಭಾವಕ್ಕೆ ಹೆಚ್ಚು ಹೊಂದಿಕೊಳ್ಳುವಂತೆ ತೋರಿತು. ರಾತ್ರಿ ತೋಟದ ಮರಗಳ ನಡುವೆ ಹಾಯುವ ಗಾಳಿಯ ಸುಯ್ಲು ಪವಿತ್ರಲೋಕದ ಅಮೂಲ್ಯ ಮರಗಳ ನಡುವೆ ಸುಳಿಯುವ ಗಾಳಿಯಲ್ಲಿನ ಸೂಕ್ಷ್ಮತರ ಸಂಗೀತಕ್ಕೆ ಹೋಲಿಸಿದರೆ ತೀರ ಗೌಣವೆನಿಸುತ್ತಿತ್ತು. ಅರಮನೆಯ ವಿಶಾಲ ಕೊಠಡಿಗಳಲ್ಲಿ ಸಿಕ್ಕಿಕೊಂಡು ನುಡಿಯುತ್ತಿದ್ದ ವೀಣೆಯ ಸಂಗೀತವು ನುಡಿಯುವವರಿಲ್ಲದಿದ್ದರೂ ನುಡಿಯುತ್ತಿದ್ದ, ಆಕಾಶದಲ್ಲಿ ತೂಗಾಡುತ್ತಿದ್ದ ಅನೇಕ ವಾದ್ಯಗಳ ಸಂಗೀತದ ಮುಂದೆ ವ್ಯರ್ಥ ಅನುಕರಣೆ ಎನಿಸುತ್ತಿತ್ತು.

ಶಿಗಾ ದೇವಾಲಯದ ಮಹಾಅರ್ಚಕರ ಅಂತರಂಗದೊಳಗೆ ಮಹಾನ್ ಯುದ್ಧವೇ ನಡೆದಿತ್ತು. ಯುವಕರಾಗಿದ್ದಾಗ, ಶರೀರದ ಕಾಮನೆಗಳ ವಿರುದ್ಧ ಸಾರಿದ್ದ ಸಮರದ ಕಾಲದಲ್ಲಿ ಅವರಿಗೆ ಪವಿತ್ರಲೋಕ ಪ್ರಾಪ್ತಿಯ ಆಶಾಕಿರಣ ಸಮತೋಲನ ಕಾಪಾಡಿಕೊಳ್ಳಲು ನೆರವಾಗಿತ್ತು. ಆದರೆ ಈ ವೃದ್ಧಾವಸ್ಥೆಯಲ್ಲಿ ನಡೆಯುತ್ತಿದ್ದ ಸಮರ ಕಾಲದಲ್ಲಿ ಅವರ ಜೊತೆಗಿದ್ದುದು ಭರಿಸಲಾಗದ ನಷ್ಟದ ಭಾವನೆಯೊಂದೆ.

ತಮ್ಮ ಹಾಗೂ ದೊರೆಸಾನಿ ಪ್ರೇಮದ ಸಾರ್ಥಕತೆ ಅಸಾಧ್ಯವೆಂಬುದು ಆಕಾಶದಲ್ಲಿದ್ದ ಸೂರ್ಯನಷ್ಟೇ ಸ್ಪಷ್ಟವಾಗಿತ್ತು. ಅಲ್ಲದೆ ಪ್ರೇಮದ ಕಾಮನೆ ತಮ್ಮಲ್ಲಿರುವವರೆಗೂ ಪವಿತ್ರಲೋಕದೆಡೆ ಹೋಗುವುದು ಅಸಾಧ್ಯವೆಂದು ಅವರಿಗೆ ತಿಳಿದ ವಿಷಯವೇ. ಇಲ್ಲಿಯವರೆಗೂ ಜೀವನ್ಮುಕ್ತರೆಂಬಂತಿದ್ದ ಮಹಾಅರ್ಚಕರು ಕಣ್ಣುಮಿಟುಕಿಸುವುದರಲ್ಲಿ, ಕತ್ತಲೆಯಿಂದ ಆವೃತರಾಗಿಬಿಟ್ಟಿದ್ದಾರೆ. ಭವಿಷ್ಯ ಮಸುಕು ಮಸುಕು. ಯುವಕನಾಗಿದ್ದಾಗ ಚಪ್ಪಾಳೆ ತಟ್ಟಿದರೆ ಸಾಕು, ಸಿಗಬಹುದಾಗಿದ್ದ ಎಲ್ಲ ಸುಖಗಳನ್ನು ತಾವೇ ಮನಸಾರೆ ತ್ಯಾಗಮಾಡಿ ಬಿಟ್ಟಿದ್ದರು. ಆಗಿದ್ದ ಆತ್ಮವಿಶ್ವಾಸ, ಆತ್ಮಸ್ಥೈರ್ಯಗಳು ಈಗ ಕಳೆದುಹೋಗಿಬಿಟ್ಟಿವೆ.

ಅರ್ಚಕರಿಗೆ ಮತ್ತೊಮ್ಮೆ ಭಯ ಆವರಿಸಿಕೊಂಡಿತು. ಅಂದು ಆ ಬಂಡಿಯು ಶಿಗಾ ಸರೋವರದ ಬಳಿ ಬರುವವರೆಗೂ ಅಂತಿಮ ನಿರ್ವಾಣಕ್ಕಿಂತ ಏನೂ ಕಡಿಮೆಯಲ್ಲದ್ದು ಅತಿ ಸಮೀಪದಲ್ಲಿ ತಮ್ಮೆದುರಿಗೇ ತಮಗಾಗಿ ಕಾಯುತ್ತಿದೆ ಎಂದುಕೊಳ್ಳುತ್ತಿದ್ದರು. ಆದರೆ ಅವರು ಈಗ ಕಣ್ಣುಬಿಟ್ಟಿರುವುದು ಕತ್ತಲೆಯೊಳಗೆ. ಇಂಥ ಕತ್ತಲೆಯಲ್ಲಿ ಒಂದೇ ಹೆಜ್ಜೆ ಅಂತರದಲ್ಲಿ ಏನು ಕಾದಿದೆ ಎಂದೂ ಹೇಳಲುಬಾರದು.

ಅನೇಕ ರೀತಿಯ ಧಾರ್ಮಿಕ ಧ್ಯಾನ ವಿಧಿ ವಿಧಾನಗಳೆಲ್ಲ-

ಎಲ್ಲವೂ ನಿರರ್ಥಕವಾದವು. ಪ್ರತಿಸಲ ಮನಸ್ಸನ್ನು ಕೇಂದ್ರೀಕರಿಸಿದಾಗಲೂ ದೊರೆಸಾನಿಯ ಸುಂದರ ಮುಖ ಅವರ ಕಣ್ಣುಗಳ ಮುಂದೆ ಬಂದು ನಿಲ್ಲುತ್ತಿತ್ತು. ನೀರಧ್ಯಾನ ಕೂಡ ವ್ಯರ್ಥವಾಯಿತು. ಯಾಕೆಂದರೆ ಸರೋವರದ ಅಲೆಗಳ ಆಳದಿಂದ ಅವಳ ಸುಂದರ ಮುಖ ಮೇಲೆದ್ದು ಬರುತ್ತಿತ್ತು.

ಪ್ರೇಮದಲ್ಲಿ ಸಿಲುಕಿದಾಗ ಇವೆಲ್ಲ ಸ್ವಾಭಾವಿಕ. ಮನಸ್ಸನ್ನು ಕೇಂದ್ರೀಕರಿಸುವುದರಿಂದ ಒಳಿತಿಗೆ ಬದಲು ಇನ್ನೂ ಕೆಡುಕಾಗುತ್ತಿದೆ ಎಂಬುದು ಅರಿವಿಗೆ ಬಂದು, ತಮ್ಮ ಚೈತನ್ಯವನ್ನು ಮಂಕುಗೊಳಿಸಲು ಮನಸ್ಸನ್ನು ಕೇಂದ್ರೀಕರಿಸುವುದರ ವಿರುದ್ಧವಾಗಿ ಚದುರಿಸುವ

ಪ್ರಯತ್ನಮಾಡಿದರು. ಅವರಿಗೆ ಒಂದು ಆಶ್ಚರ್ಯ ಕಾದಿತ್ತು: ಮನಸ್ಸನ್ನು ಕೇಂದ್ರೀಕರಿಸುವ ಅಧ್ಯಾತ್ಮ ಸಾಧನೆಯು ಅವರನ್ನು ಹೆಚ್ಚು ಹೆಚ್ಚಾಗಿ ಭ್ರಮಾಲೋಕದೊಳಕ್ಕೆ ಒಯ್ಯತೊಡಗಿತ್ತು. ಈ ಹಂತದಲ್ಲಿ ಮನಸ್ಸನ್ನು ಜಡರುವಂತೆ ಮಾಡುವ ಕ್ರಿಯೆ ಕೈಗೊಂಡರೆ ಈ ಭ್ರಮೆಗಳನ್ನು ಒಪ್ಪಿಕೊಂಡಂತಾಗುತ್ತದಲ್ಲ. ಇಂಥ ಭ್ರಮೆಗಳ ಭಾರಕ್ಕೆ ತಮ್ಮ ಚೇತನ ಹೀಗೆ ಮಣಿಯುತ್ತಿರುವಾಗ ಈ ನಿರರ್ಥಕ ಸಮರ ಸಾರುವುದಕ್ಕೆ ಬದಲಾಗಿ, ದೊರೆಸಾನಿಯ ಚಿತ್ರದ ಮೇಲೆ ಪೂರ್ಣ ಅರಿವಿನಿಂದ ಮನಸ್ಸನ್ನು ಕೇಂದ್ರೀಕರಿಸಿ, ಈ ಭ್ರಮಾಲೋಕದಿಂದ ನೇರವಾಗಿ ಬಿಡುಗಡೆ ಪಡೆಯಬೇಕೆಂದು ನಿರ್ಧರಿಸಿದರು.

ಬುದ್ಧನ ಪ್ರತಿಮೆಯನ್ನು ಮಕುಟ ಮಣಿಗಳಿಂದ ಸಿಂಗರಿಸುವಂತೆ ಈ ಹೆಣ್ಣಿನ ಚಿತ್ರಕ್ಕೆ ತಮ್ಮ ಮನಸ್ಸಿನಲ್ಲೇ ಸಿಂಗಾರಮಾಡುವುದರಲ್ಲಿ ಅರ್ಚಕರಿಗೆ ಹೊಸ ರೀತಿಯ ಸಂತೋಷ ಉಂಟಾಗತೊಡಗಿತು. ಹೀಗೆ ಮಾಡುತ್ತಾ ತಮ್ಮ ಪ್ರೇಮದ ಸಾಕಾರ ರೂಪವನ್ನು ಹೆಚ್ಚು ಹೆಚ್ಚು ಭವ್ಯವಾದ, ದೂರದ ಮತ್ತು ಅಸಾಧ್ಯತೆಯ ಜೀವಿಯನ್ನಾಗಿಸತೊಡಗಿದ್ದರು. ಇದರಿಂದ ಅವರಿಗೆ ಇನ್ನೂ ವಿಶಿಷ್ಟವಾದ ಸಂತೋಷ ಉಂಟಾಗುತ್ತಿತ್ತು. ಯಾಕೆ? ದೊರೆಸಾನಿಯನ್ನು ಒಬ್ಬ ಸಾಧಾರಣವಾದ, ಎಲ್ಲರ ಕೈಗೆ ಸಿಗುವಂತ ಹೆಂಗಸಿನಂತೆ ಚಿತ್ರಿಸಿಕೊಳ್ಳುವುದು ತುಂಬ ಸುಲಭ ಹಾಗೂ ಸ್ವಾಭಾವಿಕವಾಗಿರುತ್ತಿತ್ತು. ಆದರೆ, ಹೀಗೆ ಮಾಡುವುದರಿಂದ ತಮ್ಮ ಮನಸ್ಸಿನಲ್ಲಾದರೂ ಆಕೆಯನ್ನು ಉನ್ನತ ವಿಚಾರಗಳ ಕಡೆ ಹೊರಳಿಸಿಕೊಳ್ಳಬಹುದು.

ಈ ಆಲೋಚನೆಗಳ ನಡುವೆ ಸತ್ಯ ಗೋಚರಿಸತೊಡಗಿತ್ತು. ದೊರೆಸಾನಿಯಲ್ಲಿ ತಾನು ಕಾಣುತ್ತಿರುವುದು ಮಾಂಸ-ಮೂಳೆಗಳ ಜೀವಿಯನ್ನಲ್ಲ ಅಥವಾ ಅವಳು ಮಾಯೆಯೂ ಅಲ್ಲ. ಬದಲಾಗಿ ಅದು ಸೃಷ್ಟಿಯ ಸಾರ ಸರ್ವಸ್ವದ ಸಂಕೇತ. ಇಂಥ ಸಂಕೇತವನ್ನು ತಾವು ಒಂದು ಹೆಣ್ಣಿನ ಚಿತ್ರದಲ್ಲಿ ಕಂಡುಕೊಳ್ಳುತ್ತಿರುವುದು ಅರ್ಚಕರಿಗೆ ವಿಚಿತ್ರವೆನಿಸಿತು. ಇದರ ಕಾರಣ ಹುಡುಕಲು ಬಲು ದೂರ ಹೋಗಬೇಕಿಲ್ಲ. ಸತತ ವೈರಾಗ್ಯ ಸಾಧನೆಯ ಮೂಲಕ ಯಾವುದೇ ವಿಷಯದ ಮೂಲವನ್ನು ತಕ್ಷಣ ಕಂಡುಕೊಳ್ಳುವ ಶಕ್ತಿಯು ಅನೇಕ ವರ್ಷಗಳ ಧ್ಯಾನದ ಪರಿಣಾಮವಾಗಿ ರೂಢಿಗತವಾಗಿ ಬಿಟ್ಟಿತ್ತು. ಪ್ರೇಮದಲ್ಲಿ ಸಿಲುಕಿರುವಾಗ ಕೂಡ ಅವರು ಈ ರೂಢಿಯಿಂದ ಹೊರತಾಗಿರಲಿಲ್ಲ. ಇನ್ನೂರ ಐವತ್ತು ಯೋಜನ ವಿಸ್ತಾರದ ತಾವರೆ ಚಿತ್ರದೊಂದಿಗೆ ಕ್ಯೋಗೊಕೂವಿನ ದೊರೆಸಾನಿ ಒಂದಾಗಿ ಹೋಗಿದ್ದಳು. ನೀರಿನ ಮೇಲಿನ ತಾವರೆ ಪುಷ್ಪವಾಗಿದ್ದವಳು ಬರಬರುತ್ತಾ ಸುಮೇರು ಪರ್ವತಕ್ಕಿಂತ, ಕೊನೆಗೆ ಇಡೀ ವಿಶ್ವಕ್ಕಿಂತ ಬೃಹದಾಕಾರ ರೂಪ ತಾಳಿದಳು.

ಅಸಾಧ್ಯವಾದ ಪ್ರೇಮ ಗಾಢವಾದಷ್ಟೂ ಅರ್ಚಕರು ಬುದ್ಧನಿಂದ ಅಷ್ಟಷ್ಟೂ ದೂರವಾಗುತ್ತಿದ್ದರು. ಈ ಪ್ರೇಮ ಸಾಕ್ಷಾತ್ಕಾರ ಎಷ್ಟು ಅಸಾಧ್ಯವೋ ಜ್ಞಾನೋದಯ ಪ್ರಾಪ್ತಿಯೂ ಅಷ್ಟೇ ಅಸಾಧ್ಯವಾಗತೊಡಗಿತ್ತು. ಈ ಪ್ರೇಮ ನಿರಾಶಾದಾಯಕವೆಂದು ತಿಳಿದಷ್ಟೂ, ಆ ಪ್ರೇಮವನ್ನು ಪೊರೆಯುತ್ತಿದ್ದ ಭ್ರಮೆ ವೃದ್ಧಿಸುತ್ತಿತ್ತು. ಅಪವಿತ್ರ ಆಲೋಚನೆಗಳು ಅವರ ಅಂತರಾಳಕ್ಕಿಳಿದು ಬಿಟ್ಟಿದ್ದವು.

ಮತ್ತೊಮ್ಮೆ ಆಕೆಯ ಮುಖದರ್ಶನ ಮಾಡಬೇಕೆಂಬ ಹಂಬಲ ಅರ್ಚಕರಿಗೆ

ಪ್ರಬಲವಾಯಿತು. ಅಲ್ಲದೆ, ಒಂದು ವೇಳೆ ಆಕೆ ಸಿಕ್ಕರೂ ಕೂಡ, ಬೃಹತ್ ಪದ್ಮದಷ್ಟು ದೊಡ್ಡದಾಗಿರುವ ಅವಳ ಆಕೃತಿಯ ಗುರುತು ಸಿಗದೆ ಹೋಗಬಹುದೆಂಬ ಭಯವೂ ಉಂಟಾಯಿತು. ಹಾಗೇನಾದರೂ ಆದರೆ ಅದರಿಂದ ಒಳಿತೇ ಆಗುವುದು; ಆಗ ಬಹುಶಃ ಜ್ಞಾನೋದಯ ಸಾಧ್ಯವಾಗಬಹುದು. ಈ ಸಾಧ್ಯತೆಯ ವಿಚಾರ ಮಾತ್ರದಿಂದ ಅರ್ಚಕರು ಭಯ ಹಾಗೂ ವಿಸ್ಮಯಕ್ಕೊಳಗಾದರು. ಅರ್ಚಕರು ಏಕಾಂಗಿಯಾಗಿ ಪೊರೆಯುತ್ತಿದ್ದ ಪ್ರೇಮವು ವಿಚಿತ್ರವಾದ ಹಾಗೂ ತನಗೆ ತಾನೇ ಮರುಳು ಮಾಡಿಸುವಂಥ ಆಲೋಚನೆಗಳನ್ನು ಹುಟ್ಟುಹಾಕತೊಡಗಿತು. ಕೊನೆಗೊಮ್ಮೆ ಹೋಗಿ ಅವಳನ್ನು ನೋಡಿಕೊಂಡು ಬರಬೇಕೆಂದು ನಿರ್ಧರಿಸಿದರು; ಈ ನಿರ್ಧಾರ ತೆಗೆದುಕೊಂಡ ನಂತರವೇ ತಮ್ಮ ಶರೀರವನ್ನು ಬಾಧಿಸುತ್ತಿದ್ದ ನೋವಿನಿಂದ ಪಾರಾದ ಅನುಭವವಾಯಿತು. ಪ್ರೇಮಪಾಶದಿಂದ ಬಿಡುಗಡೆ ಸಿಕ್ಕಷ್ಟೇ ಸಮಾಧಾನವಾಯಿತು. ಕೋಲಿನ ಸಹಾಯದಿಂದ ಕುಂಟುತ್ತಾ ಬಂದ ಅರ್ಚಕರು ಕೊನೆಗೂ ರಾಜಧಾನಿ ತಲುಪಿದಾಗ, ಅವರ ಆಯಾಸವೆಲ್ಲ ಮರೆತುಹೋಯಿತು. ಕ್ಯೋಗೊಕೂವಿನಲ್ಲಿದ್ದ ದೊರೆಸಾನಿಯ ಮನೆಯ ಆವರಣದೊಳಕ್ಕೆ ಗುಪ್ತವಾಗಿ ಬಂದುಬಿಟ್ಟರು. ತೋಟದ ಹಿಂದಿದ್ದ ಅವಳ ಮನೆ ಕಡೆ ದೃಷ್ಟಿ ಹಾಯಿಸಿದರು. ಆ ಪರದೆಗಳ ಹಿಂದೆ ತಾನು ಪ್ರೀತಿಸುತ್ತಿರುವ ಹೆಣ್ಣು ಕೂತಿರಬಹುದೆಂದು ಊಹಿಸಿದ್ದರು.

ಈ ವೃದ್ಧ ಅರ್ಚಕರು ಕೋಲಿಗೆ ಆತುಕೊಂಡು ನಿಂತು, ತಮ್ಮ ಮನೆಯನ್ನೇ ದಿಟ್ಟಿಸಿ ನೋಡುತ್ತಿರುವುದು ದೊರೆಸಾನಿ ಮನೆಯ ಜನರಿಗೆ ವಿಚಿತ್ರವೆಂದೇನೂ ಅನಿಸಲಿಲ್ಲ. ರಾಜಧಾನಿಯ ದೊಡ್ಡ ಬಂಗಲೆಗಳ ಮುಂದೆ ವಧುಗಳು, ಭಿಕ್ಷುಕರು, ಭಿಕ್ಷೆಗಾಗಿ ಈ ರೀತಿ ಕಾದು ನಿಲ್ಲುತ್ತಿದ್ದುದು ಸಾಮಾನ್ಯವಾಗಿತ್ತು. ದೊರೆಸಾನಿಯ ಪರಿಚಾರಿಕೆಯರಲ್ಲಿ ಒಬ್ಬಳು ಈ ವಿಷಯವನ್ನು ಒಡತಿಗೆ ತಿಳಿಸಿದಳು. ದೊರೆಸಾನಿ ಪರದೆಯ ಮೂಲಕ ತೋಟದೊಳಕ್ಕೆ ದೃಷ್ಟಿ ಹಾಯಿಸಿದಳು. ಅಲ್ಲಿ ಹಸಿರು ಎಲೆಗುಂಪಿನ ನೆರಳಲ್ಲಿ ಬಣ್ಣಗೆಟ್ಟ ಕಪ್ಪು ಉಡುಗೆ ತೊಟ್ಟ ವೃದ್ಧ ಅರ್ಚಕ ತಲೆ ಬಗ್ಗಿಸಿಕೊಂಡು ನಿಂತಿದ್ದಾರೆ. ಸ್ವಲ್ಪ ಹೊತ್ತು ಆಕೆ ಅವರನ್ನೇ ನೋಡಿದಳು. ಶಿಗಾದ ಸರೋವರದ ಬಳಿ ನೋಡಿದ ಅರ್ಚಕರು ಇವರೇ ಎಂದು ಗುರುತು ಸಿಕ್ಕಾಗ ಅವಳ ವಿವರ್ಣ ಮುಖ ಮತ್ತಷ್ಟು ಬಿಳಿಚಿಕೊಂಡಿತು. ಕೆಲವು ನಿಮಿಷಗಳ ನಂತರ ಆ ಅರ್ಚಕರನ್ನು ಗಮನಕ್ಕೇ ತಂದುಕೊಳ್ಳಬಾರದೆಂದು ಅಪ್ಪಣೆ ಕೊಡಿಸಿದಳು. ಪರಿಚಾರಿಕೆಯರು ವಂದಿಸಿ, ನಿರ್ಗಮಿಸಿದರು.

ಮೊದಲಬಾರಿಗೆ ದೊರೆಸಾನಿಗೆ ಇರುಸುಮುರುಸು ಉಂಟಾಯಿತು. ಅವಳ ಜೀವನದಲ್ಲಿ ಪ್ರಾಪಂಚಿಕ ಬದುಕು ತೊರೆದ ಅನೇಕರನ್ನು ನೋಡಿದ್ದಳು. ಆದರೆ ಪರಲೋಕವನ್ನು ತೊರೆದವರಾರನ್ನೂ ಆಕೆ ಇದುವರೆಗೆ ಕಂಡಿರಲಿಲ್ಲ. ಅದು ಎಷ್ಟು ಭಯಾನಕವಾದದ್ದು, ಅರ್ಚಕರ ಪ್ರೀತಿಯಿಂದ ಸಿಗಬಹುದಾದ ಸುಖಗಳೆಂದು ಅವಳು ಊಹಿಸಿದ್ದೆಲ್ಲ ಈಗ ಮಾಯವಾಯಿತು. ಆತನು ತನಗಾಗಿ ತ್ಯಜಿಸಿದ್ದ ಪರಲೋಕ ತನ್ನ ಪಾಲಿಗೇನೂ ಸಿಗುವುದಿಲ್ಲ ಎಂದೆನಿಸಿತು.

ದೊರೆಸಾನಿ ತನ್ನ ಭವ್ಯ ಉಡುಗೆಗಳನ್ನು ಸುಂದರ ಕೈಕಾಲುಗಳನ್ನು ನೋಡಿಕೊಂಡಳು, ಮತ್ತೆ ತೋಟದಲ್ಲಿ ನಿಂತಿದ್ದ ವೃದ್ಧ ಅರ್ಚಕರ ಕಳಾವಿಹೀನ ಮುಖಚರ್ಯೆಯನ್ನೂ ಅಸ್ತವ್ಯಸ್ತ

ನಿಲುವಂಗಿಯನ್ನು ನೋಡಿದಳು. ತಮ್ಮಿಬ್ಬರ ನಡುವೆ ಯಾವುದೋ ಅವ್ಯಕ್ತ ಸಂಬಂಧವಿದೆ ಎಂದುಕೊಳ್ಳುವುದೂ ಒಂದು ಭಯಂಕರ ಆಲೋಚನೆ ಅನ್ನಿಸಿತು. ತನ್ನ ಊಹೆಗಿಂತ ಇದು ಎಷ್ಟು ಭಿನ್ನವಾಗಿದೆ? ಅರ್ಚಕರು ನರಕದಿಂದ ಈಗತಾನೆ ತೆವಳಿಕೊಂಡು ಹೊರಬಂದವರಂತೆ ಕಾಣುತ್ತಿದ್ದರು. ಪವಿತ್ರಲೋಕದ ಬೆಳಕು ಇವರ ಹಿಂದೆ ಹಿಂದೆ ಬರುತ್ತಿತ್ತು ಎನ್ನುವ ಮಾತಿಗೆ ಆಧಾರವೇ ಇಲ್ಲವಾಗಿ ಅವರ ಸಮ್ಯಕ್ ಸಮಕ್ಷಮ ಮಹತ್ತರವಾಗೇನೂ ಕಾಣುತ್ತಿರಲಿಲ್ಲ. ಅವರ ಅಂತರಾಳದಲ್ಲಿ ಮನೆಮಾಡಿದ್ದ ಪವಿತ್ರಲೋಕದ ತೇಜಸ್ಸನ್ನು ನೆನಪಿಸುವ ಲಕ್ಷಣಗಳೆಲ್ಲವೂ ಸಂಪೂರ್ಣ ಮಾಯವಾಗಿದ್ದವು. ಶಿಗಾ ಸರೋವರದ ಬಳಿ ನಿಂತಿದ್ದ ಮನುಷ್ಯ ಖಂಡಿತವಾಗಿಯೂ ಇವರೇ ಆಗಿದ್ದರು. ಈಗ ಸಂಪೂರ್ಣ ಬೇರೆ ಮನುಷ್ಯರೇ ಆಗಿದ್ದರು.

ಇತ್ತ ದೊರೆಸಾನಿ, ತನ್ನನ್ನು ಆಳವಾಗಿ ತಟ್ಟಿದ ಭಾವನೆಗಳನ್ನು ಹೆಚ್ಚು ಹೆಚ್ಚು ಜೋಪಾನ ಮಾಡತೊಡಗಿದಳು. ಈಗ, ಈ ಅರ್ಚಕರ ಪ್ರೇಮದ ಚಿಹ್ನೆಗಳನ್ನು ಕಂಡಾಗ, ಇಷ್ಟು ವರ್ಷ ತಾನು ಕನಸುತ್ತಿದ್ದ ಸಾರ್ಥಕ ಪ್ರೇಮವು ಈ ರೀತಿ ನಿರ್ವರ್ಣರೂಪದ್ದಾಗಿ ಎದುರಾಯಿತಲ್ಲ ಎಂಬ ಯೋಚನೆಯಿಂದ ಅವಳ ಮನಸ್ಸು ಭಾರವಾಯಿತು.

ಅರ್ಚಕರ ಪ್ರೇಮವು ಈಗ ಅತ್ಯುನ್ನತಮಟ್ಟ ಮುಟ್ಟಿದ್ದರಿಂದ, ಪವಿತ್ರಲೋಕವು ಅರ್ಚಕರನ್ನು ಮತ್ತೆ ಆಕರ್ಷಿಸತೊಡಗಿತ್ತು. ಪವಿತ್ರಲೋಕವನ್ನು ಅವರು ಹಿಂದೆಂದೂ ಇಷ್ಟು ಪರಿಪೂರ್ಣವಾಗಿ ಇಷ್ಟು ಗಾಢವಾಗಿ ತಮ್ಮ ಮನಸ್ಸಿನಲ್ಲಿ ಕಂಡುಕೊಂಡಿರಲಿಲ್ಲ. ಪವಿತ್ರ ಲೋಕದ ಬಗೆಗಿದ್ದ ಕಾತುರತೆ ಈಗ ಕಾಮಾತುರತೆಯಾಗಿ ಮಾರ್ಪಟ್ಟಿತ್ತು. ಹಾಗಾಗಿ ಈಗ ತಮ್ಮ ಪ್ರೇಮವನ್ನು ದೊರೆಸಾನಿ ಮುಂದೆ ಅರುಹುವ ಒಂದು ವಿಧಿಯನ್ನು ಬಿಟ್ಟರೆ ಮತ್ತೇನೂ ಬಾಕಿ ಇರಲಿಲ್ಲ. ಇಷ್ಟು ಮಾಡಿದೆನೆಂದರೆ ತನ್ನನ್ನು ಇಹಲೋಕಕ್ಕೆ ಹಿಡಿದುಕಟ್ಟಿ, ಪವಿತ್ರಲೋಕ ಪ್ರಾಪ್ತಿಯನ್ನು ತಡೆದಿದ್ದ ಅಪವಿತ್ರ ಆಲೋಚನೆಗಳಿಂದ ಒಮ್ಮೆಗೇ ಮುಕ್ತಿ ಪಡೆದಂತಾಗುತ್ತದೆ. ಇದಷ್ಟೇ ಬಾಕಿ ಇರುವುದು.

ಕೋಲಿನ ಆಧಾರದ ಮೇಲೆ ತಮ್ಮ ಕೃಶ ಶರೀರವನ್ನು ಹಾಗೆ ನಿಲ್ಲಿಸಿಕೊಂಡಿರುವುದು ಅಸಾಧ್ಯವಾಗತೊಡಗಿತು. ಮೇ ತಿಂಗಳ ಪ್ರಖರ ಸೂರ್ಯನ ಕಿರಣಗಳು ಎಲೆಗಳ ಮಧ್ಯ ಹಾಯ್ದು ಅವರ ಬೋಳು ತಲೆಯ ಮೇಲೆ ಸುರಿಯುತ್ತಿದ್ದವು. ಹೊತ್ತು ಏರುತ್ತಿದ್ದಂತೆ ಪ್ರಜ್ಞೆ ಸ್ವಲ್ಪ ಸ್ವಲ್ಪವಾಗಿ ಜಾರುತ್ತಿರುವುದು ಅರಿವಿಗೆ ಬಂತು. ಕೋಲಿನ ಸಹಾಯವಿಲ್ಲದಿದ್ದರೆ ಕೆಳಕ್ಕೆ ಬೀಳುತ್ತಿದ್ದರೆಂಬುದರಲ್ಲಿ ಸಂದೇಹವಿಲ್ಲ. ಒಂದು ವೇಳೆ ಆಕೆಗೆ ತನ್ನ ಈ ಬಾಧೆ ಅರ್ಥವಾಗಿ, ನನ್ನನ್ನು ತನ್ನ ಬಳಿಗೆ ಕರೆಸಿಕೊಂಡರೆ? ಆಗ ನಾನು ಬಾಕಿಯಿರುವ ಆ ವಿಧಿಯನ್ನು ಪೂರ್ಣಗೊಳಿಸುತ್ತೇನೆ ಎಂದು ಅರ್ಚಕರು ಕಾದರು. ಹೆಚ್ಚುತ್ತಿದ್ದ ಆಯಾಸಕ್ಕೆ ಕೋಲಿನ ಆಸರೆ ಮಾತ್ರ ಸಿಗುತ್ತಿತ್ತು. ಕೊನೆಗೂ ಸಂಜೆ ಮೋಡಗಳು ಸೂರ್ಯನನ್ನು ಮುಚ್ಚಿದವು. ಸಂಧ್ಯಾಕಾಲವಾದರೂ ದೊರೆಸಾನಿಯಿಂದ ಒಂದು ಮಾತೂ ಬರಲಿಲ್ಲ.

ಅರ್ಚಕರು ತನ್ನ ಮೂಲಕ ತನ್ನಾಚೆಗಿನ ಪವಿತ್ರ ಲೋಕವನ್ನು ದಿಟ್ಟಿಸುತ್ತಿರುವುದು ದೊರೆಸಾನಿಗೆ ಹೇಗೆ ತಿಳಿಯಬೇಕು? ಆಕೆ ಆಗಾಗ ಪರದೆ ಮೂಲಕ ದೃಷ್ಟಿ ಹಾಯಿಸುತ್ತಿದ್ದಳು. ಅವರು ಒಂದಿಷ್ಟೂ ಚಲನೆಯಿಲ್ಲದೆ ನಿಂತಲ್ಲೇ ನಿಂತಿದ್ದರು. ಸಂಜೆಯ ಮಬ್ಬು ತೋಟದೊಳಕ್ಕೆ ನುಗ್ಗುವ ಸಮಯವಾದರೂ ಅವರು ಹಾಗೇ ನಿಂತಿದ್ದರು.

ದೊರೆಸಾನಿಗೆ ಭಯವಾಗತೊಡಗಿತು. ತಾನು ನೋಡುತ್ತಿರುವುದು 'ಸೂತ್ರ'ದಲ್ಲಿ ಓದಿದ 'ನಮೂಚಿಯಾ'ನ ಅವತಾರವಿರಬಹುದೆ? ಹಾಗಿದ್ದರೆ ತಾನು ನರಕಕ್ಕೆ ಬೀಳುವೆನೆಂಬ ಭಯದಿಂದ ನಡುಗಿದಳು. ಅಂಥಾ ಸಭ್ಯ ಅರ್ಚಕರ ಹಾದಿ ತಪ್ಪಿಸಿದ ತಾನು ಮುಂದೆ ಕಾಣುವುದು ಪವಿತ್ರಲೋಕವನ್ನಲ್ಲ, ನರಕವನ್ನೆ. ನರಕದ ಭೀಕರತೆ ಏನೆಂದು ಸಾಮಾನ್ಯವಾಗಿ ಎಲ್ಲರಿಗೂ ಗೊತ್ತಿದೆ. ತಾನು ಕನಸುತ್ತಿದ್ದ ಅಮರ ಪ್ರೇಮವು ಈಗ ಕುಸಿದುಬಿದ್ದಿದೆ. ಇಂಥದಕ್ಕೆ ಗುರಿಯಾಗುವುದನ್ನೇ ನರಕದಂಡನೆ ಅನ್ನುತ್ತಾರೆ. ಅರ್ಚಕರು ಅವಳಾಚೆಗಿನ ಪವಿತ್ರಲೋಕದ ಬಗ್ಗೆ ಕನಸು ಕಾಣುತ್ತಿದ್ದಾಗ ಈಕೆ ಅರ್ಚಕರ ಮೂಲಕ ಪ್ರಾಪ್ತವಾಗುತ್ತದೆಂದುಕೊಂಡ ನರಕದ ಭೀಕರತೆಯನ್ನು ಎದುರುನೋಡುತ್ತಿದ್ದಾಳೆ.

ಆದರೆ ಕ್ಯೋಗೋಕೂವಿನ ಈ ಹಠಮಾರಿ ಹೆಂಗಸು ಹೋರಾಟವಿಲ್ಲದೆ ತನ್ನ ಮನಸ್ಸಿನ ಭಯಗಳಿಗೆ ತಾನೇ ಇಷ್ಟು ಸಲೀಸಾಗಿ ಬಲಿಯಾಗುವವಳಲ್ಲ. ತನ್ನಲ್ಲಿದ್ದ ಎಲ್ಲ ಗಡಸುತನವನ್ನು ಒಗ್ಗೂಡಿಸಿಕೊಂಡಳು. ಈ ಅರ್ಚಕ ಈಗಲೊ ಆಗಲೊ ಬೀಳುವುದಂತು ಖಂಡಿತ. ಈಗಾಗಲೆ ಬಿದ್ದುಹೋಗಿರಬಹುದೆಂದು ಒಮ್ಮೆ ಪರದೆಯಾಸಿ ನೋಡಿದಳು. ಆದರೆ ಆ ಸ್ತಬ್ಧ ಆಕೃತಿ ಅಚಲವಾಗೇ ಇತ್ತು. ಇವಳಿಗೆ ಇರುಸುಮುರುಸಾಯಿತು.

ಕತ್ತಲೆಯಾಯಿತು. ಚಂದ್ರನ ಬೆಳಕಲ್ಲಿ ಅರ್ಚಕರ ಶರೀರ ಸುಣ್ಣದಷ್ಟು ಬೆಳ್ಳಗಿನ ಮೂಳೆಯ ಗುಡ್ಡೆಯಂತೆ ಕಂಡಿತು.

ಹೆದರಿಕೆಯಿಂದ ಆಕೆ ನಿದ್ರಿಸಲಿಲ್ಲ. ಆಗಾಗ ಪರದೆಯಿಂದ ಆಚೆ ನೋಡುವುದನ್ನು ಬಿಟ್ಟು ತೋಟಕ್ಕೆ ಬೆನ್ನುಮಾಡಿ ಕೂತಳು. ಆದರೂ ಅರ್ಚಕರ ಮೊನಚು ದೃಷ್ಟಿ ತನ್ನ ಬೆನ್ನನ್ನು ಚುಚ್ಚುತ್ತಿರುವಂತೆ ಭಾಸವಾಗತೊಡಗಿತು.

ಇದು ಸಾಮಾನ್ಯತರ ಪ್ರೇಮವಲ್ಲವೆಂದುಕೊಂಡಳು. ಇಂಥ ಪ್ರೇಮದಲ್ಲಿ ಸಿಲುಕುವ ಭಯದಿಂದಲೂ, ನರಕದಲ್ಲಿ ಬೀಳುವ ಭಯದಿಂದಲೂ ದೊರೆಸಾನಿ ಹಿಂದೆಂದಿಗಿಂತಲೂ ಹೆಚ್ಚು ದೀನಳಾಗಿ ಪವಿತ್ರಲೋಕ ಪ್ರಾಪ್ತಿಗಾಗಿ ಪ್ರಾರ್ಥಿಸತೊಡಗಿದಳು. ತನ್ನ ಪವಿತ್ರಲೋಕ ಅರ್ಚಕರ ಪವಿತ್ರಲೋಕಕ್ಕಿಂತ ಭಿನ್ನವಾದುದು. ಅವರ ಪ್ರೇಮಕ್ಕೂ ತನ್ನ ಪವಿತ್ರಲೋಕಕ್ಕೂ ಯಾವುದೇ ಸಂಬಂಧವಿಲ್ಲವೆಂದು ಹಾರೈಸುತ್ತಿದ್ದಳು. ಈ ವಿಷಯವನ್ನು ಅರ್ಚಕರಿಗೆ ತಾನು ತಿಳಿಸಿಬಿಟ್ಟರೆ, ತನ್ನ ಪವಿತ್ರಲೋಕ ನುಚ್ಚುನೂರಾಗಬಹುದೆಂದು ಹೆದರಿದಳು.

ಅರ್ಚಕರ ಪ್ರೇಮಕ್ಕೂ ತನಗೂ ಯಾವುದೇ ಸಂಬಂಧವಿಲ್ಲವೆಂದು ತನಗೆ ತಾನೇ ಹೇಳಿಕೊಂಡಳು. ಅದು ಒಮ್ಮುಖವಾದುದು. ಅದರಲ್ಲಿ ತನ್ನ ಭಾವನೆಗಳ ಪಾತ್ರವೇನಿಲ್ಲ. ಆದ್ದರಿಂದ ಪವಿತ್ರಲೋಕ ಪ್ರಾಪ್ತಿಗೆ ತಾನು ಅನರ್ಹಳಾಗುವುದಿಲ್ಲವೆಂದು ಹೇಳಿಕೊಂಡಳು. ಈ ಅರ್ಚಕ ಕುಸಿದುಬಿದ್ದು ಪ್ರಾಣಬಿಟ್ಟರೂ ತಾನು ಮಾತ್ರ ಸುರಕ್ಷಿತಳಾಗಿರುತ್ತೇನೆ ಎಂದು ಹೇಳಿಕೊಂಡಳು. ಆದರೂ ರಾತ್ರಿ ಗಾಢವಾದಂತೆ, ಗಾಳಿ ಹೆಚ್ಚು ತಣ್ಣಗಾದಂತೆ, ಅವಳ ಧೈರ್ಯವೆಲ್ಲ ಉಡುಗತೊಡಗಿತ್ತು.

ತೋಟದಲ್ಲಿ ಅರ್ಚಕರು ಇನ್ನೂ ಹಾಗೇ ನಿಂತಿದ್ದರು. ಚಂದ್ರ ಮೋಡದ ಹಿಂದೆ ಮರೆಯಾದಾಗ ಅವರೊಂದು ವಿಚಿತ್ರವಾದ ಹಳೆಯ ಒಣಗಿದ ಮರದಂತೆ ಕಂಡರು.

ಆಕೆ, ಹೊರಗಿರುವ ಆ ಆಕೃತಿಗೂ ತನಗೂ ಯಾವುದೇ ಸಂಬಂಧವಿಲ್ಲವೆಂದು ತನಗೆ ತಾನೆ ಹೇಳಿಕೊಂಡಳು. ಆದರೂ ಮನಸ್ಸಿನಲ್ಲಿ ತಳಮಳವೆದ್ದಿತ್ತು. ಮಾತುಗಳು ಮನದಾಳದಲ್ಲಿ ಮಾರ್ದನಿಸುತ್ತಿರುವಂತೆ ಭಾಸವಾಯಿತು. ಅಯ್ಯೊ, ಇದು ಹೀಗೇಕಾಯಿತು?

ಒಂದು ಕ್ಷಣ ಅವಳು ತನ್ನ ಬಾಹ್ಯಸೌಂದರ್ಯದ ವಿಷಯವನ್ನು ಸಂಪೂರ್ಣ ಮರೆತಳು; ಪ್ರಯತ್ನಪೂರ್ವಕವಾಗಿ ತಾನೇ ಮರೆತಳು ಎಂದರೆ ಹೆಚ್ಚು ಸಮಂಜಸ.

ಕಡೆಗೂ ಬೆಳಗಿನ ಸೂಚನೆಗಳು ಕತ್ತಲೆಯಾಕಾಶದಲ್ಲಿ ಮೂಡತೊಡಗಿ ಅರ್ಚಕರ ಆಕೃತಿ ಬೆಳಗಿನ ಮಬ್ಬಿನಲ್ಲಿ ಕಾಣತೊಡಗಿತು. ಅವರು ಇನ್ನೂ ಹಾಗೇ ನಿಂತಿದ್ದರು. ದೊರೆಸಾನಿ ಸೋತುಹೋಗಿದ್ದಳು. ಪರಿಚಾರಿಕೆಯನ್ನು ಕರೆದು ಅರ್ಚಕರನ್ನು ಒಳಕ್ಕೆ ಬರಮಾಡಿ, ಒಂದು ಪರದೆ ಹಿಂದೆ ಮೊಳಕಾಲೂರಿ ನಿಂತಿರಬೇಕೆಂದು ಹೇಳಿದಳು.

ಬಳಲಿದ ಶರೀರ ಇನ್ನೇನು ನೆಲಕ್ಕೆ ಬೀಳುವ ಸ್ಥಿತಿಯನ್ನು ತಲುಪಿದ್ದ ಕಾರಣ ಅರ್ಚಕರು ಪ್ರಜ್ಞಾಹೀನರಾಗಿದ್ದರು. ತಾವು ಕಾಯುತ್ತಿರುವುದು ದೊರೆಸಾನಿಗಾಗಿಯೊ ಅಥವಾ ಪವಿತ್ರ ಲೋಕಪ್ರಾಪ್ತಿಗಾಗಿಯೊ ಎಂಬುದನ್ನೇ ಮರೆತಂತಿತ್ತು. ಮನೆಯೊಳಗಿಂದ ತೋಟದ ಕಡೆ, ತನ್ನ ಕಡೆ ಬರುತ್ತಿರುವ ಪರಿಚಾರಿಕೆಯ ಆಕೃತಿಯನ್ನು ಕಂಡ ಮೇಲೂ, ತಾವು ಬಯಸಿದ್ದು ಕಡೆಗೂ ಕೈಗೆ ಸಿಗುವ ಸಮಯ ಬಂದಿದೆ ಎನ್ನುವುದು ಅವರ ಅರಿವಿಗೆ ಬರಲೇ ಇಲ್ಲ.

ಪರಿಚಾರಿಕೆ ಒಡತಿಯ ಆಜ್ಞೆ ಮುಟ್ಟಿಸಿದಳು. ಅವಳ ಮಾತು ಮುಗಿಯುತ್ತಿದ್ದಂತೆ ಅರ್ಚಕರು ಇದ್ದಕಿದ್ದಂತೆ ಅಮಾನುಷ ರೀತಿಯಲ್ಲಿ ಚೀರಿಕೊಂಡು ಬಿಟ್ಟರು. ಕೈ ಹಿಡಿದು ಒಳಕ್ಕೆ ಕರೆದೊಯ್ಯಲೆಂದು ಚಾಚಿದ ಅವಳ ಕೈಯನ್ನು ಸರಿಸಿ, ಅವರು ಮಜಬೂತಾದ ದೃಢ ಹೆಜ್ಜೆಗಳನ್ನಿಡುತ್ತ ಮನೆಯ ಕಡೆ ಧಾವಿಸಿದರು.

ಪರದೆಯ ಆಚೆ ಕಡೆ ಕತ್ತಲಿತ್ತು; ಹೊರಗಿನಿಂದ ಆಕೆಯನ್ನು ಕಾಣುವುದು ಅಸಾಧ್ಯವಾಗಿತ್ತು. ಅರ್ಚಕರು ಮೊಳಕಾಲೂರಿ ಕೈಗಳಿಂದ ಮುಖಮುಚ್ಚಿಕೊಂಡರು. ಅತ್ತರು. ಒಂದು ಮಾತನ್ನೂ ಆಡದೆ ಬಹಳ ಹೊತ್ತು ಹಾಗೇ ಇದ್ದರು. ಶರೀರ ತರತರ ನಡುಗುತ್ತಿತ್ತು.

ಸ್ವಲ್ಪ ಹೊತ್ತಿನ ಮೇಲೆ ಮುಂಜಾವಿನ ಕತ್ತಲಲ್ಲಿ, ಇಳಿಬಿದ್ದಿದ್ದ ಪರದೆಯ ಹಿಂದಿನಿಂದ ಒಂದು ಬಿಳಿ ಕೈ ಹೊರಚಾಚಿತು. ಶಿಗಾ ದೇವಾಲಯದ ಅರ್ಚಕರು ತಮ್ಮ ಕೈಗಳಲ್ಲಿ ಆ ಕೈಯನ್ನು ತೆಗೆದುಕೊಂಡು ತಮ್ಮ ಹಣೆ - ಕೆನ್ನೆಗಳಿಗೆ ಒತ್ತಿಕೊಂಡರು.

ತನ್ನ ಕೈಯನ್ನು ವಿಚಿತ್ರವಾದ ತಣ್ಣನೆ ಕೈಗಳು ಮುಟ್ಟಿದ ಅನುಭವ ದೊರೆಸಾನಿಗಾಯಿತು. ಜೊತೆಗೆ ಬೆಚ್ಚಗಿನ ಒದ್ದೆಯ ಅನುಭವವೂ ಆಯಿತು. ಅವಳ ಕೈ ಮೇಲೆ ಅರ್ಚಕರ ಕಣ್ಣೀರಿನ ಹನಿಮುತ್ತುಗಳು ಬಿದ್ದವು. ಬೆಳಗಿನ ನಿಸ್ತೇಜ ಕಿರಣಗಳು ಪರದೆಯ ಮೂಲಕ ಅವಳ ಬಳಿ ಬಂದಿದ್ದರೂ ಆಕೆಯ ತೀವ್ರ ಶ್ರದ್ಧೆಯು ಅವಳೊಳಗೆ ಅಪೂರ್ವ ಸ್ಫೂರ್ತಿಯನ್ನು ತುಂಬಿತು. ತನ್ನ ಕೈಯನ್ನು ಮುಟ್ಟಿದ ಆ ಅಪರಿಚಿತ ಕೈಗಳು ಬುದ್ಧಗಲ್ಲದೆ ಬೇರೆ ಯಾರಿಗೂ ಸಲ್ಲದವೆಂದು ಆಕೆ ನಂಬಿದಳು.

ಈಗ ಅವಳ ಮನಸ್ಸಿನಲ್ಲೂ ಆ ಮಹಾನ್ ಕಾಣ್ಕೆ ಹೊಸದಾಗಿ ಮೂಡತೊಡಗಿತು. ಪವಿತ್ರಲೋಕದ ಹಸಿರು ಭೂಮಿ, ಸಪ್ತಮಣಿಗಳ ಕೋಟ್ಯಾಂತರ ಗೋಪುರಗಳು, ಸಂಗೀತ

ನಿರತರಾದ ಕಿನ್ನರರು, ಬೆಳ್ಳಿ ಮರಳ ದಂಡೆಯುಳ್ಳ ಚಿನ್ನದ ಕೊಳಗಳು, ಹೊಳೆಯುವ ತಾವರೆಗಳು, ಕಲವಿಂಕ ಪಕ್ಷಿಗಳ ಮಧುರಗಾನ - ಇವೆಲ್ಲ ಹೊಸದಾಗಿ ಜನ್ಮ ತಳೆದವು. ಇಂಥ ಪವಿತ್ರ ನಾಡನ್ನು ತಾನು ಹೊಂದುವುದಾದರೆ - ಇದರಲ್ಲಿ ಈಗಷ್ಟೆ ತನಗೆ ನಂಬಿಕೆ ಬಂದಿದೆ - ಮಹಾ ಅರ್ಚಕರ ಪ್ರೇಮವನ್ನು ತಾನು ಯಾಕೆ ಸ್ವೀಕರಿಸಬಾರದು?

ಬುದ್ಧನ ಕೈಗಳುಳ್ಳ ಆ ಮನುಷ್ಯ ತಮ್ಮ ನಡುವಿದ್ದ ಪರದೆಯನ್ನು ಮೇಲೆತ್ತಲು ಹೇಳಬಹುದೆಂದು ಕಾದಳು. ತಾನು ಆ ಪರದೆಯನ್ನು ಆಗ ತೆಗೆಯುತ್ತೇನೆ. ತನ್ನ ಅಸಾಮಾನ್ಯ ಸೌಂದರ್ಯ ಹೊತ್ತ ಶರೀರ ಆ ದಿನ ಶಿಗಾ ಸರೋವರದ ದಂಡೆಯ ಮೇಲೆ ಆತನಿಗೆ ಕಂಡಂತೆ, ಈಗ ಅವನ ಮುಂದೆ ಕಾಣುತ್ತದೆ. ಆಗ ತಾನು ಅವನನ್ನು ಒಳಗೆ ಬಾರೆಂದು ಕರೆಯುತ್ತೇನೆ.

ದೊರೆಸಾನಿ ಕಾದಳು.

ಆದರೆ ಶಿಗಾ ದೇವಾಲಯದ ಅರ್ಚಕರ ಬಾಯಿಂದ ಒಂದು ಶಬ್ದವೂ ಹೊರಡಲಿಲ್ಲ. ಆಕೆಯಿಂದ ಅವರು ಏನನ್ನೂ ಬೇಡಲಿಲ್ಲ. ಸ್ವಲ್ಪ ಸಮಯದ ನಂತರ ಮುಂಜಾವಿನ ಬೆಳಕು ಪಸರಿಸಹತ್ತಿತು. ಅವರ ಬಡಕಲು ಕೈಗಳು ಸಡಿಲಗೊಂಡು ಅವಳ ಮಂಜಿನಂಥ ಕೈಗಳನ್ನು ಬಿಟ್ಟವು. ಅರ್ಚಕರು ಅಲ್ಲಿಂದ ಹೊರಬಿದ್ದರು. ದೊರೆಸಾನಿಯ ಹೃದಯ ತಣ್ಣಗಾಯಿತು.

ಕೆಲವು ದಿನಗಳ ನಂತರ ಮಹಾ ಅರ್ಚಕರ ಚೇತನವು ಶಿಗಾದ ಅವರ ಮನೆಯಲ್ಲಿ ಮಹಾ ನಿರ್ವಾಣ ಪಡೆದ ವಿಷಯ ಆಸ್ಥಾನಕ್ಕೆ ಮುಟ್ಟಿತು. ಈ ವಿಷಯ ತಿಳಿದ ಕ್ಯೋಗೊಕೂವಿನ ಆ ಮಹಿಳೆ ತನ್ನ ಸುಂದರ ಅಕ್ಷರಗಳಲ್ಲಿ 'ಸೂತ್ರ'ಗಳನ್ನು ಪ್ರತಿಮಾಡತೊಡಗಿದಳು.



ಎಸ್. ಸಂಧ್ಯಾ, C/o. ಅನಿಕೇತನ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ, ಜೆ. ಸಿ. ರಸ್ತೆ, ಬೆಂಗಳೂರು.

# ನೀವೆಲ್ಲಿಯವರೊ

- ಜಂಬಣ್ಣ ಅಮರಚಿಂತ

ನೀವೆಲ್ಲಿಯವರೊ; ನಾವಲ್ಲಿಯವರೆ
ನಡೆದಾಡಿದ ದಾರಿ ಒಂದೇ; ಒಂದೇ ತವರೂರು

೧

ನೆಲಮುಗಿಲು ಜಲಗಳಿಗೆ ಗಡಿಸೀಮೆಗಳಿಲ್ಲ
ಧರ್ಮ ಧುರಂಧರರು ಹಾಕಿದ ಸ್ವಾರ್ಥದ ಗುರುತು
ಗಡಿಸೀಮೆ ತೋಡಿತ್ತು ಎದೆ ಮೇಲೆ ಕಂದಕ
ಕಣ್ಣೀರು ಹರಿಸಿತ್ತು ಮಾನವತೆಯ ಹೂತು

೨

ಬಿಟ್ಟು ಹೋದರು; ಮತ್ಸರಬೀಜ ಬಿತ್ತಿಹೋದರು
ದ್ವೇಷದ ವಳ್ಳುರಿಗೆ ದೇಶಗಳ ತಳ್ಳಿ ಹೋದರು
ತಾಯಿಯ ಎದೆ ಸೀಳಿ ಹೋಳುಮಾಡಿ
ನಡಿರಾತ್ರಿಯಲಿ ಖದೀಮರು ಸರಿದು ಹೋದರು

೩

ನಮ್ಮ ಅಂತರಂಗದ ಮಾತು; ಕೋವಿಗೇನು ಗೊತ್ತು
ಗುಂಡಿನ ಭಾಷೆಯಲಿ ಮಾತಾಡುವುದು ಬಿಟ್ಟು
ನಮ್ಮ ಕಣ್ಣಲ್ಲಿ ಹರಿಯುವುದು ನಿಮ್ಮ ಕಣ್ಣೀರು
ನಿಮ್ಮ ಶ್ವಾಸಕೋಶದಲ್ಲಿ ನಮ್ಮ ನಿಟ್ಟುಸಿರು

೪

ಎರಡು ಕಡೆ ಹರಿಯುವ ರಾವಿನದಿಯ ನೀರು
ಮಾಡಬಹುದೆ ಹೋಳು ನೀವೇ ಹೇಳಿ

ನೆಲ ಅಗೆದು ಎದೆ ಬಗೆದು ನೋಡಿದರೆ ಕಾಣುವುದು
ಅಣು ಅಣುವಿನಲಿ ನಮ್ಮ ಕರಳ ಬಳ್ಳಿ

೫

ಗಡಿಯ ಬೇಲಿಯ ತುಂಬಾ ಹೂ ಅರಳಿನಿಲ್ಲಲಿ
ಹಸಿರು ಹೊಮ್ಮಲಿ ಸಮರ ಕೋವಿ ಹೂತು
ಪ್ರೀತಿಯ ಸಹಬಾಳ್ವೆಯಲಿ ಎಲ್ಲರ ಏಳಿಗೆ
ಸುಖ ಸಮೃದ್ಧಿಯ ವೃದ್ಧಿ ಮನಗಂಡ ಮಾತು



---

ಜಂಬಣ್ಣ ಅಮರಚಿಂತ, ಮೊಕ್ತಲ್ ಪೇಟೆ, ರಾಯಚೂರು - ೫೮೪ ೧೦೨

# ಅಜ್ಜಿ ಸಾಬಿಯ ಹುಲಿಬೇಟೆ

**- ಬಳುಮನೆ ರಾಮದಾಸ್**

ಸ್ವಾತಂತ್ರ್ಯಪೂರ್ವದಲ್ಲಿ ನಮ್ಮೂರಿನಲ್ಲಿ 'ಅಜ್ಜಿ ಸಾಬಿ' ಎಂಬುವವನೊಬ್ಬನಿದ್ದ. ಆತನ ನಿಜವಾದ ಹೆಸರೇನೆಂದು ಯಾರಿಗೂ ತಿಳಿದಿರಲಿಲ್ಲ. ನಾನು ದೊಡ್ಡವನಾದ ಮೇಲೆ ಅವನ ಹೆಸರು ಅಬ್‌ದುಲ್ ಅಜೀಜ್ ಎಂದು ತಿಳಿಯಿತು. ಅನಕ್ಷರಸ್ಥ ಜನಗಳ ಬಾಯಲ್ಲಿ ಅಬ್‌ದುಲ್ ಅಜೀಜ್‌ನು ಅಜ್ಜಿ ಸಾಬಿಯಾಗಿದ್ದ. ಅವನ ನಿಜನಾಮವನ್ನು ಉಚ್ಚರಿಸಲು ಜನಗಳಿಗೆ ಕಷ್ಟವಾಗಿದ್ದುದರಿಂದ ಸಂಕ್ಷಿಪ್ತವಾಗಿ ಅಜ್ಜಿಸಾಬಿ ಎಂದು ಅವನನ್ನು ಕರೆಯುತ್ತಿದ್ದರು. ಅಜ್ಜಿ ಸಾಬಿಯು ಆಗುಂಬೆಯಿಂದ ಶಿವಮೊಗ್ಗದವರೆಗೆ ಬಹಳ ಪ್ರಖ್ಯಾತನಾಗಿದ್ದ. ಅಂದರೆ ಅವನು ಕೃಷಿಕನಾಗಿರಲಿಲ್ಲ. ಸಂಗೀತಗಾರನಾಗಿರಲಿಲ್ಲ. ಸ್ವಾತಂತ್ರ್ಯ ಹೋರಾಟಗಾರನಾಗಿರಲಿಲ್ಲ. ಸಾಹಿತಿಯೂ ಆಗಿರಲಿಲ್ಲ. ಹುಲಿ ಶಿಕಾರಿಯಲ್ಲಿ ಅವನು ನಿಷ್ಣಾತನಾಗಿದ್ದ. ನಮ್ಮ ಹಿರಿಯರು ಹುಲಿಗಳನ್ನು ಮರಸು ಕೂತು ಗುಂಡಿಕ್ಕಿದರೆ ಅಜ್ಜಿ ಸಾಬಿಯು ಹುಲಿಯೊಡನೆ ಬಾಕು ಹಿಡಿದು ಮುಖಾಮುಖಿ ಹೋರಾಟ ಮಾಡಿ ಕೊಲ್ಲುತ್ತಿದ್ದ. ಆತ ಒಂದು ಹುಲಿ ಕೊಂದು ಅದರೊಡನೆ ಸೆಣಸಾಡಿದ ಕಷ್ಟಗಳನ್ನು ಕೇಳಲು ಜನ ಅವನ ಸುತ್ತಮುತ್ತ ಘೇರಾಯಿಸುತ್ತಿದ್ದರು. ಹುಲಿಕೊಂದ ಕತೆಗಳನ್ನು ಅವನು ಬಹಳ ಸ್ವಾರಸ್ಯವಾಗಿ ಹೇಳುತ್ತಿದ್ದ. ಕೇಳುತ್ತಿದ್ದ ಜನ ರೋಮಾಂಚಿತ ರಾಗುತ್ತಿದ್ದರು. ಹುಲಿ ಪರಚಿದ ಗಾಯಗಳು ಅವನ ದೇಹದಲ್ಲಿ ಅಲ್ಲಲ್ಲಿ ಕಲೆಗಳಾಗಿ ಉಳಿದಿದ್ದವು. ಅವನು ಹುಲಿ ಕೊಂದದ್ದಕ್ಕೆ ಅವನಿಗೆ ಸಿಗುತ್ತಿದ್ದ ಭಕ್ಷೀಸು ಕೇವಲ ಎರಡು ರೂಪಾಯಿಗಳು. ಆನಂತರ ಹುಲಿಯನ್ನು ಪೇಟೆಯಲ್ಲಿ ಎತ್ತಿನಗಾಡಿಯಲ್ಲಿ ಮೆರವಣಿಗೆ ಮಾಡಿದಾಗ ದನಕರುಗಳನ್ನು ಸಾಕಿದವರು ಸಾರ್ವಜನಿಕರು ಅವನಿಗೆ ನಾಲ್ಕಾಣೆ ಎಂಟಾಣೆ ಕೊಡುತ್ತಿದ್ದರು. ಅವನು ತನ್ನ ಜೀವನ ಅವಧಿಯಲ್ಲಿ ಹುಲಿಯೊಡನೆ ಮುಖಾಮುಖಿ ಹೊರಾಟ ಮಾಡಿ ಕೊಂದ ಹುಲಿಗಳ ಸಂಖ್ಯೆ ಎಂಟು. ಅವನು ಹುಲಿಯೊಡನೆ ಹೋರಾಟ ಮಾಡಿ ಹುಲಿಗಳನ್ನು ಕೊಲ್ಲುವ ಕ್ರಿಯೆಗೆ ಹಳೆತಲೆಮಾರಿನ ಜನ ಅವನನ್ನು ಹುಲಿಸಾಬಿ ಎಂದೂ ಕರೆಯುತ್ತಿದ್ದರು.

ಜನಜಾನುವಾರುಗಳಿಗೆ ಹುಲಿಗಳಿಂದ ತೊಂದರೆ ಇಲ್ಲದಿದ್ದರೆ ಹಣದಾಸೆಗೆ ಹುಲಿಗಳನ್ನು ಕೊಲ್ಲಲು ಅವನು ಇಷ್ಟಪಡುತ್ತಿರಲಿಲ್ಲ. ಯಾರಾದರೂ ಹಳ್ಳಿಯವರು ತಮ್ಮ ಹಳ್ಳಿಯ ಸಮೀಪದ

ಕಾಡಿನಲ್ಲಿ ಒಂದು ಹುಲಿ ಸಂಚರಿಸುತ್ತಿದೆ ಎಂದು, ಅದನ್ನು ಕೊಲ್ಲಬೇಕೆಂದು ಹೇಳಿದರೆ ಅಜ್ಜಿಸಾಬಿ ರೇಗಿ "ಅದರಿಂದ ಯಾರಿಗೆ ತೊಂದರೆಯಾಗಿದೆ? ನಮ್ಮ ಹಾಗೆ ಬದುಕೋದು ಬ್ಯಾಡವಾ? ಜನಜಾನುವಾರುಗಳಿಗೆ ತೊಂದರೆಯಾದರೆ ಹೇಳಿ, ಆಮೇಲೆ ನೋಡುವಾ? ನಿಮ್ಮ ಗದ್ದೆ ತೋಟಕ್ಕೆ ಕಾಡುಕುರಿ, ಜಿಂಕೆ, ಕಾಡುಕೋಣ, ಕಾಡಂದಿ, ಮುಳ್ಳಂದಿ ನುಗ್ಗಿ ಲೂಟಿ ಮಾಡುವುದಿಲ್ಲವಾ? ಅವನ್ನು ತಿನ್ನಲಿಕ್ಕೆ ಹುಲಿ ಇರೋದಲ್ಲವಾ? ಅವು ಜಾಸ್ತಿಯಾದರೆ ನಿಮ್ಮ ಗದ್ದೆ ತೋಟದ ಕತೆ ಏನು?" ಎಂದು ಬಿಡುತ್ತಿದ್ದ. ತೀವ್ರ ಬಡತನದಲ್ಲಿದ್ದ ಅಜ್ಜಿ ಸಾಬಿಯ ಹೇಳಿಕೆ ನೋಡಿ ಜನ ಆಶ್ಚರ್ಯಪಡುತ್ತಿದ್ದರು.

ಒಮ್ಮೆ ಅಜ್ಜಿಸಾಬಿಯು ನಮ್ಮೂರಿನ ಹೋಟೆಲಿನ ಮುಂಗಟ್ಟಿನಲ್ಲಿ ಕೂತು ಅವರಿವರೊಡನೆ ಹರಟೆ ಹೊಡೆಯುತ್ತಿದ್ದ. ಹಳ್ಳಿಯ ಗೌಡರೊಬ್ಬರು ಬಂದು ಅವನೊಂದಿಗೆ ತಮ್ಮ ಎಮ್ಮೆಯೊಂದನ್ನು ಹುಲಿ ಹಿಡಿದಿದೆ ಎಂದೂ ಅದನ್ನು ಕೊಲ್ಲಬೇಕೆಂದು ಕೇಳಿಕೊಂಡರು. ಗೌಡರ ಎಮ್ಮೆ ಇತ್ತೀಚೆಗೆ ಕರು ಹಾಕಿದ್ದು- ಅದು ಭರ್ಜರಿ ಹಾಲು ಕೊಡುತ್ತಿದ್ದು ಅದನ್ನು ಹುಲಿ ಹಿಡಿದು ಗೌಡರು ಬಹಳ ಆತಂಕಕ್ಕೆ ಒಳಗಾಗಿದ್ದರು. ಅಜ್ಜಸಾಬಿಯು ತಾಳ್ಮೆಯಿಂದ ಎಮ್ಮೆಯನ್ನು ಎಲ್ಲಿ ಹುಲಿ ಹಿಡಿದಿದೆ? ಹಗಲೋ ರಾತ್ರಿಯೋ? ಹುಲಿ ಎಮ್ಮೆಯನ್ನು ಹಿಡಿದ ಸ್ಥಳ ಪುರಾಣವನ್ನು ಕೇಳಿ ತಿಳಿದುಕೊಂಡ. ಹುಲಿ ಎಮ್ಮೆಯನ್ನು ಬಯಲಲ್ಲಿ ಹಗಲು ಹೊತ್ತು ಹಿಡಿದು ಪೊದೆಗಳ ಮರೆಗೆ ಎಳೆದುಕೊಂಡು ಹೋಗಿ ಹಾಕಿತ್ತು. ಸತ್ತ ಎಮ್ಮೆಯನ್ನು ತಿನ್ನಲು ಅದು ರಾತ್ರಿ ಬರಬೇಕಿತ್ತಷ್ಟೆ. ಅಜ್ಜಿ ಸಾಬಿಗೆ ಹುಲಿ ಶಿಕಾರಿ ಮಾಡಲು ಒಪ್ಪಿಗೆ ಏನೋ ಆಯಿತು. ಆದರೆ ಹುಲಿ ಕೊಂದರೆ ಗೌಡರು ಕೊಡುವ ಹಣದ ಬಗ್ಗೆ ತೀರ್ಮಾನವಾಗಬೇಕಿತ್ತಷ್ಟೆ. ಈ ಮೊದಲು ಅವನು ಒಂದು ಹುಲಿ ಕೊಂದರೆ ಎರಡು ರೂಪಾಯಿ ಕೂಲಿ ಕೇಳುತ್ತಿದ್ದ. ಈಗ ಆ ಧರವನ್ನು ನಾಲ್ಕು ರೂಪಾಯಿಗೆ ಏರಿಸಿದ್ದ. ಅಕ್ಕಿ, ಎಣ್ಣೆ, ಬೇಳೆಕಾಳುಗಳ ಬೆಲೆ ಏರಿದ್ದುದರಿಂದ ಅವನೂ ಹುಲಿ ಕೊಲ್ಲುವ ಧರ ಏರಿಸಿದ್ದ. ತನ್ನ ಮನದ ಇಂಗಿತವನ್ನು ಅವನು ಗೌಡರಿಗೆ ಹೇಳಿದ. ಗೌಡರಿಗೆ ದಿಗಿಲಾಯಿತು. ನಾಲ್ಕಾಣೆಯನ್ನೋ ಎಂಟಾಣೆಯನ್ನೋ ಸಾಬಿ ಏರಿಸಿದ್ದರೆ ಒಪ್ಪಿಕೊಳ್ಳುತ್ತಿದ್ದರು. ಏಕೆಂದರೆ ಎರಡು ರೂಪಾಯಿಯಿಂದ ನಾಲ್ಕಕ್ಕೆ ಏರಿಸಿದ್ದರಿಂದ ಅವರಿಗೆ ಉಸಿರು ಕಟ್ಟಿದಂತಾಯಿತು. ಅವರು "ನಿನಗೆ ನಾಲ್ಕು ರೂಪಾಯಿ ಕೊಡೋ ಬದಲು ಹುಲೀನ ಗುಂಡಿನಾಗೆ ಹೊಡೆದು ಕೊಲ್ಲಬಹುದಲ್ಲ?" ಎಂದರು. ಅಜ್ಜಿ ಸಾಬಿ "ಹಾಗೆ ಮಾಡಿ ಸ್ವಾಮಿ. ಗುಂಡಿನಾಗೆ ಹೊಡೆದು ಹುಲಿ ಕೊಲ್ಲೋದು ಮರೇಲಿ ನಿಂತು ಅಲ್ಲವಾ? ನಾನು ಪ್ರಾಣವನ್ನು ಪಣಕ್ಕೆ ಇಟ್ಟು ಹುಲಿ ಹತ್ರ ಕುಸ್ತಿಮಾಡಿ ಕೊಲ್ಲೋದಲ್ಲವಾ? ನಾನೇನಾದರೂ ಸತ್ತುಹೋದರೆ ನನ್ನ ಹೆಂಡತಿ ಮಕ್ಕಳ ಗತಿ ಏನು? ಅವರು ಉಪವಾಸ ಬೀಳೋದಿಲ್ಲವಾ?" ಎಂದ. ಗೌಡರು ಮುಂದಾಲೋಚನೆ ಮಾಡಿ "ಹುಲಿ ಕೊಂದಮೇಲೆ ಹುಲಿ ಮೆರವಣಿಗೆ ಮಾಡುವಾಗ ನಿನಗೆ ಮತ್ತಷ್ಟು ಹಣ ಸಿಗತದಲ್ಲ?" ಎಂದರು. ಸಾಬಿಯು ಗೌಡರಿಗಿಂತ ಮುಂದೆ ಹೋಗಿ ಹೇಳಿದ. "ಈಗ ನೀವು ಇಪ್ಪತ್ತೈದು ರೂಪಾಯಿ ಕೊಡಿ. ಹುಲಿ ಮೆರವಣಿಗೆ ಮಾಡುವಾಗ ಬರುವ ಹಣ ನೀವೆ ತಕ್ಕೊಳ್ಳಿ. ಆಗಬಹುದಾ? ಏನು?" ಗೌಡರು ಚಾಪೆ ಕೆಳಗೆ ನುಸುಳಿದರೆ ಸಾಬಿ ರಂಗೋಲಿ ಕೆಳಗೆ ನುಸುಳಿದ್ದ. ಅವರಿಬ್ಬರ ಸಂಭಾಷಣೆ ಕೇಳಿ ಹೋಟೆಲಲ್ಲಿ ಇದ್ದವರು ಗೊಳ್ಳನೆ ನಕ್ಕರು. ಕೆಲವರ ಮಧ್ಯಸ್ಥಿಕೆಯಿಂದಾಗಿ ಅಜ್ಜಿ ಸಾಬಿ ಹುಲಿ ಕೊಂದರೆ ಮೂರೂವರೆ ರೂಪಾಯಿ

ಗೌಡರು ಕೊಡಬೇಕೆಂದು ತೀರ್ಮಾನವಾಯಿತು. ಕೂಲಿ ಬಗೆ ಹರಿದ ಕೂಡಲೆ ಅಜ್ಜಿ ಸಾಬಿ ಸೊಂಟದಲ್ಲಿ ಸಿಕ್ಕಿಸಿಕೊಂಡಿದ್ದ ಚಾಕುಗಳನ್ನು ಬಿಚ್ಚಿ ಅಂಗಡಿಯ ಮುಂದಿನ ಮೋರಿಯ ಕಲ್ಲಿಗೆ ಉಜ್ಜಿ ಹರಿತ ಮಾಡಿಕೊಂಡು ಗೌಡರೊಂದಿಗೆ ಹೊರಟೇಬಿಟ್ಟ. ಸಾಬಿಯು ಯಾವಾಗಲು ಸೊಂಟದಲ್ಲಿ ಎರಡು ಚಾಕುಗಳನ್ನು ಇಟ್ಟುಕೊಂಡೇ ಇರುತ್ತಿದ್ದ. ಎಮ್ಮೆಯನ್ನು ಹುಲಿ ಹಿಡಿದ ಜಾಗವನ್ನು ಪರಿಶೀಲಿಸಿದ. ನಾಲ್ಕಾರು ಪೊದೆಗಳ ಮಧ್ಯೆ ಹುಲಿ ಎಮ್ಮೆಯನ್ನು ಹಿಡಿದು ಗೋಣು ಮುರಿದು ಹಾಕಿತ್ತು. ಕೆಚ್ಚಲು ಭಾಗವನ್ನು ಮಾತ್ರ ತಿಂದಿತ್ತು. ಮಾಂಸ ತಿನ್ನಲು ಅದು ರಾತ್ರಿ ಬರಬೇಕಿತ್ತಷ್ಟೆ. ಸಾಬಿಯು ಹುಲಿ ರಾತ್ರಿ ಯಾವ ಕಡೆಯಿಂದ ಬರಬಹುದು ತಾನು ಎಲ್ಲಿ ಕೂರಬೇಕೆಂದು ಸ್ಥಳವನ್ನು ಅಮೂಲಾಗ್ರವಾಗಿ ಪರಿಶೀಲಿಸಿದ. ಎಮ್ಮೆ ಬಿದ್ದಿದ್ದ ಹತ್ತಿರವೆ ಒಂದು ದೊಡ್ಡ ಪೊದೆ ಇತ್ತು. ಅದರೊಳಗೆ ಕೂತರೆ ಹುಲಿಗೆ ಅವನು ಕಾಣುವಂತಿರಲಿಲ್ಲ. ಪೊದೆಯ ಎಲೆಗಳು ಅಷ್ಟು ಕಿಕ್ಕಿರಿದು ಬೆಳೆದಿತ್ತು. ಆಗ ಸಮಯ ಮಧ್ಯಾಹ್ನವಾದದ್ದರಿಂದ ಸಾಬಿಯು 'ಸಂಜೆ ಬರತೇನೆ ಬಸ್ನಿ' ಎಂದು ಗೌಡರೊಂದಿಗೆ ಹಿಂದಿರುಗಿದ.

ಹಳಿಗೆ ಬೈಗು ಬೈಗಾಗುವ ಹೊತ್ತಿಗೆ ಸಾಬಿಯು ಗೌಡರನ್ನು ಮಾತನಾಡಿಸಿಕೊಂಡು ಹುಲಿ ಎಮ್ಮೆ ಹಿಡಿದು ಹಾಕಿದ ಜಾಗಕ್ಕೆ ಹಾಜರಾದ. ಬಿಸಿಲಿಳಿದು ಕಾಡು ಕತ್ತಲೆಯಲ್ಲಿ ಕರಗ ಹತ್ತಿತ್ತು. ಹಕ್ಕಿಗಳು ಕತ್ತಲಾಗುವುದನ್ನು ನೋಡಿ ಒಂದು ದಿಕ್ಕಿನಿಂದ ಮತ್ತೊಂದು ದಿಕ್ಕಿಗೆ ಹಾರಿ ಹೋಗುತ್ತಿದ್ದವು. ಶಿಕಾರಿಯಲ್ಲಿ ಬೀಡಿ, ಸಿಗರೇಟು, ನಶ್ಯ ಸೇದುವುದು ನಿಷಿದ್ಧವಾದ್ದರಿಂದ ಸಾಬಿ ಮೊದಲೇ ಒಂದು ಬೀಡಿ ಸೇದಿಕೊಂಡ- ಅನಂತರ ಸೇದುವುದಕ್ಕಾಗುವುದಿಲ್ಲ ಎಂದು. ಬೀಡಿ, ಸಿಗರೇಟು, ನಶ್ಯದ ವಾಸನೆಗೆ ಪ್ರಾಣಿಗಳು ವಾಸನೆ ಬಂದತ್ತ ಸುಳಿಯುವುದಿಲ್ಲ. ಹುಲಿ ಬರುವುದು ಏನಿದ್ದರೂ ಮಧ್ಯರಾತ್ರಿ ಹೊತ್ತಿಗೆ ಎಂದು ಚಾಕುಗಳನ್ನು ಬಿಚ್ಚಿ ಇಟ್ಟುಕೊಂಡ. ಜನ ಸಂಚಾರವಿಲ್ಲದ ಕಾಡಿನಲ್ಲಿ ಹುಲಿಗಳು ಹಿಡಿದು ಹಾಕಿದ ಕೊಳ್ಳೆಯನ್ನು ತಿನ್ನಲು ಬೇಗನೆ ಬರುವುದೂ ಇದೆ. ನಿಶ್ಶಬ್ದ ಕಾಡಿನಲ್ಲಿ ಹುಲಿರಾಯನಿಗಾಗಿ ಸಾಬಿ ಕಾಯುತ್ತ ಕೂತ. ಬೇಟೆಗಾಗಿ ಕಾಯುತ್ತ ಕೂರುವುದು ಬೇಸರದ ಕೆಲಸ. ಪ್ರಾಣಿಗಳು ಬಂದರೆ ಬಂದವು. ಇಲ್ಲವಾದಲ್ಲಿ ಇಲ್ಲ. ಎಷ್ಟೋಸಾರಿ ಬೇಟೆಯಾಗದೆ ಬೆಳಗ್ಗೆ ಬಂದೂಕು ಹಿಡಿದು ಮನೆಗೆ ಬೇಟೆಗಾರ ವಾಪಸ್ಸಾಗುವ ಪ್ರಸಂಗಗಳೂ ಇವೆ. ಅಜ್ಜಿಸಾಬಿ ಬೇಟೆಯಾಗದೆ ವಾಪಸಾಗುವ ಸಂದರ್ಭ ಇಲ್ಲ. ಹುಲಿ ಕೊಂಚ ತಡವಾದರು ಬರುವುದು ಖಚಿತವಾಗಿತ್ತು. ತಾನೆ ಹಿಡಿದು ಹಾಕಿದ ಕೊಳ್ಳೆಯನ್ನು ತಿನ್ನಲಿಕ್ಕೆ ಅದು ಬರಲೇಬೇಕಿತ್ತು. ಸಾಬಿಯು ಇತರೆ ಬೇಟೆಗಾರರಂತೆ ಬೇಟೆಯನ್ನು ಹುಡುಕಿಕೊಂಡು ಹೋಗಬೇಕಾಗಿದ್ದಿರಲಿಲ್ಲ. ಕತ್ತಲು ಮಾಯವಾಗಿ ಚಂದ್ರನ ಬೆಳಕು ಮೂಡಿತು. ಗಿಡಮರಗಳು ಎದ್ದು ಕಂಡವು. ಯಾವುದೋ ಹಕ್ಕಿ ಭಯವನ್ನು ಹುಟ್ಟಿಸುವಂತೆ ಕೂಗುತ್ತಿತ್ತು. ಸಾಬಿಗೆ ಅದೆಲ್ಲವೂ ಮಾಮೂಲಿ ಆದದ್ದರಿಂದ ನಿರ್ಭೀತಿಯಿಂದ ಕೂತಿದ್ದ. ಆಕಾಶದಲ್ಲಿ ಮೋಡಗಳು ಚಂದ್ರನ ಮೇಲೆ ಹಾದುಹೋಗಿ ಒಮ್ಮೊಮ್ಮೆ ಕತ್ತಲೆಯಾಗಿ ಮತ್ತೆ ಬೆಳಕು ಬರುತ್ತಿತ್ತು. ಸಮಯ ನಿಧಾನವಾಗಿ ಸರಿಯುತ್ತಿತ್ತು. ಸಾಬಿಯು ಕಾದೇ ಕಾದ. ಕಾಡು ಮೌನವಾಗಿತ್ತು. ಹುಲಿ ಬರುವ ಚಿಹ್ನೆ ಕಾಣಲಿಲ್ಲ. ಇನ್ನು ಹುಲಿ ಬೇಟೆಯನ್ನು ಬಿಟ್ಟು ಬೇರೇನಾದರೂ ಉದ್ಯೋಗ ಮಾಡಬೇಕೆನ್ನುವಷ್ಟು ಬೇಸರವಾಯಿತು. ಅಷ್ಟರಲ್ಲಿ ಏನೋ ಕಾಡಿನ ಒಣ ಎಲೆಗಳ ಮೇಲೆ ಸರಸರ ಸದ್ದು ಮಾಡುತ್ತ ಬರುವುದು ಕೇಳಿತು. ಸಾಬಿ ಮೈ

ಎಲ್ಲ ಕಣ್ಣಾಗಿ ಉಸಿರು ಬಿಗಿ ಹಿಡಿದು ಹುಲಿರಾಯನ ಆಗಮನಕ್ಕಾಗಿ ಕಾದ. ಕೂತಲ್ಲೆ ಎಲೆಗಳ ಮರೆಯಲ್ಲಿ ಕತ್ತು ಬಗ್ಗಿಸಿ ನೋಡಿದ. ಬಂದದ್ದು ಹುಲಿಯಲ್ಲ ನರಿ. ನರಿಯೊಂದು ಬಂದು ಸತ್ತ ಎಮ್ಮೆಯನ್ನು ದೂರದಲ್ಲಿ ನಿಂತು ಸಂಶಯಾತ್ಮಕವಾಗಿ ನೋಡಿ ಗಾಳಿಯಲ್ಲಿ ವಾಸನೆಯನ್ನು ಗ್ರಹಿಸಿ ಎಮ್ಮೆ ಸತ್ತಿದೆ ಎಂದು ಖಾತ್ರಿ ಮಾಡಿಕೊಂಡು ಹತ್ತಿರ ಬಂದು ಎಮ್ಮೆಯನ್ನು ಅಲ್ಲಿ ಇಲ್ಲಿ ಮೂಸಿ ಹುಲಿ ತಿಂದುಬಿಟ್ಟ ಕೆಚ್ಚಲು ಭಾಗಕ್ಕೆ ಬಾಯಿ ಹಾಕಿತು. ನಿಧಾನವಾಗಿ ಚಪಚಪ ಸದ್ದು ಮಾಡುತ್ತ ಭೋಜನವನ್ನು ಶುರುಮಾಡಿತು. ಬಾರಿಬಾರಿಗು ಏನಾದರೂ ಅಪಾಯವಿದೆಯೆ ಎಂದು ಸುತ್ತಮುತ್ತ ನೋಡಹತ್ತಿತು. ಹುಲಿಯೊ ಚಿರತೆಯೊ ಪಾಲಿಗಾಗಿ ಬರಬಹುದೆಂಬ ಆತಂಕ ಅದಕ್ಕೆ. ಏಕೆಂದರೆ ಆಗಲೆ ಎಮ್ಮೆಯ ಕೆಚ್ಚಲನ್ನು ಯಾವುದೋ ಪ್ರಾಣಿ ತಿಂದಿರಬೇಕಾದರೆ ಯಾವುದೋ ಪ್ರಾಣಿಗೆ ಎಮ್ಮೆ ಬಲಿಯಾಗಿರಬೇಕೆಂದು ಅದರ ಊಹೆ. ಅತ್ತಿತ್ತ ನೋಡುತ್ತ ಎಮ್ಮೆಯ ಮಾಂಸವನ್ನು ಹರಿದು ತಿನ್ನುವಾಗ ಏನೋ ಅಪಾಯ ಕಂಡು ನರಿ ಗುಡಕ್ಕನೆ ಓಟ ಕಿತ್ತಿತ್ತು.

ನರಿ ಇದ್ದಕ್ಕಿದ್ದಂತೆ ಓಡಿದ್ದು ಯಾಕೆ? ಹುಲಿ ಬಂದಿತೆ ಎಂದು ಸಾಬಿ ಎಲೆಗಳ ಮರೆಯಲ್ಲಿ ನೋಡಿದ. ಭರ್ಜರಿ ಪಟ್ಟೆ ಹುಲಿಯೊಂದು ರಭಸದಿಂದ ಓಡಿಬಂದು ನರಿಯನ್ನು ಒಂದಿಷ್ಟುದೂರ ಓಡಿಸಿಕೊಂಡು ಹೋಗಿ ನರಿಯನ್ನು ದೂರ ಅಟ್ಟಿ ರಾಜಠೀವಿಯಿಂದ ಕೊಳ್ಳೆಯ ಸಮೀಪಕ್ಕೆ ನಿಧಾನವಾಗಿ ಬಂದಿತು. ಬೆಳೆದ ಹುಲಿಯ ಭಯಂಕರ ಆಕೃತಿಯನ್ನು ತೀರಾ ಹತ್ತಿರದಿಂದ ನೋಡಿ ಸಾಬಿಗೆ ನಡುಕ ಹುಟ್ಟಿತು. ಹಿಂದೆ ಅವನು ಕೊಂದ ಹುಲಿಗಳು ಅಷ್ಟು ದೊಡ್ಡದಾಗಿರಲಿಲ್ಲ. ಅವನ ಭಯ ಕೊಂಚ ಹೊತ್ತು ಅವನನ್ನು ಬಾದಿಸಿದ್ದಷ್ಟೇ. ಅನೇಕ ಹುಲಿಗಳನ್ನು ಬಾಕು ಬಿಚ್ಚಿ ಬಾಯಿಗೆ ಇರಿದು ಕೊಂದವನಿಗೆ ಈ ಹುಲಿ ಯಾವ ಲೆಕ್ಕ ಎಂದೆನ್ನಿಸಿ ಹುಲಿ ಕೊಳ್ಳೆಯನ್ನು ತಿನ್ನಲಿಕ್ಕೆ ಶುರು ಮಾಡುವುದನ್ನು ಕಾದ. ಹುಲಿ ತಕ್ಷಣ ಕೊಳ್ಳೆಯನ್ನು ಮುಟ್ಟಲಿಲ್ಲ. ಕೊಳ್ಳೆಯ ಹತ್ತಿರ ಕೂತು ರಾಜ ಗಾಂಭೀರ್ಯದಿಂದ ಸುತ್ತಮುತ್ತ ನೋಡ ಹತ್ತಿತು. ನರಿಗೆ ಹುಲಿ ಚಿರತೆಗಳ ಭಯ. ಹುಲಿಗೆ ಮನುಷ್ಯನ ಭಯ. ದುಷ್ಟ ಮನುಷ್ಯ ಮರೆಯಲ್ಲಿ ಕೂತು ಗುಂಡು ಹಾರಿಸುವನೇನೊ ಎಂದು. ಅದು ಗುಂಡೇಟು ತಿಂದ ಹುಲಿಗಳ ಅನುಭವ. ಹುಲಿ ಬಹಳ ಹೊತ್ತು ಕಾದು ನೋಡಿತು. ಏನೂ ಅಪಾಯವಿಲ್ಲ ಅನ್ನಿಸಿದಾಗ ಕೊಳ್ಳೆಯನ್ನು ಸಮೀಪಿಸಿ ಉದ್ದಕ್ಕೆ ಮಲಗಿಕೊಂಡು ನಿರ್ಭೀತಿಯಿಂದ ನೆನ್ನೆ ತಿಂದು ಬಿಟ್ಟ ಕಡೆಗೆ ಬಾಯಿ ಹಾಕಿ ಮಾಂಸವನ್ನು ಹರಿದು ತಿನ್ನ ಹತ್ತಿತು. ಚಪಚಪ ಸದ್ದು ಸಾಬಿಯ ಕಿವಿ ನಿಮಿರಿಸಿತು. ಹುಲಿ ಅವನ ಎದುರಿಗೆ ಮುಖಮಾಡಿ ಮಲಗಿತ್ತು. ಎಮ್ಮೆಯ ಬೆನ್ನು ಅವನಿಗೆ ಅಡ್ಡವಾಗಿದ್ದು ಹುಲಿಯ ಮುಖ ಕಾಣುತ್ತಿರಲಿಲ್ಲ. ಅವನು ನಿಧಾನವಾಗಿ ಪೊದೆಗಳು ಸದ್ದು ಮಾಡದಂತೆ ಎದ್ದ. ಹುಲಿ ಮಾಂಸ ಭಕ್ಷಿಸುತ್ತ ಒಮ್ಮೊಮ್ಮೆ ಎಡಕ್ಕೆ ಬಲಕ್ಕೆ ನೋಡುತ್ತಲಿತ್ತು. ಸಾಬಿ ಮುಖಾಮುಖಿ ಹೋರಾಟಕ್ಕೆ ಸಿದ್ಧನಾದ. ಎರಡೂ ಕೈಯಲ್ಲಿ ಎರಡು ಬಾಕು ಹಿಡಿದು ಪೊದೆಯಿಂದ ಹೊರಬಂದ. ಹುಲಿ ನಿರಾತಂಕವಾಗಿ ಮಾಂಸ ಭಕ್ಷಿಸುತ್ತಿತ್ತು. ಸಾಬಿ ಎರಡು ಹೆಜ್ಜೆ ಮುಂದೆ ಬಂದು "ಚಿ ಚಿ" ಎಂದು ಹುಲಿಯ ಗಮನ ಸೆಳೆದ. ಏನೋ ಸದ್ದಾದ್ದು ಕೇಳಿ ಹುಲಿ ನೆಟ್ಟನೆ ತಲೆ ಎತ್ತಿ ನೋಡಿತು. ಎದುರಿಗೆ ಮನುಷ್ಯ ನಿಂತಿದ್ದ. ಮಲಗಿದಲ್ಲೆ ಅದು ಗುರುಗುಟ್ಟಿತು. ಅವನ ಮೇಲೆ ಎರಗಲು ಮಲಗಿದ ದೇಹವನ್ನು ಚಿಕ್ಕದು ಮಾಡಿ ಕೂತಿತು.

ಸಾಬಿ ಇನ್ನೂ ಒಂದು ಹೆಜ್ಜೆ ಮುಂದೆ ಬಂದ. ಚಾಕು ಹಿಡಿದ ಕೈ ಎತ್ತಿದ. ಹುಲಿ ತಡ ಮಾಡಲಿಲ್ಲ. ಕಾಡೆಲ್ಲಾ ನಡುಗುವಂತೆ ಗರ್ಜಿಸಿ ಅವನ ಮೇಲೆ ಹಾರಿತು. ಸಾಬಿ ಬಲಗೈ ಚಾಕುವನ್ನು ಹುಲಿಯ ಬಾಯಿಗೆ ಇರಿದ. ಗುರಿ ತಪ್ಪಿ ಬಾಯಿಗೆ ಬೀಳದೆ ಕಣ್ಣಿನ ಭಾಗದಲ್ಲಿ ಸವರಿಕೊಂಡು ಹೋಯಿತು. ಮತ್ತೊಮ್ಮೆ ಕೈ ಎತ್ತುವುದರೊಳಗೆ ಹುಲಿ ಅವನ ಭುಜದ ಮೇಲೆ ಮುಂದಿನ ಕಾಲುಗಳನ್ನಿಟ್ಟು ಅವನ ಗಂಟಲು ಹರಿದಿತ್ತು. ಸಾಬಿ ನಿತ್ರಾಣನಾಗಿ ಕೆಳಕ್ಕೆ ಬಿದ್ದ. ಮತ್ತೆ ಅವನು ಕೈ ಎತ್ತದಂತೆ ಹುಲಿ ಅವನ ಮೇಲೆ ಭೀಕರವಾಗಿ ದಾಳಿ ಮಾಡಿ ಹೊರಟುಹೋಯಿತು.

ಬೆಳಗ್ಗೆ ಗೌಡರು, ಹಳ್ಳಿಯವರು 'ಹುಲಿಸಾಬಿ' ಬಾರದಿದ್ದುದನ್ನು ನೋಡಿ ಅವನು ಹುಲಿಕೊಂದನೆ ಅಥವಾ ಹೆದರಿಕೊಂಡು ಪೇಟೆಗೆ ಹೋದನೆ ಎಂದು ನೋಡಲು ಎಮ್ಮೆ ಸತ್ತ ಸ್ಥಳಕ್ಕೆ ಹೋದರು. ಅಲ್ಲಿನ ದೃಶ್ಯ ಭಯಾನಕವಾಗಿತ್ತು. ಎಮ್ಮೆ, ಸಾಬಿ ಅಕ್ಕಪಕ್ಕದಲ್ಲಿ ಮಲಗಿದ್ದರು. ಸಾಬಿಯ ದೇಹ ಚಿಂದಿಯಾಗಿ ರಕ್ತ ಅಲ್ಲೆಲ್ಲ ಹರಡಿಕೊಂಡಿತ್ತು.



# ‘ಕೆರೆಗೆಹಾರ’ವೆಂಬ ಜನಪದ ಕಥನ ಗೀತೆಯಲ್ಲಿ ದಲಿತ ಮೌಲ್ಯದ ಹೈಜಾಕೀಕರಣ

- ಶಿವರಾಮಯ್ಯ

Hijack ಎನ್ನುವ ಶಬ್ದ ಪಶ್ಚಿಮದಿಂದ ಬಂದದ್ದು. ಅಲ್ಲಿ ಸಾರಾಯಿ ವ್ಯಾಪಾರಕ್ಕೆ ಸಂಬಂಧಿಸಿದಂತೆ ತೆರಿಗೆ ಕೊಡದೆ ಕಳ್ಳತನದಿಂದ ಸಾರಾಯಿ ಸಾಗಿಸುವವರನ್ನು ಸುಲಿಗೆ ಮಾಡಿ ಅದರಿಂದ ಲಾಭಗಳಿಸುವುದು ಎಂದಾಗುತ್ತದೆ. ಇಂಥ ದಂಧೆಯಲ್ಲಿ ತೊಡಗಿರುವವನನ್ನು Hijacker ಎಂದು ಕರೆಯಲಾಗುತ್ತಿತ್ತು. ಆದರೆ ಹೈಜಾಕ್ ಎನ್ನುವ ಈ ಶಬ್ದ ಆಧುನಿಕ ಪರಿಭಾಷೆಯಲ್ಲಿ ವಿಮಾನ ಮುಂತಾದವುಗಳನ್ನು ಅಪಹರಿಸುವುದಕ್ಕೂ ಬಳಕೆಯಾಗುತ್ತಿದೆ. ವಿಮಾನ ಅಪಹರಣಕಾರ (Hijacker) ತನ್ನ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಈ ತಂತ್ರೋಪಾಯವನ್ನು ಬಹು ಸುಲಭವೆಂಬಂತೆ ಪ್ರಯೋಗಿಸುವ ಕಾಲವಿದು. ಇದು ಎಲ್ಲರಿಗೂ ತಿಳಿದ ವಿಚಾರವಾದ್ದರಿಂದ ನಿದರ್ಶನ ಪೂರ್ವಕವಾಗಿ ವಿಸ್ತರಿಸಬೇಕಾದ ಅಗತ್ಯ ಕಾಣವುದಿಲ್ಲ.

ಸಾಹಿತ್ಯ ಹಾಗೂ ಸಾಂಸ್ಕೃತಿಕ ಲೋಕಕ್ಕೂ ಈ ಹೈಜಾಕಿಂಗ್ ಪ್ರಕ್ರಿಯೆಯನ್ನು ಅನ್ವಯಿಸಿ ನೋಡುವುದಾದರೆ ವಿಸ್ಮಯಭರಿತ ಫಲಿತಗಳು ಎದುರಾಗುತ್ತವೆ- ಹೈಜಾಕಿಂಗ್ ನೇಚರ್ ಮಾನವ ಕುಲಕ್ಕೆ ಹೊಸದೇನಲ್ಲ. ಈ ಪ್ರವೃತ್ತಿ ಪ್ರಾಚೀನ ಕಾಲದಿಂದಲೂ ಇವನಲ್ಲಿದ್ದದ್ದೇ. ಇಂಡಿಯಾದ ಪೌರಾಣಿಕ ಪ್ರಪಂಚವನ್ನು ಹೊಕ್ಕು ನೋಡಿದರೆ ಈ ಹೈಜಾಕೀಕರಣಕ್ಕೆ ವಿಫುಲವಾದ ಸಾಮಗ್ರಿ ದೊರೆಯುತ್ತದೆ. ಉದಾ,ಗೆ: ಐತಿಹಾಸಿಕ ವ್ಯಕ್ತಿಯಾದ ಗೌತಮ ಬುದ್ಧನನ್ನು ವೈದಿಕ ಪುರಾಣಗಳು ಹೈಜಾಕ್ ಮಾಡಿ ತಮ್ಮ ದಶಾವತಾರ ಕಲ್ಪನೆಯಲ್ಲಿ ಒಂದು ಅವತಾರವೆಂದು ಸಾರಿದ್ದು ಸಾಕು. ಇದರಿಂದ ವೈದಿಕ ಧರ್ಮಕ್ಕೆ ಆದ ಲಾಭ ಅಷ್ಟಿಷ್ಟಲ್ಲ. ಬೌದ್ಧರನ್ನು ಈ ನೆಲದಿಂದ ಹೊರಹಾಕಲು ಹಾಗೂ ಖಿಲವಾಗುತ್ತಿದ್ದ ತಮ್ಮ ಯಜ್ಞಕಾಂಡದ ವೈದಿಕ ಧರ್ಮವನ್ನು ಪುನರುತ್ಥಾನಗೊಳಿಸಲು ಬಹು ಸುಲಭವಾಗಿಬಿಟ್ಟಿತು. ಒಂದು ದೃಷ್ಟಿಯಿಂದ ನೋಡಿದರೆ ಜಗತ್ ಕಾವ್ಯಗಳ ಮುನ್ನಡೆಗೂ ಈ ಹೈಜಾಕಿಂಗ್ ಪ್ರವೃತ್ತಿಯೇ ಪ್ರಧಾನ ಕಾರಣವೆನ್ನಬೇಕಾಗುತ್ತದೆ. ರಾಮಾಯಣದ ಸೀತಾಪಹರಣ, ಹೋಮರನ ಕಾವ್ಯದ ಹೆಲೆನ್ ಅಪಹರಣ ಮುಂತಾದ

ಪ್ರಸಂಗಗಳನ್ನು ಇಲ್ಲಿ ನಿದರ್ಶನಗಳಾಗಿ ಗಮನಿಸಬಹುದು. ಒಟ್ಟಾರೆ ವಸ್ತು ವ್ಯಕ್ತಿಗಳ ಅಪಹರಣ ಕ್ರಿಯೆಯಿಂದ ಗಳಿಸಿಕೊಳ್ಳುವ ಲಾಭ ಭೌತಿಕಮಟ್ಟದ್ದಾಗಿದ್ದರೆ, ಒಂದು ಜನಾಂಗದ ಉತ್ತಮ ಮೌಲ್ಯವನ್ನೇ ಅಪಹರಿಸುವ ಮೂಲಕ ತನ್ನ ಸಾಂಸ್ಕೃತಿಕ ಮೌಲ್ಯವನ್ನು ಮೇಲ್ಮೆಗೆತ್ತಿಕೊಳ್ಳುವ ಪ್ರವೃತ್ತಿಯಾಗಿ ಕೆಲಸ ಮಾಡುತ್ತದೆ. ಇದಕ್ಕೆ ಒಂದು ಉತ್ತಮ ನಿದರ್ಶನ 'ಕೆರೆಗೆ ಹಾರ'ವೆಂಬ ಕನ್ನಡದ ಸುಪ್ರಸಿದ್ಧ ಜನಪದ ಗೀತೆಯ ಸಂದರ್ಭದಲ್ಲಿ ನಡೆದಿರುವ ದಲಿತ ಮೌಲ್ಯದ ಹೈಜಾಕೀಕರಣ. 'ಪ್ರಜಾವಾಣಿ'ಯ ಸಾಪ್ತಾಹಿಕ ಪುರವಣಿ (೨೩.೬.೨೦೦೨)ಯಲ್ಲಿ ಪ್ರಕಟವಾಗಿರುವ 'ಬಲಿಯಾದಳು ಬಂದಮ್ಮ' ಎಂಬ ಕಥಾನಕವನ್ನು ಓದಿಯಾದ ಮೇಲೆ 'ಕೆರೆಗೆ ಹಾರ' ಕಥನ ಗೀತೆಯಲ್ಲಿ ಬಂದಮ್ಮನ ಕಥೆಯ ತ್ಯಾಗ, ಬಲಿದಾನದ ಮೌಲ್ಯವು ಅಲ್ಲಿಂದಿಲ್ಲಿಗೆ ಹೈಜಾಕ್ ಆದಂತೆ ಕಂಡುಬರುತ್ತದೆ ಎಂದರೆ ಯಾರೂ ಆಶ್ಚರ್ಯ ಪಡಬೇಕಾಗಿಲ್ಲ. ಇದನ್ನು ಎಸ್.ಆರ್. ಗುರುನಾಥ್ ಅವರ ಲೇಖನ ಹಾಗೂ ಲಕ್ಷ್ಮಣ ತೆಲಗಾವಿಯವರು ಸಂಗ್ರಹಿಸಿರುವ ಪ್ರಜಾವಾಣಿಯ ಚಿತ್ರಗಳು ಸಾದರಪಡಿಸುತ್ತವೆ.

ಕನ್ನಡ ಜನಪದ ಸಾಹಿತ್ಯದಲ್ಲಿ 'ಕೆರೆಗೆಹಾರ' ಬಹಳಷ್ಟು ಜನ ಸಾಹಿತ್ಯ ಹಾಗೂ ಸಂಸ್ಕೃತಿಯಲ್ಲಿ ಆಸಕ್ತಿ ಉಳ್ಳವರಿಗೆ ಅತ್ಯಂತ ಮೆಚ್ಚುಗೆಯಾದ ಒಂದು ಕಥಾನಕ ಎಂಬುದರ ಬಗ್ಗೆ ಈವರೆಗೆ ಎರಡು ಮಾತಿರಲಿಲ್ಲ. ಮೊಟ್ಟಮೊದಲಿಗೆ ಬೆಟಗೇರಿ ಕೃಷ್ಣಶರ್ಮರು ಸಂಗ್ರಹಿಸಿದ ಈ ಕಥನ ಗೀತೆ ಬಿ.ಎಂ. ಶ್ರೀಕಂಠಯ್ಯನವರ ಸಂಪಾದಕತ್ವದ 'ಕನ್ನಡ ಬಾವುಟ' (೧೯೪೦)ದಲ್ಲಿ ಪ್ರಕಟಗೊಂಡಿತು ಎನ್ನಲಾಗಿದೆ. ಅಲ್ಲಿಂದ ಇಲ್ಲಿಯವರೆಗೆ 'ಕೆರೆಗೆ ಹಾರ'ದ ಮುಖ್ಯಪಾತ್ರವಾದ ಭಾಗೀರತಿ ಗಂಗೆಯಂತೆಯೇ ಪವಿತ್ರತಮಳಾಗಿ, ತ್ಯಾಗ ಬಲಿದಾನದ ಮಹಾಸ್ತ್ರೀಯಾಗಿ ಕನ್ನಡ ಕಾವ್ಯ ಲೋಕದಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿದ್ದಾಳೆ. ಈ ಕುರಿತು ನಮ್ಮ ವಿಮರ್ಶಕರನೇಕರು ತಮ್ಮ ಒಲವು ನಿಲುವನ್ನು ವ್ಯಕ್ತಪಡಿಸಿದ್ದಾರೆ. 'ಕೆರಗೆ ಹಾರ'ವನ್ನು ಕುರಿತು ತೀನಂಶ್ರೀ ಯವರು ಸಾಹಿತ್ಯಕ ದೃಷ್ಟಿಯಿಂದ ಅದರ ಭಾವಗೀತೆಯ ಗುಣವನ್ನು ವೈಭವೀಕರಿಸಿ ಮಾತಾಡಿದರೆ, ಗಿರಡ್ಡಿ ಗೋವಿಂದ ರಾಜರು ಮೌಲ್ಯಪ್ರಜ್ಞೆಯ ಬಗ್ಗೆ ಮಾತೆತ್ತಿದ್ದಾರೆ. ಶಿವರಾಮು ಕಾಡನಕುಪ್ಪೆ ಅವರು ಇದರ ಸಾಂಸ್ಕೃತಿಕ ಆವರಣವನ್ನು ಕುರಿತು ವಿಚಾರಿಸಿದ್ದರೆ, ಈಚೆಗೆ ಎಸ್.ಜಿ. ಸಿದ್ಧರಾಮಯ್ಯನವರು ಭಾಗೀರತಿಯ ಪಾತ್ರ ಸಮಷ್ಟಿ ಹಿತಕ್ಕಾಗಿ ಬಲವಂತವಾದ ಬಲಿದಾನವಾಗಿ ಕಂಡುಬರುತ್ತದೆ ಎಂದು ಮುಂತಾಗಿ ಮರುಪರಿಶೀಲನೆಗೆ ಒಡ್ಡಿದ್ದಾರೆ. ಆದರೆ ಈಗ 'ಬಲಿಯಾದಳು ಬಂದಮ್ಮ' ಕಥೆಯ ಜೊತೆಗೆ 'ಕೆರಗೆ ಹಾರ'ವನ್ನು ತೂಗಿ ನೋಡಿದರೆ ಈ ಕಥನ ಗೀತದ ತ್ಯಾಗ, ಬಲಿದಾನದ ಮೌಲ್ಯವು ಕೊಂಚ ಅಪಮೌಲ್ಯಕ್ಕೆಡೆಯಾಗುವುದನ್ನು ಯಾರೂ ಗುರ್ತಿಸಬಹುದು. ಅದಕ್ಕಾಗಿ 'ಬಲಿಯಾದಳು ಬಂದಮ್ಮ'ನ ಕತೆಯನ್ನು ಇಲ್ಲಿ ಉದ್ಧರಿಸಲಾಗುತ್ತಿದೆ:

ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆಗೆ ಪೂರ್ವದಿಕ್ಕಿನ ಸು. ೩೦ ಕಿ.ಮೀ. ದೂರದ ಆಂಧ್ರದ ಗಡಿಯಲ್ಲಿ ಕಲ್ಯಾಣದುರ್ಗ ಮಂಡಲಕ್ಕೆ ಸೇರಿರುವ 'ಎರಡುಕೆರೆ' (ಅಪ್ಪಟ ಕನ್ನಡ ಭಾಷೆ) ಕನ್ನಡ ಸಂಸ್ಕೃತಿಯ ಸಣ್ಣ ಗ್ರಾಮ. ಸು. ೧೬-೧೭ನೇ ಶತಮಾನದಲ್ಲಿ ಮರಿಯಗೌಡ ಎಂಬ ಈ ಗ್ರಾಮದ ಮುಖ್ಯಸ್ಥರು ಆ ಸೀಮೆಯ ಸಾಮಂತ ರಾಜನ ಆದೇಶದಂತೆ ಆಯಕಟ್ಟಿನ ಸ್ಥಳದಲ್ಲಿ ಕಟ್ಟಿಸಿದ ಕೆರೆಯು ಏರಿಯು ಸಾಧಾರಣವಾದ ಮಳೆಯ ನೀರಿಗೇ ಒಡೆದು

ಹೋಗಲಾರಂಭಿಸಿತು! ಅದನ್ನು ಪುನಃ ಪುನಃ ನಾಲ್ಕಾರು ಬಾರಿ ದುರಸ್ತಿ ಮಾಡಿಸಿದರೂ ಪ್ರಯೋಜನವಾಗಲಿಲ್ಲ. ಗೌಡರಿಗೆ ವಿಪರೀತ ಚಿಂತೆಯಾಯಿತು. ಅನ್ನಾಹಾರಗಳನ್ನು ತೊರೆದ ಇವರ ಕನಸಿನಲ್ಲಿ ಮನೆ ದೇವತೆ ಕಾಣಿಸಿಕೊಂಡು 'ತುಂಬು ಗರ್ಭಿಣಿಯಾದ ನಿನ್ನ ಸೊಸೆಯನ್ನು ಕೆರೆಗೆ ಬಲಿ ನೀಡಿದರೆ ಮಾತ್ರ ಏರಿ ನಿಲ್ಲುವುದು' ಎಂದಂತಾಯಿತಂತೆ!

ಗೌಡರಿಗೆ ಸಿಡಿಲು ಬಡಿದಂತಾಯಿತು. ಇರುವ ಒಬ್ಬನೇ ಮಗನ ಮೆಚ್ಚಿನ ಮಡದಿ. ವಂಶೋಧ್ಧಾರಕಿ, ಮನೆಯ ಗೌರವದ ಕಳಸ, ತವರಿನ ಮುದ್ದಿನ ಬೊಂಬೆ ಅಲ್ಲದೆ ನಾಲ್ಕು ತಿಂಗಳ ಗರ್ಭಿಣಿ!ಇವಳನ್ನು ಕೆರೆಗೆ ಹಾರ ನೀಡುವುದೇ? ಎಂಬ ಮತ್ತೊಂದು ಚಿಂತೆಗೆ ಈಡಾದಾಗ, ಇವರ ಆಪ್ತರೂ ಗ್ರಾಮದ ಶಾನುಭೋಗರೂ ಆದ ಭಾರದ್ವಾಜರು 'ನಿಮ್ಮ ಸೊಸೆಯೇನು ಈಗ ತುಂಬು ಗರ್ಭಿಣಿಯಲ್ಲ. ಈಕೆಗೆ ಬದಲಾಗಿ ನಿಮ್ಮ ಮಾದಿಗ ಆಳುಮಗ ತಿಮ್ಮಗನ ಹೆಂಡತಿ ಬಂದಮ್ಮ ನಿಮಗೆ ಸೊಸೆಯೇ ಅಲ್ಲವೆ! ಈಗ ತುಂಬು ಗರ್ಭಿಣಿಯಾಗಿರುವ ಅವಳನ್ನೇ ಯಾಕೆ ಹಾರವಾಗಿ ನೀಡಬಾರದು?' ಎಂಬಂಥ ಸಲಹೆ ನೀಡಿದರು. ಈ ವಿಷಯ ತಿಳಿದ ಬಂದಮ್ಮನ ಮಾವ ದಾಸಪ್ಪ ಹೌಹಾರಿಬಿಟ್ಟ! ಹುಚ್ಚನಂತೆ ದಿಕ್ಕೆಟ್ಟು ದುಃಖಿಸಿದ.

ಆದರೂ ಗೌಡರ ಹಾಗೂ ಶಾನುಭೋಗರ ಎದುರು ನಿಲ್ಲುವಂಥ ಧೈರ್ಯವಿಲ್ಲದ್ದರಿಂದ ಬಂದಮ್ಮನನ್ನು ಕೆರೆಗೆ ಹಾರವಾಗಿ ನೀಡಿದರೆ ಗೌಡರಿಗೆ ಖುಷಿಯಾಗುತ್ತದೆ. ಅವರ ಚಿಂತೆಯೂ ದೂರವಾಗುತ್ತದೆ. ಎಷ್ಟೋ ವರ್ಷಗಳ ತನಕ ಎಷ್ಟೋ ಜನ ಜಾನುವಾರುಗಳಿಗೆ ಅನ್ನ, ನೀರು ದೊರಕಿಸಿದ ಪುಣ್ಯ ಬರುತ್ತದೆ. ಮುಂದೆ ಜನ ಇವಳ ಬಗ್ಗೆ ಪದ ಕಟ್ಟಿ ಹಾಡುತ್ತಾರೆ. ಇದಕಿನ್ನ ದಾನ ಯಾವುದಿದೆ?' ಎಂದೆಲ್ಲಾ ಯೋಚಿಸಿ 'ಆಗಲಿ ಬುದ್ದ್ಯೋರಾ, ನಮ್ಮ ಬಂದಮ್ಮನ್ನ ಕೆರೆಗೆ ಹಾರ ಕೊಡ್ತೀನಿ'....... ಎಂಬ ಮಾತು ಕೊಟ್ಟುಬಿಟ್ಟ.

ಈ ಸುದ್ದಿ ತಿಳಿದ ಎಲ್ಲರಿಗೂ ಊರೇ ಹೊತ್ತಿ ಉರಿದಷ್ಟು ದುಃಖವಾಯಿತು. ಆಘಾತಕ್ಕೊಳಗಾದ ತುಂಬು ಗರ್ಭಿಣಿ ಬಂದಮ್ಮ ಮುಸ್ಸಂಜೆಯ ಹೊತ್ತಿನಲ್ಲಿ ೩ ಮೈಲು ದೂರದ 'ಪಬ್ಬರನ ಹಳ್ಳಿ'ಯ ತನ್ನ ತವರು ಮನೆಗೆ ಧಾವಿಸಿದಳು. ವಿಷಯ ತಿಳಿದ ತವರು ಮನೆಯವರೆಲ್ಲರೂ ಭೂಮಿ ಬಿರಿದಂತೆ ಗೋಳಾಡಿದರು. ಆದರೂ 'ಎರಡುಕೆರೆ' ಗ್ರಾಮದ ಜನ ಹಾಗೂ ಗೌಡರ ವಿರುದ್ಧ ಸೊಲ್ಲೆತ್ತುವ ಧೈರ್ಯ ಸಾಲದೆ 'ಕೊಟ್ಟೆಣ್ಣು ಕುಲಕ್ಕೆ ಹೊರಗು, ನಿನ್ನ ಮೇಲೆ ನಮಗೆ ಯಾವ ಅಧಿಕಾರವೂ ಇಲ್ಲ. ನಿನ್ನ ಗಂಡನ ಮನೆಯವರ ಇಚ್ಛೆಯಂತೆ ನಡೆದುಕೊಳ್ಳುವುದೇ ನಿನ್ನ ಧರ್ಮ' ಎಂದೆಲ್ಲಾ ಹೇಳಿ, ಮಾರನೆಯ ದಿನ ಗಾಡಿಯಲ್ಲಿ ಕರೆದೊಯ್ದು ಎರಡು ಕೆರೆ ಗ್ರಾಮದ ಗಂಡನ ಮನೆಗೆ ತಲುಪಿಸಿದರು. ನಿರ್ಧರಿಸಿದಂತೆ ಒಂದು ದಿನ ಗೌಡರ ಮನೆಯವರು ವಡವೆ ವಸ್ತ್ರಗಳಿಂದ ಬಂದಮ್ಮನನ್ನು ಅಲಂಕರಿಸಿ ಮೆರವಣಿಗೆಯಲ್ಲಿ ಕರೆದೊಯ್ದು, ದುರಸ್ತಿಯಾದ ಏರಿಯ ಮೇಲೆ ತೋಡಲಾಗಿದ್ದ ಗುಂಡಿಯಲ್ಲಿ ಕುಳ್ಳಿರಿಸಿ, ವಾದ್ಯಗಳ ಸದ್ದಿನಲ್ಲಿ ಮೇಲೊಂದು ಬಂಡೆಯನ್ನು ಮುಚ್ಚಿಬಿಟ್ಟರು.

ಇದರ ನೆನಪಿಗಾಗಿಯೋ ಕೃತಜ್ಞತೆಯ ಸಂಕೇತವಾಗಿಯೋ ಅಥವಾ ನೋವು ಸಂಕಟಗಳನ್ನು ಮರೆಯಲೆಂದೋ ಮರಿಯ ಗೌಡರೂ ಗ್ರಾಮದ ಇನ್ನಿತರ ಜಮೀನುದಾರರೂ ಸೇರಿ ಬಂದಮ್ಮನ ಗಂಡನ ಮನೆಯವರಿಗೆ ಸಮಾಧಿಯ ಸನಿಹದ ಎರಡು ಎಕರೆ ಭೂಮಿಯನ್ನು

ಉಂಬಳಿಯಾಗಿ ನೀಡಿ, ಆ ಸಮಾಧಿಯ ಸ್ಥಳದಲ್ಲಿ ನಾಲ್ಕೈದು ಬಂಡೆಗಳ ಒಂದು ಗುಡಿಯಾಕಾರದ ಗೂಡನ್ನು ನಿರ್ಮಿಸಿದರು.

ಇದು ಜನಜನಿತವಾಗಿರುವ ಸ್ಥಳಾಧಾರಿತ (ಸಂಕ್ಷಿಪ್ತ) ಇತಿಹಾಸ. ಎಸ್.ಆರ್. ಗುರುನಾಥ್ ಅವರ ಮಾಹಿತಿ ಪ್ರಕಾರ, ಕಾಕತಾಳೀಯವೆಂಬಂತೆ ಇಂದಿನವರೆಗೂ ಆ ಕೆರೆಯ ಏರಿ ಒಡೆದಿಲ್ಲ ಎಂಬುದನ್ನು ಬಿಟ್ಟರೆ ಇತರೆ ಕಥನ ಗೀತೆಗಳ ಕೆಲವು ಅಲೌಕಿಕ, ಉತ್ಪ್ರೇಕ್ಷಿತ ಅಥವಾ ಪವಾಡ ಸದೃಶ ಘಟನೆಗಳಾವುವೂ ನಡೆದಿರುವುದು ಕಂಡುಬಂದಿಲ್ಲ. ಈಗಲೂ ಕೆರೆಯ ಏರಿಯ ಮೇಲೆ ಬಂದಮ್ಮನ ಸಮಾಧಿ- ಗುಡಿಯು ದುರಂತ ಇತಿಹಾಸಕ್ಕೆ ಮೂಕ ಸಾಕ್ಷಿಯಾಗಿ ಉಳಿದಿದೆ. ಹಿರಿಯ ಮರಿಗೌಡರ ಸಂತತಿಯವರು 'ಬಂದಜ್ಜಿ'ಯ ಸಮಾಧಿಗೆ ಪೂಜೆ ಸಲ್ಲಿಸುತ್ತಾ ಬಂದಿದ್ದಾರೆ. ಪ್ರತಿವರ್ಷ ಯುಗಾದಿ ಹಬ್ಬದಂದು ವಿಶೇಷ ಪೂಜೆಗಾಗಿ ಬಂದಮ್ಮನ ಸಂತತಿಯವರಿಗೆ ಮಂಗಳ ದ್ರವ್ಯಗಳೊಂದಿಗೆ ಒಂದು ಕೋಣವನ್ನೂ ಕೊಡುವುದುಂಟು. ಬಂದಮ್ಮನ ಮಾವನ ವಂಶಸ್ಥರು ಅನಕ್ಷರಸ್ಥರಾದರೂ ಆಕೆಯ ಇತಿಹಾಸವನ್ನು ಯಥಾವತ್ತಾಗಿ ವಿವರಿಸುತ್ತಾರೆ. ಅವರಿಗೆ ಬಿಟ್ಟುಕೊಟ್ಟಿದ್ದ ಉಂಬಳಿ ಜಮೀನು ಈಗ ತಕರಾರಿನಲ್ಲಿದೆಯಂತೆ. ಬಂದಮ್ಮನ ಈ ಘಟನೆಯನ್ನೇ ಆಧಾರವಾಗಿರಿಸಿಕೊಂಡು 'ಭಾಗೀರಥಿ' 'ಹೊನ್ನಮ್ಮ' 'ಕೆಂಚಮ್ಮ' 'ಹೊನ್ನಾದೇವಿ' ಮುಂತಾದವರ ಗೀತೆಗಳನ್ನು ಕಟ್ಟಿರಬಾರದೇಕೆ? ಎಂಬ ಪ್ರಶ್ನೆಗೆ ಗುರುನಾಥ ಅವರೇ ಉತ್ತರಿಸಿರುವಂತೆ, ಇತರೇತರ ಇಂಥ ಆಧಾರಗಳು ದೊರೆಯುವವರೆಗೆ, ಬಂದಮ್ಮನ ಇತಿಹಾಸವೇ ಸೂಕ್ತ ಸಮರ್ಥನೆಯಾಗಿದೆ ಎಂಬುದರಲ್ಲಿ ಯಾವ ಸಂಶಯವೂ ಕಾಣದು. ಬಂದಮ್ಮನ ಈ ಕಥಾನಕ ಅತ್ಯಂತ ಸಂಕೀರ್ಣ ಅಂಶಗಳಿಂದ ಕೂಡಿದೆ. ಅವುಗಳನ್ನು ಹೀಗೆ ಪಟ್ಟಿ ಮಾಡಬಹುದು.

೧. ಮರಿಯಗೌಡರು ಕಂಡ ಕನಸು

೨. ಅದಕ್ಕೆ ಶ್ಯಾನುಭೋಗರು ಕೊಟ್ಟ ಸಲಹೆ

೩. ಬಂದಮ್ಮನ ಮಾವ ದಾಸಪ್ಪನ ಸಾಮಾಜಿಕ ಕಳಕಳಿ

೪. ಗೌಡರಿಗೂ ದಲಿತರಿಗೂ ಏರ್ಪಟ್ಟಿರುವ ಸಾಂಸ್ಕೃತಿಕ ಬೆಸುಗೆ

೫. ಉಂಬಳಿ ಜಮೀನು ತಕರಾರಿಗೆ ಬಿದ್ದಿರುವುದು

೬. ಅದಿರು ನಿಕ್ಷೇಪದಂತಿರುವ ಬಂದಮ್ಮನ ಕಥೆ

ಈ ಒಂದೊಂದು ಅಂಶಗಳನ್ನೂ ಪರಿಶೀಲಿಸುತ್ತಾ ಹೋದರೆ ಬಂದಮ್ಮನ ಕಥೆಯ ಸಂಕೀರ್ಣತೆ ಏನೆಂಬುದು ತಿಳಿದುಬರುತ್ತದೆ.

ಮೊದಲಿಗೆ ಮರಿಯ ಗೌಡನಿಗೆ ಬೀಳುವ ಕನಸು ಜನಪದ ಆಶಯಕ್ಕೆ ಅನುಗುಣವಾಗಿಯೇ ಇದೆ. ಊರಿನ ಜನ ಜಾನುವಾರುಗಳಿಗೆಂದು ಕಟ್ಟಿಸಿದ ಕೆರೆಯ ಏರಿ ಸಾಧಾರಣವಾದ ಮಳೆಗಲ್ಲ ಒಡೆದು ಹೋಗುತ್ತಿರುವುದನ್ನು ಸಹಿಸದೆ ಮನಸ್ಸಿಗೆ ಹಚ್ಚಿಕೊಂಡ ಆತ ಅನ್ನ ನೀರು ಬಿಟ್ಟು ಚಿಂತೆಗೀಡಾಗುವುದು ತೀರಾ ಸ್ವಾಭಾವಿಕವಾಗಿದೆ. ಹೀಗಿರುವಾಗ ಅವನ ಸುಪ್ತ ಪ್ರಜ್ಞೆ ತೋರಿಸಿದ ಪರಿಹಾರ ಮಾರ್ಗವೇ ಕನಸಿನ ಸ್ವರೂಪ ಪಡೆದಿದೆ. ಪಾರಂಪರಿಕವಾಗಿ ಹರಿದು ಬಂದ ಸ್ಮೃತಿಲೋಕದ ಬೆಳಕಿಂಡಿ ಇದು. ಆದರೂ ಆತ

ನಿರ್ದಯನಾಗಿ ತನ್ನ ಸೊಸೆಯನ್ನು ಬಲಿಗೊಡಲಾರದೆ ಮತ್ತೂ ಚಿಂತಿತನಾದದ್ದು ಅವನ ಸ್ವಭಾವಕ್ಕೆ ಉಚಿತವಾಗಿದೆ.

ಹೀಗಿರುವಲ್ಲಿ ಊರಿನ ಆಗುಹೋಗುಗಳ ಸೂತ್ರಧಾರಿ ಶ್ಯಾನುಭೋಗ ಭಾರದ್ವಾಜರ ಪ್ರವೇಶವಾಗುತ್ತದೆ. ಅವರು ನೀಡುವ ಸಲಹೆಯ ಪ್ರಕಾರ ಗೌಡರ ಆಳುಮಗ ತಿಮ್ಮಗನ ಹೆಂಡತಿ ಬಂದಮ್ಮನೂ ಸಹ ಸೊಸೆಯ ಸ್ಥಾನದಲ್ಲಿಯೇ ಇದ್ದಾಳೆಂದು ತಿಳಿಸುವುದು, ಗೌಡರು ಅದಕ್ಕೆ ಸಮ್ಮತಿ ಸೂಚಿಸುವುದು ಇತ್ಯಾದಿಯೆಲ್ಲ ನಡೆದು ಬಂದಮ್ಮನ ಮಾವನಿಗೆ ಈ ಸುದ್ದಿ ಮುಟ್ಟುತ್ತದೆ. ಅಧಿಕಾರಕ್ಕೆ ಶಾಸ್ತ್ರದ ಸಮ್ಮತಿಯ ಮುದ್ರೆ ಬಿದ್ದು ಅದು ಕಾರ್ಯ ರೂಪಕ್ಕೆ ಇಳಿಯಿತು. ಕಂಡವರ ಮನೆ ಮುರಿಯುವುದಕ್ಕೆ ಸಿಕ್ಕಿದ ಶಾಸ್ತ್ರ ಸಮ್ಮತಿಯಿಂದ ಮರಿಯಗೌಡರ ಹೃದಯ ತಾಕಲಾಟವನ್ನು ಕಳೆದುಕೊಂಡು ಕಾರ್ಯತತ್ಪರವಾಯಿತು. ಇಂಥ ಧರ್ಮಸಂಹಿತೆಯನ್ನು ರೂಪಿಸುವಲ್ಲಿ ಬ್ರಾಹ್ಮಣ ಮನಸ್ಸು ಯಾವ ಗೊಂದಲಕ್ಕೂ ಹೋಗದೆ ನಿರ್ದಯವಾಗಿರುವುದು ಪ್ರಶ್ನಾರ್ಹ ಸಂಗತಿಯಾಗಿದೆಯಾದರೂ ಮನುವಾದಿಗಳಿಗೆ ಇದು ಅಪ್ರಸ್ತುತ.

ಮೂರನೆಯಯಾಗಿ ತನ್ನ ಸೊಸೆಯನ್ನು ಬಲಿದಾನ ನೀಡುವ ಹೊಣೆಗಾರಿಕೆ ಅವಳ ಮಾವ ದಾಸಪ್ಪನ ಕಡೆಗೆ ಬಂದಿತು. ಒಡೆಯನ ಮಾತು ಮೀರಲಾರದ ಅಸಹಾಯಕ ವ್ಯಕ್ತಿ ಆತ. ಅಲ್ಲದೆ ದಲಿತರಿಗೆ ಪರಂಪರಾನುಗತವಾಗಿ ಬಂದ ದುಃಖ ಸಹಿಷ್ಣುತೆ ಅವನನ್ನು ಸಂಕಟದಿಂದ ಪಾರುಮಾಡಿತು! ಈ ಸುಪ್ತಪ್ರಜ್ಞೆ ಹೊದ್ದಿಸಿದ ಧಾರ್ಮಿಕ ಹಚ್ಚಡದಲ್ಲಿ ಆತ ಸುಧಾರಿಸಿಕೊಂಡು ಗೌಡ ಮತ್ತು ಶ್ಯಾನುಭೋಗರ ಎದುರು ಬಂಡಾಯ ಹೂಡುವ ಧೈರ್ಯವಿಲ್ಲದೆ, ಸೊಸೆಯ ಬಲಿದಾನಕ್ಕೆ ಒಪ್ಪಿಕೊಂಡ. ಈ ಬಲಿಯಿಂದ ಒಡೆಯರಿಗೂ ಖುಷಿ ಮತ್ತು ಜನ ಜಾನುವಾರುಗಳಿಗೆ ಅನ್ನ ನೀರು ದೊರಕಿಸಿದ ಪುಣ್ಯ ಬರುತ್ತದೆ; ಮುಂದೆ ಬಂದಮ್ಮನ ಬಗ್ಗೆ ಜನರು ಪದಕಟ್ಟಿ ಹಾಡಿಕೊಳ್ಳುತ್ತಾರೆ ಎಂದು ಸಮಾಧಾನ ಪಟ್ಟುಕೊಂಡ ದಾಸಪ್ಪನ ಅಸ್ಖಲಿತ ಸಾಮಾಜಿಕ ಕಳಕಳಿ, ಧಾರ್ಮಿಕ ಸ್ವಭಾವ ದಲಿತರಿಗೆ ತಕ್ಕುದಾಗಿದೆ. ಅತ್ತ ಬಂದಮ್ಮನ ತವರಿನವರೂ ಅಸಹಾಯಕರು. ನಡೆದುಬಂದಿದ್ದ ತುಂಬಿದ ಬಸುರಿಯನ್ನು ಗಾಡಿಯಲ್ಲಿ ಕೂಡಿಸಿಕೊಂಡು ಬಂದು ಬಿಟ್ಟು ಹೋಗುತ್ತಾರೆ. ಅವಳಿಗಿನ್ನ್ಯಾರ ಆಸರೆ! ಇನ್ಯಾರ ರಕ್ಷಣೆ! ಕರುಣೆಯೊಳಗಿನ ಕ್ರೌರ್ಯ ಅವಳನ್ನೂ ಅವಳ ಹೊಟ್ಟೆಯಲ್ಲಿ ಹೊರಳುವ ಕಂದನನ್ನೂ ಬಲಿತೆಗೆದುಕೊಂಡು ಬಿಟ್ಟಿತು. ಹೀಗೆ ಹಾಸು ಬಂಡೆಯ ಅಡಿಯಲ್ಲಿ ನಿಶ್ಶಬ್ದವಾದಳು ಅವಳು.

ಇನ್ನು ಹೇಳುವುದೇನಿದೆ? ಊಳಿಗ ಮಾನ್ಯ ಸಂಸ್ಕೃತಿಯ ಬೇರುಗಳು ಇಲ್ಲಿ ಆಳ ಆಳಕ್ಕೆ ಇಳಿದುಹೋಗಿ ಬಿಟ್ಟಿವೆ. ಮರಿಯಗೌಡ ಹಾಗೂ ದಲಿತರ ನಡುವಿನ ಸಾಂಸ್ಕೃತಿಕ ಕೊಡುಕೊಳುಗಳು ನಿರಂತರವಾಗಿವೆ. ದಲಿತರ ತ್ಯಾಗ ಬಲಿದಾನಕ್ಕೆ ಗೌಡರು ನೀಡಿದ ಭೌತಿಕ ವಸ್ತು ವಿಶೇಷಗಳು ಎಂದಾದರೂ ಸಮಗಟ್ಟುವುವೇ? ಆದರೂ ಮಾನ್ಯರು ವಸ್ತು ವಿಶೇಷಗಳನ್ನು ನೀಡುತ್ತ ತಮ್ಮ ಕೃತಜ್ಞತೆಯನ್ನು ತೋರಿಸುತ್ತಿದ್ದಾರೆ, ಅತ್ತ ಊಳಿಗದ ಜನ ಅದನ್ನು ಮಹಾ ಪ್ರಸಾದವೆಂದು ಸ್ವೀಕರಿಸುತ್ತ ತಮ್ಮ ದೈನ್ಯತೆಯನ್ನು ಪ್ರದರ್ಶಿಸುತ್ತಲೇ ಬಂದಿದ್ದಾರೆ. ಇದು

ಕಲಿಯುಗವಲ್ಲವೆ? ಜನತಂತ್ರದಲ್ಲಿಯೂ ಅತಂತ್ರದ ಬದುಕಿಗೆ ನಿರಂತರ ಪ್ರತಿಮೆಯಾಗಿದೆ ಈ "ಬಲಿಯಾದಳು ಬಂದಮ್ಮ"ನ" ಕಥೆ. ಹಬ್ಬ ಜಾತ್ರೆಯಲ್ಲ ಇನ್ನು ಮಾಮೂಲು.

ಬಂದಮ್ಮನ ಸಂತತಿಗೆ ಕೊಟ್ಟಿದ್ದ ಎರಡು ಎಕರೆ ಉಂಬಳಿ ಜಮೀನು ಕೂಡ ಈಗ ತಕರಾರಿನಲ್ಲಿ ಸಿಲುಕಿ ಪ್ರಸ್ತುತ ದಲಿತರ ಬದುಕಿಗೆ ಹಿಡಿದ ಕನ್ನಡಿಯಾಗಿದೆ.

'ಉಳುವವನಿಗೇ ಭೂಮಿ' ಎಂಬ ಶಾಸನ ಜಾರಿಯಲ್ಲಿದ್ದರೂ ಸಹ ಗೆಯ್ಯುವವರೆಲ್ಲ ನೆಲಮೊಡೆಯರಲ್ಲ. ದೇವರಾಜು ಅರಸರ ಕಾಲದಲ್ಲಿ ಡಿಕ್ಲರೇಶನ್ ಕೊಟ್ಟ ಕೆಲವು ದಲಿತರು ಭೂಮಿಯನ್ನೇನೂ ಪಡೆದರು. ಆದರೂ ಉಂಬಳಿ, ಜಹಗೀರುಗಳಲ್ಲಿ ಕೆಲಸ ಮಾಡುತ್ತಿದ್ದ ಬಹುಪಾಲು ರೈತಾಪಿ ಜನ ಅದರಲ್ಲೂ ದಲಿತರು ಭೂ ತಕರಾರುಗಳಲ್ಲಿ ಸಿಲುಕಿ ರೆವಿನ್ಯೂ ಕಛೇರಿ ಹಾಗೂ ಕೋರ್ಟಿನ ಆವರಣಗಳಲ್ಲಿ ಸುತ್ತಾಡುತ್ತ ಬೇಸತ್ತು ಹೋಗುತ್ತಿದ್ದಾರೆ. ಜೋಮನ ಸಂತತಿಗೆ ಜೀತ ವಿಮುಕ್ತಿ ಎಂದಾದರೂ ಸಾಧ್ಯವೇ ಎಂಬ ಪ್ರಶ್ನೆ ಹಾಗೆ ಉಳಿದಿದೆ. ಹಾಗಾಗಿ ಬಂದಮ್ಮನ ವಂಶಸ್ಥರ ಭೂ ತಕರಾರು ಮಹಾನ್ ಭಾರತದ ವಾಸ್ತವ ಚಿತ್ರವನ್ನೇ ಬಿಂಬಿಸುತ್ತದೆ.

ಕೊನೆಯದಾಗಿ 'ಬಲಿಯಾದಳು ಬಂದಮ್ಮ'ನ ಕಥೆ ಒಂದು ಅಪೂರ್ವ ಅದಿರು ನಿಕ್ಷೇಪದಂತೆ ಇದ್ದು ಭಾಗೀರತಿ, ಕೆಂಚಮ್ಮ, ಹೊನ್ನಾದೇವಿ ಮುಂತಾದ ಕಥನಗೀತೆಗಳಿಗೆ ಜೀವ ದ್ರವ್ಯವನ್ನು ಧಾರೆ ಎರೆದಿದೆ. ನಾಮ, ದೇಶ, ಕ್ರಿಯಾ ಸನ್ನಿವೇಶಗಳನ್ನು ಬದಲಿಸಿ ಇಂಥ ಎಷ್ಟೋ ತ್ಯಾಗ ಬಲಿದಾನದ ಕೃತಿಗಳನ್ನು ರಚಿಸಬಹುದು. ಅವರಲ್ಲಿ ಕೆರೆಗೆ ಹಾರವೂ ಒಂದು. ಈ ಕಥನ ಗೀತೆಯಲ್ಲಿ ಮೇಲೆ ವಿವರಿಸಿದಂತೆ ಸಾಮಾಜಿಕವಾದ, ಆರ್ಥಿಕವಾದ, ರಾಜಕೀಯವಾದ ಹಾಗೂ ಧಾರ್ಮಿಕವಾದ ಯಾವ ಸಂಘರ್ಷವಾಗಲೀ ಸಂಕೀರ್ಣತೆಯಾಗಲೀ ಇಲ್ಲ. ಇದು ಏನಿದ್ದರೂ ಒಂದು ಕೌಟುಂಬಿಕ ಪರಿಸರದಲ್ಲಿ ಹುಟ್ಟಿರುವ ಸರಳ ದುರಂತ ಕಾವ್ಯ. ಅದರ ಕಲಾಕೌಶಲ ಬಹಳ ಸುಂದರ. ಅದು ಯಾವ ಸ್ವರೂಪದಲ್ಲಿದೆಯೆಂದರೆ 'ನಿಜದ ತಲೆಮೇಲೆ ಹೊಡೆದಂತಿದ್ದು ಕೃತಕ ಹಾರವಲ್ಲವೇನೋ' ಎಂಬ ಭ್ರಮೆ ಹುಟ್ಟಿಸುತ್ತದೆ. ಆದ್ದರಿಂದ ನಮ್ಮ ನವೋದಯ ಕಾಲದ ತೀನಂಶ್ರೀ ಮುಂತಾದ ವಿಮರ್ಶಕರು ಪಶ್ಚಿಮದ ರೋಮ್ಯಾಂಟಿಕ್ ಕಾವ್ಯದ ಪ್ರಭಾವದಿಂದಾಗಿ ಕೆರೆಗೆ ಹಾರವನ್ನು ಕುರಿತು ವೈಭವೀಕರಿಸಿ ಮಾತನಾಡಿದ್ದು ಆ ಕಾಲ ಸಂದರ್ಭಕ್ಕೆ ಸಹಜವೇ. ಆದರೆ ಈಗ ಕಾಲ ಬದಲಾಗಿದೆ. ಸಾಹಿತ್ಯವನ್ನು ಕುರಿತು ಮೌಲ್ಯಮಾಪನ ಮಾಡುವ ಧಾಟಿ ಧೋರಣೆಗಳೇ ಬದಲಾಗಿವೆ. ನಮ್ಮ ಬಹುಸಂಸ್ಕೃತಿಗಳ ಹಿನ್ನೆಲೆಯಲ್ಲಿ ಮೂಡಿ ಬಂದಿರುವ ಕಲಾಕೃತಿಗಳ ಮೌಲ್ಯ ಮಾಪನಕ್ಕೆ ರಸೈಕ್ಯ ದೃಷ್ಟಿಯ ಭಾರತೀಯ ಕಾವ್ಯಮೀಮಾಂಸೆಯ ಆ ಮಾನದಂಡಗಳು ಏನೇನೂ ಸಾಕಾಗುವುದಿಲ್ಲ. ಆದ್ದರಿಂದ ನಮ್ಮ ಜನಪದ ಸಾಹಿತ್ಯವನ್ನೂ ಸಹ ಈ ಹಿಂದಿನ ವಿಮರ್ಶನ ಮಾನದಂಡಗಳಿಂದ ಮೌಲ್ಯ ನಿರ್ಣಯಿಸಲು ಸಾಧ್ಯವಿಲ್ಲ. ಈ ನಿಟ್ಟಿನಲ್ಲಿ ಜನಪದ ಕಾವ್ಯ ಮೀಮಾಂಸೆ ಹೊಸ ಅನ್ವೇಷಣೆಗೆ ತೊಡಗಿದೆ. ಇದಕ್ಕಾಗಿ ಸಭೆ ಸೆಮಿನಾರುಗಳು ವಿದ್ವತ್ ವಲಯದಲ್ಲಿ ನಡೆಯುತ್ತಿದೆ. ಊಳಿಗಮಾನ್ಯ ಸಂಸ್ಕೃತಿಯ ಹಿನ್ನೆಲೆಯಲ್ಲಿ ನೋಡಿದಾಗ ಕೆರೆಗೆ ಹಾರದಲ್ಲಿ ದಲಿತ ಲೋಕದ ತ್ಯಾಗ, ಬಲಿದಾನದ ಮೌಲ್ಯವು ಒಡೆಯರ ಲೋಕಕ್ಕೆ ಅನಾಯಾಸವಾಗಿ ಹೈಜಾಕ್ ಆಗಿರುವುದನ್ನು ಯಾರು ಬೇಕಾದರೂ ಈಗ ಗುರ್ತಿಸಬಹುದು. ಅಲ್ಲಿ ಮಾನ್ಯರ ಸಾಂಸ್ಕೃತಿಕ ಮೌಲ್ಯ ಇನ್ನೂ ಮೇಲ್ಮೆಗೆ ಏಯ್ದಲ್ಪಟ್ಟಿದೆ. ಹೀಗೆಂದ ಮಾತ್ರಕ್ಕೆ ಒಡೆಯರ ಸೊಸೆ ಭಾಗೀರತಿಯ ಪಾತ್ರಕ್ಕೆ

ಅನ್ಯಾಯವಾಗುವುದೆಂದು ಭಾವಿಸಬೇಕಾಗಿಲ್ಲ. ಅವಳ ತ್ಯಾಗ, ಬಲಿದಾನ ಯಾವತ್ತೂ ಅಪಮೌಲ್ಯಗೊಳ್ಳುವುದಿಲ್ಲ. ಆದರೆ ಒಂದು ಕ್ಷಣ ಯೋಚಿಸಿ. ಭಾಗೀರತಿ ಹಾಗೂ ಬಂದಮ್ಮ ಅದಲು ಬದಲಾಗಿದ್ದರೂ ಸಹ ಇದೇ ಮಾತನ್ನು ಹೇಳಬಹುದಲ್ಲವೇ? ಬಂದಮ್ಮನ ವಾಸ್ತವ ದುರಂತದ ಮುಂದೆ ಭಾಗೀರತಿಯ ಬಲಿದಾನ ಆ ಗೀತ ರಚನಕಾರನ ಅವಸರದ, ಬಲವಂತದ ಬಲಿದಾನವಾಗಿ ಕಂಡುಬರುತ್ತದೆ. ಬಲವಂತದ ಈ ಮಾತನ್ನು ಎಸ್.ಜಿ. ಸಿದ್ಧರಾಮಯ್ಯನವರು ಎತ್ತಿದ್ದರೂ ಅದನ್ನು ಸಮಷ್ಠಿಯ ಹಿತಕ್ಕಾಗಿ ಎಂದು ಭಾವಿಸುತ್ತ ಕವಿಯ ಹೊಣೆಗಾರಿಕೆಯನ್ನು ಜಾರಿಸಿಬಿಡುತ್ತಾರೆ. (ನೋಡಿ: ಕೆರೆಗೆ ಹಾರವನ್ನು ಕುರಿತು, ಎಸ್. ಜಿ. ಸಿದ್ಧರಾಮಯ್ಯ) ಆದರೆ ಬಂದಮ್ಮನ ಕಥಾನಕದಲ್ಲಿ ಕಂಡುಬಂದಂತೆ, ಮಲ್ಲನಗೌಡನ ಕೌಟುಂಬಿಕ ಪರಿಸರದಿಂದ ಆಚೆಗೆ 'ಕೆರೆಗೆ ಹಾರ' ದಾಟುವುದೇ ಇಲ್ಲ. ಹೀಗಿರುವಾಗ ಸಮಷ್ಟಿಯ ಪ್ರಶ್ನೆ ಎಲ್ಲಿಂದ ಬಂದೀತು? ಈ ಹಿಂದೆ ಬಿ. ಕೃಷ್ಣಪ್ಪನವರು ಕುವೆಂಪು ಕಾದಂಬರಿಗಳಲ್ಲಿ ದಲಿತ ಹೆಣ್ಣಿಗೆ ಅನ್ಯಾಯವಾಗಿದೆ ಎಂದು ಆಕ್ಷೇಪಣೆ ಮಾಡಿದ್ದರು. ಅವರ ಮಾತು ಆ ಕೃತಿಗಳಿಗೆ ಅನುಚಿತವೆಂಬಂತೆ ಕಂಡುಬಂದರೂ ಈಗ ಬಂದಮ್ಮನ ಕಥೆಯ ಅನ್ವೇಷಣೆ ಆದಮೇಲೆ ಅಂಥ ಅನ್ಯಾಯ ಇನ್ನುಮುಂದೆ ದಲಿತ ಹೆಣ್ಣಿಗೆ ಆಗಬಾರದೆಂಬ ಸೂಚನೆಯ ಮಾತಾಗಿ ಇಷ್ಟೆಲ್ಲ ಬರೆಯಬೇಕಾಯಿತು. ಮುಖ್ಯವಾದ ಒಂದು ಮಾತೆಂದರೆ, ದಲಿತ ಲೋಕದ ತ್ಯಾಗ, ಬಲಿದಾನದಂತಹ ಜೀವನ ಮೌಲ್ಯಗಳು ಒಡೆಯರ ಲೋಕಕ್ಕೆ ಅಪಹರಣಗೊಂಡಿವೆಯೇ ಇಲ್ಲವೇ ಎಂಬುದನ್ನು ತರತಮ ಭಾವನೆಯಿಂದ ಸಮೀಕ್ಷಿಸಬೇಕು ಎಂಬುದು.



---

ಶಿವರಾಮಯ್ಯ, ನಂ. ೧೭೨, ಐಸೆಕ್ ರೋಡ್, ಟೀಚರ್ಸ್ ಕಾಲೋನಿ, ನಾಗರಬಾವಿ, ಬೆಂಗಳೂರು-೭೨

# ಹರಿಹರನ ರಗಳೆಗಳು : ಸ್ತ್ರೀವಾದಿ ಓದಿನಲ್ಲಿ

- ಡಾ|| ಎಚ್. ಎಸ್. ಶ್ರೀಮತಿ

ನಮ್ಮ ಬದುಕಿನ ಎಲ್ಲ ವಲಯಗಳನ್ನೂ ಸ್ತ್ರೀವಾದಿ ದೃಷ್ಟಿಕೋನದಿಂದ ಪುನರವಲೋಕಿಸುವ ಅಗತ್ಯವಿದೆಯಾದರೂ ನಮ್ಮ ವ್ಯವಸ್ಥೆ ಅದಕ್ಕೆ ಎಷ್ಟರಮಟ್ಟಿಗೆ ಸಿದ್ಧವಾಗಿದೆ ಎಂಬುದು ಪ್ರಶ್ನೆಯಾಗಿಯೇ ಉಳಿದಿದೆ. ಏಕೆಂದರೆ, ಈವರೆಗೂ ನಮ್ಮ ಯಾವುದೇ ಜ್ಞಾನವಲಯವೂ 'ಲೋಕಗ್ರಹಿಕೆ' ಎಂದರೆ ಅಥವಾ 'ಬದುಕಿನ ಚಿಂತನೆ' ಎಂದರೆ ಪುರುಷ ಲೋಕದ ಗ್ರಹಿಕೆ ಮತ್ತು ಪುರುಷ ಬದುಕಿನ ಚಿಂತನೆ ಎಂಬ ಕೇಂದ್ರವನ್ನು ಬಿಟ್ಟುಕೊಟ್ಟಿರುವ ನಿದರ್ಶನಗಳು ಕಾಣುತ್ತಿಲ್ಲ. ನಿಜದಲ್ಲಿ ಇಂಥಾ ತಾತ್ವಿಕ ಚಿಂತನೆಗಳು ದೇಶ, ಕಾಲ, ವರ್ಗ, ವರ್ಣ, ಜಾತಿ, ಕೋಮು, ಲಿಂಗ ತಾರತಮ್ಯಗಳನ್ನೆಲ್ಲಾ ಮೀರಿ ಇವೆಲ್ಲಕ್ಕೂ ಅತೀತವಾಗಿ ನಿಂತು ಒಟ್ಟು ಬದುಕಿನ ಸಾಮರಸ್ಯವನ್ನು ಸಾಧಿಸುವ ಆಧಾರಗಳೆನಿಸಬೇಕು. ಅದಕ್ಕೆ ಪೋಷಕವೆನಿಸುವ ಮೌಲ್ಯಗಳನ್ನು ಸಮಾಜದಲ್ಲಿ ನೆಲೆಗೊಳಿಸುವ ಸಾಧನಗಳೆನಿಸಬೇಕು. ಆದರೆ ವಾಸ್ತವದಲ್ಲಿ ಇವು ಬಹುಮಟ್ಟಿಗೆ ಸಮಾಜದ ಪ್ರಬಲ ಸಮುದಾಯಗಳು ಒಪ್ಪಬಹುದಾದ ಮೌಲ್ಯಗಳನ್ನೇ ಎತ್ತಿ ಹಿಡಿಯುತ್ತವೆ. ಅಲ್ಲದೆ, ಈ ಮೌಲ್ಯಗಳನ್ನು ಸಾರ್ವತ್ರಿಕಗೊಳಿಸುವ ಮೂಲಕ ದುರ್ಬಲ ಸಮುದಾಯಗಳು ಇವನ್ನೇ ಮರುಮಾತಿಲ್ಲದೆ ಒಪ್ಪಿಕೊಳ್ಳುವಂತೆ ಕೂಡ ಒತ್ತಾಯಿಸುತ್ತವೆ. ದೊಡ್ಡ ಪ್ರಜಾಪ್ರಭುತ್ವವಾದಿ ಧೋರಣೆಯೋ ಎಂಬಂತೆ ಇದನ್ನೇ 'ಲೋಕದೃಷ್ಟಿ' ಎಂದೂ ಕರೆಯಲಾಗುತ್ತದೆ. ತನ್ನ ಅಸ್ತಿತ್ವದ ಹುಡುಕಾಟದಲ್ಲಿರುವ ಯಾವುದೇ ಸಮುದಾಯ ಈ 'ಲೋಕದೃಷ್ಟಿ'ಯನ್ನು ಮೊದಲಿಗೆ ಪ್ರಶ್ನಿಸಬೇಕಾಗುತ್ತದೆ.

ಸಮಾಜದಲ್ಲಿ ಹಲವು ನೆಲೆಯ ತಾರತಮ್ಯಗಳಿವೆಯಾದರೂ ಲಿಂಗ ತಾರತಮ್ಯವು ಈ ಎಲ್ಲ ನೆಲೆಗಳಲ್ಲೂ ಕಾಣಬರುವ ಒಂದು ರೂಢಿ. ಏಕೆಂದರೆ, ಒಟ್ಟು ವ್ಯವಸ್ಥೆಯೇ ಪುರುಷ ನಿಯಂತ್ರಣದಲ್ಲಿದ್ದು ಬದುಕಿನ ಎಲ್ಲ ನೆಲೆಗಳಲ್ಲೂ ಆಯಾ ಪುರುಷರ ಯಜಮಾನಿಕೆಯಲ್ಲಿ ಅಲ್ಲಿನ ಮಹಿಳೆಯರ ಬದುಕು ಸಿಲುಕಿರುತ್ತದೆ. ಹಾಗಾಗಿ, ನಮ್ಮ ತಾತ್ವಿಕ ಚಿಂತನೆಗಳು, ನಮ್ಮ ಎಲ್ಲ ಜ್ಞಾನವಲಯಗಳು 'ಲೋಕದೃಷ್ಟಿ'ಯ ಪ್ರಸ್ತಾಪ ಮಾಡುವಾಗ ಅದಕ್ಕೆ 'ಪುರುಷದೃಷ್ಟಿ' ಎಂಬ ಅಘೋಷಿತ ಚೌಕಟ್ಟು ಮಾತ್ರವೇ ಇರುತ್ತದೆ. ಮೇಲುನೋಟಕ್ಕೆ ಪ್ರಜಾಪ್ರಭುತ್ವವಾದಿ

ಎಂಬಂತೆಯೂ, ಸಕಲ ಸರ್ವರಿಗೂ ಅನ್ವಯವಾಗುವ ಸಾರ್ವತ್ರಿಕ ಗುಣದ್ದಾಗಿಯೂ ಕಾಣುವ 'ಮಾನವತಾವಾದ'ದ ತಾತ್ತ್ವಿಕತೆಯನ್ನೇ ಒಂದಿಷ್ಟು ಸೂಕ್ಷ್ಮಗಳಲ್ಲಿ ನೋಡಿದರೆ ನಮ್ಮ ಬೌದ್ಧಿಕ ಚಿಂತನೆ, ಚರ್ಚೆಗಳು ಅದೆಷ್ಟು ಸಲೀಸಾಗಿ ಭ್ರಮೆಗಳನ್ನು ಸೃಷ್ಟಿಸಬಲ್ಲವು ಎಂಬ ಅರಿವಾಗುತ್ತದೆ. ಮಾನವತಾವಾದವು ಸೃಷ್ಟಿಸುವ ಹುಸಿನೆಲೆಗಳನ್ನು ಶೋಧಿಸಲು ತೊಡಗಿದರೆ ಅವು ಪ್ರತಿಪಾದಿಸುತ್ತಿರುವುದೂ ಅಸಮಾನತೆಯ ನೆಲೆಗಳನ್ನೇ ಎಂಬುದು ಅರ್ಥವಾಗುತ್ತದೆ. ಬಿಳಿಯರು 'ಹ್ಯೂಮನಿಸಂ' ಎಂದರೆ ಅದು ಕಪ್ಪು ಜನಾಂಗವನ್ನು ಒಳಗೊಳ್ಳುವುದಿಲ್ಲ. ಮೇಲು ಜಾತಿ, ವರ್ಗದವರ ಮಾನವತಾವಾದದಲ್ಲಿ ಕೆಳಜಾತಿ ವರ್ಗಗಳಿರುವುದಿಲ್ಲ. ಹಾಗೆಯೇ ಪುರುಷ ಚಿಂತನೆಯ ಮಾನವತಾವಾದದಲ್ಲಿ ಪುರುಷನು ಮಾತ್ರವೇ ಇರುವುದು. ಅಲ್ಲಿ ಮಹಿಳೆಯ ಬದುಕು ಪರಿಗಣಿತವಾಗುವುದೇ ಇಲ್ಲ.

ಸಾಹಿತ್ಯ ಚರ್ಚೆಯೊಂದಕ್ಕೆ ಪರಿಪ್ರೇಕ್ಷ್ಯವಾಗಿ ಇಷ್ಟು ದೀರ್ಘದ ತತ್ತ್ವಶಾಸ್ತ್ರದ ಚಿಂತನೆಯನ್ನು ಮಂಡಿಸುವ ಅಗತ್ಯ ವಿಚಿತ್ರವಾಗಿ ಕಾಣಿಸಬಹುದು. ಆದರೆ ಸಾಹಿತ್ಯ ವಲಯದಲ್ಲಿ ಕೂಡ ಈ ಪುರುಷ ರಾಜಕಾರಣವೇ ಪ್ರಬಲವಾಗಿರುವಾಗ, ಈ ಹಿನ್ನೆಲೆಯಿಲ್ಲದೆ 'ಸ್ತ್ರೀವಾದಿ' ಓದು ಎಂಬುದನ್ನು ವಿವರಿಸುವುದು ಕಷ್ಟ. ಇಪ್ಪತ್ತನೆಯ ಶತಮಾನದ ಚಿಂತನೆ ಸಮುದಾಯದ ಪ್ರಬಲರು ತಮಗೆ ಇಷ್ಟಬಂದಂತೆ ಕಟ್ಟಿಕೊಂಡು ಜಾರಿಗೊಳಿಸಿದ್ದ ತಾತ್ತ್ವಿಕ ಚಿಂತನೆಗಳನ್ನು ಪ್ರಶ್ನಿಸತೊಡಗಿದೆ. ಮಾನವತಾವಾದ ಎಂಬಂತಹ ಭ್ರಮೆಗಳನ್ನು ಒಡೆಯುತ್ತಾ, ಮರುಪ್ರಶ್ನೆಗಳನ್ನೂ, ತಿರುಗೇಟು ಸವಾಲುಗಳನ್ನೂ ಒಡ್ಡುತ್ತಿದೆ. ದುರ್ಬಲ ಸಮುದಾಯಗಳು ತಮ್ಮ ಅಸ್ತಿತ್ವದ ನೆಲೆಗಳನ್ನು ಶೋಧಿಸುವಷ್ಟಕ್ಕಾದರೂ ಶಕ್ತಿಯನ್ನು ಕೂಡಿಸಿಕೊಳ್ಳುತ್ತಿವೆ. ಲಿಂಗ ತಾರತಮ್ಯ ವ್ಯವಸ್ಥೆಯಲ್ಲಿ ಇಂಥಾ ಒಂದು ಶಕ್ತಿಯ ಎಳೆಯಾಗಿ ಸ್ತ್ರೀವಾದವು ಹುಟ್ಟಿಕೊಂಡಿದೆ. ವಿವಿಧ ಜ್ಞಾನವಲಯಗಳ ಚಿಂತನೆಗಳನ್ನು ಮರುಪರಿಶೀಲನೆಗೆ, ಹೊಸ ಪ್ರಶ್ನೆ ಸವಾಲುಗಳಿಗೆ ಒಡ್ಡುತ್ತಿರುವ ಸ್ತ್ರೀವಾದಿ ಚಿಂತನೆಯು ಸಾಹಿತ್ಯ ವಲಯವನ್ನು ಈ ಹೊಸ ಆಯಾಮದಿಂದ ಪರಿವೀಕ್ಷಿಸುತ್ತಿದೆ. ಈವರೆಗೂ ಸಾಹಿತ್ಯದ ಓದು ಎಂಬುದು ಸ್ತ್ರೀಪುರುಷರಿಬ್ಬರಿಗೂ ಸಮಾನವಾಗಿ ಅನ್ವಯವಾಗುವ ಸಂಗತಿ ಎನಿಸಿತ್ತು. 'ಪುರುಷವಾದಿ' ಓದು ಎಂಬ ಮಾತು ಅಂದೂ ಇಲ್ಲ, ಇಂದೂ ಇಲ್ಲ. ಏಕೆಂದರೆ, ಈ ಓದು ಎಂಬುದು ಪುರುಷವಾದಿ ಓದು ಮಾತ್ರವೇ ಆಗಿತ್ತು. ಒಂದು ಕೃತಿಯ ಓದು ಮಹಿಳೆಯ ಪಾಲಿಗೆ ಭಿನ್ನವಾಗಿರಬಹುದು ಎಂಬ ಕಲ್ಪನೆ ಸ್ವತಃ ಮಹಿಳೆಯರಿಗೂ ಇರಲಿಲ್ಲವೇನೋ. ಏಕೆಂದರೆ, ಈವರೆಗೆ ನಾವು ಸಾಹಿತ್ಯವನ್ನು ರಸಾನುಭವ, ಧರ್ಮ ಇತ್ಯಾದಿ ಕಾರಣಗಳಿಗೆ 'ವಾಚಿ'ಸುತ್ತಿದ್ದೆವು. ಸಮಾಜದಲ್ಲಿ ಸ್ಥಿರಗೊಂಡಿರುವ ಪುರುಷ ಪ್ರಧಾನ ಮೌಲ್ಯಗಳನ್ನೇ ಸಾರ್ವತ್ರಿಕಗೊಳಿಸಿ ಸಾಹಿತ್ಯದಲ್ಲೂ ಉಣಿಸಲಾಗುತ್ತಿದೆ ಎಂಬ ತೊಡಕನ್ನು ಯಾವ ಮಹಿಳೆಯೂ ಎತ್ತಲಿಲ್ಲ. ಏಕೆಂದರೆ ಸಮಾಜದ ವ್ಯವಸ್ಥೆಯಲ್ಲಿ ಅವಳ ಬದುಕು ಕೂಡ ಪುರುಷ ಪ್ರಧಾನ ಮೌಲ್ಯಗಳೇ ತನ್ನವು ಎಂದು ಸ್ವೀಕರಿಸಬೇಕಾದ ಅನಿವಾರ್ಯತೆಯಲ್ಲಿಯೇ ಇದೆ. ಆದರೆ, ಸಾಮಾಜಿಕ ಪರಿಸರಗಳಲ್ಲಿ, ಚಿಂತನೆಗಳಲ್ಲಿ ಆಗುತ್ತಿರುವ ಮುಖ್ಯ ಪಲ್ಲಟಗಳಿಂದಾಗಿ ಇಂದು ಪ್ರತಿಯೊಂದು ಸಮುದಾಯಕ್ಕೂ ಅಸ್ತಿತ್ವದ ಶೋಧನೆಯ ಯತ್ನ ಅನಿವಾರ್ಯವಾಗಿದೆ. ಮಹಿಳೆಯ ಬದುಕು ಕೂಡ ಇಂಥಾ ಒಂದು ಶೋಧದಲ್ಲಿ ತೊಡಗಿದೆ. ಈಗ ಸಾಹಿತ್ಯದ ಓದು ಮುಂಚಿನಂತೆ ರಸಾನುಭವ, ಧರ್ಮ

ಎಂಬ ರೀತಿಯಲ್ಲಿ, ಅಥವಾ ಕಲೆಗಾಗಿ ಕಲೆ, ಓದಿಗಾಗಿ ಓದು ಎಂಬ ನೆಲೆಯಲ್ಲಿ ಉಳಿಯುವುದು ಸಾಧ್ಯವಾಗುತ್ತಿಲ್ಲ. ಓದು ಅರ್ಥೈಸುವಿಕೆಯ ಆಯಾಮವನ್ನು ಅನಿವಾರ್ಯವಾಗಿ ಒಳಗೊಳ್ಳುತ್ತಿದೆ.

ಆದರೆ, ಸಮಕಾಲೀನ ಕೃತಿಯೊಂದನ್ನು ಓದುವಾಗ ಈ ಅರ್ಥೈಸುವಿಕೆಯ ಆಯಾಮವನ್ನು ಅಳವಡಿಸಿಕೊಂಡಷ್ಟೇ ಸುಸಂಗತವಾಗಿ, ಅನ್ಯಕಾಲದ ಕೃತಿಯೊಂದನ್ನು ಅಳವಡಿಸಿಕೊಳ್ಳಲು ಸಾಧ್ಯವೇ ಎಂಬುದು ದೊಡ್ಡ ಪ್ರಶ್ನೆಯೇ ಆಗುತ್ತದೆ. ಅನ್ಯಕಾಲದ ಯಾವುದೇ ಕೃತಿಯನ್ನು ನಮ್ಮ ಇಂದಿನ 'ಸ್ತ್ರೀವಾದಿ' ಕಣ್ಣಿನಿಂದ ನೋಡುವುದು ಎಂಬ ಪ್ರಶ್ನೆಯೇ ವಿಚಿತ್ರವಾದದ್ದು. ಏಕೆಂದರೆ, ಈ ಯಾವುದೇ ಕೃತಿಯನ್ನು 'ಅರ್ಥೈಸಲು' ಹೊರಟಾಗಲೂ ಪುರುಷಪ್ರಧಾನ ಮೌಲ್ಯಗಳನ್ನು ಸಾರ್ವತ್ರಿಕಗೊಳಿಸಲಾಗಿದೆ ಎಂಬ ಅಂಶವೇ ಕಾಣುವುದು. ನಮ್ಮ ಸ್ತ್ರೀವಾದಿಗಳು ಪ್ರಾಚೀನ ಸಾಹಿತ್ಯದ ಸ್ತ್ರೀಪಾತ್ರಗಳನ್ನೆಲ್ಲ ಹೆಕ್ಕಿ ತಮಗೆ ಬೇಕಾದ 'ಮಾದರಿ'ಗಳಾಗಿ ಕಡೆದು ನಿಲ್ಲಿಸುವ ಯತ್ನಗಳನ್ನು ಮಾಡಿದ್ದಾರೆ. ಇವುಗಳನ್ನು ನಮ್ಮ ಆಶಯಗಳಿಗೆ ಆಕಾರ ಕೊಟ್ಟು ಸಂತೋಷಪಡುವ ಯತ್ನಗಳೆಂದು ಭಾವಿಸಬಹುದೇ ಹೊರತು, ನಮ್ಮ ಆಶಯಗಳು ಆ ಕಾಲದ ಚಿಂತನೆಗಳಲ್ಲಿ, ಸೃಜನಶೀಲ ಅಭಿವ್ಯಕ್ತಿಗಳಲ್ಲಿ ಮಾನ್ಯತೆ ಪಡೆದಿದ್ದವು ಎಂದು ಕಲ್ಪಿಸುವುದು ಕಷ್ಟ. ಏಕೆಂದರೆ, ಸಮಾಜದಲ್ಲಿ ಇಲ್ಲದ ರೂಢಿ ಅಥವಾ ಚಿಂತನೆಗಳು ಯಾವುದೇ ಅಭಿವ್ಯಕ್ತಿಯಲ್ಲಾದರೂ ಸ್ಥಳವನ್ನು ಪಡೆಯಲಾರದು. ಹಾಗಾದರೆ ಅಲ್ಲಿ ಸ್ತ್ರೀಪರ ಚಿಂತನೆ ಅಥವಾ ಆಕೆಯ ಬಗೆಗೆ ಪ್ರೀತಿ, ಅಭಿಮಾನ ಗೌರವಗಳು ವ್ಯಕ್ತವಾಗಿಲ್ಲವೇ ಎಂದರೆ ಖಂಡಿತವಾಗಿಯೂ ವ್ಯಕ್ತವಾಗಿದೆ. ಆಗಿನ ಸಮಾಜದಲ್ಲಾಗಲೀ, ಈಗಿನ ರೂಢಿಯಲ್ಲಾಗಲೀ ಪುರುಷ ಚಿಂತನೆಯ ಈ ವ್ಯವಸ್ಥೆಯ ಕಲ್ಪನೆಯಲ್ಲಿ ಹೆಣ್ಣಿನ ಹಕ್ಕು, ಬಾಧ್ಯತೆ, ಸ್ಥಾನಮಾನಗಳನ್ನು ನಿರ್ದೇಶಿಸುವ ಹಲವಾರು ಅಂಶಗಳಿವೆ. ಈ ನಿರ್ದೇಶನಗಳಿಗೆ ಬದ್ಧವಾಗುವ ಯಾವುದೇ ಹೆಣ್ಣಿಗೂ ಈ ಸಮಾಜ ಗೌರವ, ಮರ್ಯಾದೆಗಳನ್ನು ಸಲ್ಲಿಸಿದಂತೆ ವರ್ತಿಸುತ್ತದೆ. ಆದರೆ, ವಾಸ್ತವದಲ್ಲಿ ಇದು ಅಂಥಾ ಹೆಣ್ಣಿಗೆ ಯಜಮಾನಿಕೆಯ ಭಾವದಲ್ಲಿ ನೀಡಿದ ಒಂದು ಸರ್ಟಿಫಿಕೇಟ್ ಮಾತ್ರವೇ ಆಗಿರುತ್ತದೆ. ನಾವು ಇಷ್ಟನ್ನೇ ಸ್ತ್ರೀಪರ, ಸ್ತ್ರೀವಾದಿ ಎಂದೆಲ್ಲಾ ಗ್ರಹಿಸುತ್ತೇವೆ ಎಂದಾದರೆ, ಪುರುಷ ಪ್ರಧಾನ ಮೌಲ್ಯಗಳು ಸಾರ್ವತ್ರಿಕಗೊಳ್ಳುತ್ತವೆ ಎಂಬ ಅಂಶವನ್ನು ಮರೆತು ಭ್ರಮೆಯಲ್ಲಿ ಉಳಿಯುತ್ತೇವಷ್ಟೆ.

ಈ ಹಿನ್ನೆಲೆಯಲ್ಲಿಯೇ, ಹರಿಹರನ ರಗಳೆಗಳನ್ನು ಒಬ್ಬ ಸ್ತ್ರೀವಾದಿಯಾಗಿ ಓದುವುದು ಸಾಧ್ಯವೇ ಎಂಬ ಪ್ರಶ್ನೆಗಿಂತ ನನ್ನನ್ನು ಹೆಚ್ಚಾಗಿ ಕಾಡಿದ್ದು ಇದು ಸಾಧುವೇ ಎಂಬ ಪ್ರಶ್ನೆ. ಏಕೆಂದರೆ, ಹರಿಹರ ಮುಖ್ಯವಾಗಿ ಭಕ್ತಕವಿ. ತನ್ನ ಭಕ್ತಿಯ ಅಭಿವ್ಯಕ್ತಿಗೆ, ಭಕ್ತ-ಭಕ್ತೆಯರ ಜೀವನ ಚರಿತ್ರೆಗಳು ಕೇವಲ ಮಾಧ್ಯಮಗಳಷ್ಟೇ. ಭಕ್ತ-ಭಕ್ತೆ ಎಂಬ ಲಿಂಗ ತಾರತಮ್ಯ ಅವನಿಗೆ ಅಗತ್ಯವಿಲ್ಲ. ಹೀಗಿರುವಾಗ, ಈ ಅರ್ಥವನ್ನು ಹಚ್ಚಿ ಅವನ ಕೃತಿಗಳನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ಓದಲು ಹೊರಡುವುದು ಆಭಾಸವೆನಿಸುತ್ತದೆ. ಹರಿಹರನ ರಗಳೆಗಳಲ್ಲಿ ಮಹಿಳೆಯರ ಜೀವನ ಚರಿತ್ರೆಗಳನ್ನೇ ಕೇಂದ್ರವಾಗಿರಿಸಿಕೊಂಡವು ಎಂಬ ಅರ್ಥದಲ್ಲಿ ಒಂದು ಪಟ್ಟಿಯನ್ನು ಮಾಡಬಹುದು. ಕೋಳೂರ ಕೊಡಗೂಸು, ನಿಂಬಿಯಕ್ಕ, ಅಮ್ಮವ್ವೆ, ವೈಜಕವ್ವೆ, ಹರೂರ ಹೆಣ್ಣು, ಮಹಾದೇವಿಯಕ್ಕ, ಮಲುಹಣಿ, ಕಾರಿಕಾಲಮ್ಮ, ಯಸ್ಯಜ್ಞಾನದೇವಿ

ಮೊದಲಾದ ಹಲವಾರು ಶರಣೆಯರು ಹರಿಹರನ ಮುಖ್ಯ ಕಥಾವಸ್ತುಗಳೇ ಆಗಿದ್ದಾರೆ. ಆದರೆ ಈ ಯಾವ ಮಹಿಳೆಯರ ಜೀವನ ಚಿತ್ರಣವನ್ನೂ ಮಹಿಳೆಯ ಬದುಕಿನ ವೈಶಿಷ್ಟ್ಯಗಳಿಂದು ನೋಡುವುದು ಸಾಧ್ಯವಾಗುವುದಿಲ್ಲ. ಆಕೆ ಇತರ ಭಕ್ತರಂತೆಯೇ ಅದೇ ಸಮಾನ ನೆಲೆಯಲ್ಲಿ ನಿಲ್ಲುವ ಒಬ್ಬ ಭಕ್ತೆ ಅಷ್ಟೆ.

ಭಕ್ತಿ ಎಂಬುದು ಅತ್ಯಂತ ವೈಯಕ್ತಿಕ ಗುಣದ್ದು. ಇದರ ಅಭಿವ್ಯಕ್ತಿಯೂ ವೈಯಕ್ತಿಕ ನೆಲೆಯದಾದಾಗ ಸಮಸ್ಯೆ ಇಲ್ಲ. ಆದರೆ, ನುಡಿ, ಮಾತು, ಸಾಹಿತ್ಯಗಳಂತಹ ಮಾಧ್ಯಮದಲ್ಲಿ ಭಕ್ತಿ ಅಭಿವ್ಯಕ್ತಿಗೊಂಡಾಗ ಅದು ಸಾರ್ವಜನಿಕವೆನಿಸಿ ವಿಚಿತ್ರದ ಸವಾಲುಗಳನ್ನು ಎದುರಿಸುತ್ತದೆ. ಆ ಪಾತ್ರಗಳಲ್ಲಿ ಕಾಣಿಸಿಕೊಂಡ ಭಕ್ತ-ಭಕ್ತೆಯರು ಈ ಸವಾಲುಗಳನ್ನು ಎದುರಿಸಬೇಕಾದ ಹೊಣೆಗಾರರಾಗಿ ಬಿಡುತ್ತಾರೆ. ಉದಾಹರಣೆಗೆ, ಮಹಾದೇವಿಯಕ್ಕನ ಜೀವನ ಚರಿತ್ರೆಯನ್ನು ಬರೆಯುತ್ತಿರುವ ಕವಿ, ಕೌಶಿಕನೊಂದಿಗೆ ಇನ್ನು ಬದುಕನ್ನು ನಡೆಸಲಾರೆ ಎಂಬ ಮನಸ್ಥಿತಿಯಲ್ಲಿ ಅಕ್ಕ ಗಂಡನ ಮನೆಯನ್ನು ತೊರೆದು ಹೊರಟ ಪ್ರಸಂಗವನ್ನು ಹೇಗೆ ಚಿತ್ರಿಸುತ್ತಾನೆ ಎಂಬುದು, ಆ ಸಂದರ್ಭದಲ್ಲಿ ಒಬ್ಬ ಹೆಣ್ಣಿನ ವರ್ತನೆ ಹೇಗಿರಬಹುದು ಎಂಬ ಅವನ ಕಲ್ಪನೆಯನ್ನು ಆಧರಿಸಿರುತ್ತದೆ. ಆದರೆ, ಈ ಕಲ್ಪನೆ ಅವನಲ್ಲೇ ಹುಟ್ಟಿ ಬೆಳೆದು ಆಕಾರ ತಳೆದಿರುವುದಿಲ್ಲವೆಂಬುದು ಗಮನಾರ್ಹ. ತನ್ನ ಸಮಕಾಲೀನ ಸಾಮಾಜಿಕ ಚಿಂತನೆಯಲ್ಲಿ, ಇಲ್ಲಿನ ಬದುಕಿನಲ್ಲಿ ರೂಢಿಯಲ್ಲಿರುವಂತೆ ಒಬ್ಬ ಹೆಣ್ಣಿಗೆ ಒಪ್ಪಿತವಾದ ವರ್ತನೆಯನ್ನಷ್ಟೇ ಅವನು ಚಿತ್ರಿಸಿರುತ್ತಾನೆ. ಅಕ್ಕ ಉಟ್ಟ ಸೀರೆಯನ್ನು ಕಿತ್ತೊಗೆದು ಬೆತ್ತಲೆ ಹೊರಟುಬಿಟ್ಟಳೆಂಬ ಕಲ್ಪನೆ ತೀರಾ ಪ್ರಚಲಿತವಾದದ್ದು. ಒಬ್ಬ ಹೆಣ್ಣಾಗಿ ನಾನಂತೂ ಇದನ್ನು ಅಕ್ಷರಶಃ ಸತ್ಯ ಎಂದು ಒಪ್ಪಲು ಸಾಧ್ಯವೇ ಇಲ್ಲ. ಈ ಕುರಿತು ಬಂದ ಸಾಹಿತ್ಯದಲ್ಲಿ ಮಾತ್ರ ಇದೊಂದು ಅಧಿಕೃತ ಮಾಹಿತಿಯೇ ಎಂಬಂತೆ ದಾಖಲಾಗಿದೆ. ನಮ್ಮ ಸಮಕಾಲೀನ ಸಾಹಿತ್ಯ ಸಿನಿಮಾಗಳಲ್ಲೂ ಇದು ಕಣ್ಣಿಗೆ ಕಟ್ಟುವ ಚಿತ್ರವಾಗಿ, ಅಕ್ಕ ಹಾಗೆ ಬೆತ್ತಲಾಗಿ ಬೀದಿಯಲ್ಲಿ ನಡೆದುಹೋದದ್ದೇ ನಿಜ ಎನಿಸುವಂತೆ ಮಾಡುತ್ತದೆ. ಒಂದು ವೇಳೆ ಒಂದು ಹೆಣ್ಣು ಹೀಗೆ ವರ್ತಿಸಿದಳೆಂದೇ ಭಾವಿಸೋಣ. ಇಂಥಾ ಅವಳ ವರ್ತನೆಗೆ ಸಮಾಜದ ಪ್ರತಿಕ್ರಿಯೆ ಏನು ಎಂಬುದಂತೂ ಇನ್ನಷ್ಟು ವಿಚಿತ್ರವಾಗಿ ನಮ್ಮ ಸಾಹಿತ್ಯದಲ್ಲಿ ದಾಖಲಾಗಿದೆ. ಬೆತ್ತಲಾದ ಅಕ್ಕ ತನ್ನ ಸಮೃದ್ಧ ಕೂದಲಿನಿಂದ ತನ್ನ ಶೀಲವನ್ನು ಮುಚ್ಚಿಕೊಂಡು ನಡೆದಳಂತೆ. ಆಕೆಗೆ ಹಾಗೆ ಸಮೃದ್ಧ ಕೂದಲು ಇದ್ದಿರಲಿಲ್ಲವೆಂದರೆ ಇನ್ನೇನು ಕಲ್ಪನೆಯಲ್ಲಿ ಆಕೆಯ 'ಶೀಲ'ವನ್ನು ಕಾಯಲಾಗುತ್ತಿತ್ತೋ ಎಂಬ ಕುಚೇಷ್ಟೆಯ ತರ್ಕ ತೋರುತ್ತದೆ. ಅಕ್ಕ ಬೆತ್ತಲಾಗಿ ನಡೆದ ಪ್ರಕರಣ ಸಂವೇದನಾಶೀಲ ಸಾಹಿತ್ಯದ ಅಭಿವ್ಯಕ್ತಿಯಲ್ಲಿ ಆಕೆಯ ವ್ಯಕ್ತಿತ್ವವನ್ನು 'ಧ್ವನಿಸುವ' ಕೆಲಸ ಮಾಡಬೇಕಾಗಿತ್ತು. ಅದು ಹಾಗೆ ಆಗಲಿಲ್ಲ. ಬದಲಿಗೆ, ಆಕೆ ಬೆತ್ತಲಾಗಿ ನಡೆದದ್ದೇ ವಾಸ್ತವ ಸಂಗತಿ ಎನಿಸಿಬಿಟ್ಟಿತು. ಆದರೆ, ಒಬ್ಬ ಮಹಿಳೆಯು ಇಷ್ಟೊಂದು ತೀವ್ರವಾಗಿ ಸಮಾಜಕ್ಕೆ ತನ್ನ ಪ್ರತಿರೋಧವನ್ನು ಸಲ್ಲಿಸಿರಬಹುದು ಎಂಬ ಆಘಾತವನ್ನು ತಡೆದುಕೊಳ್ಳುವುದು ಕೂಡ ಆ ಸಮಾಜಕ್ಕೆ ಕಷ್ಟವಾಯಿತು. ಆಕೆಯ ಮಾನಸಂರಕ್ಷಣೆಗಾಗಿ ಸಮೃದ್ಧ ಕೂದಲನ್ನು ಕಲ್ಪಿಸಲಾಯಿತು. ಇತ್ತೀಚೆಗೆ ಸಿರಿಗೆರೆ ಶಿವಮೂರ್ತಿ ಶಿವಾಚಾರ್ಯ ಸ್ವಾಮೀಜಿಯವರು ಅಕ್ಕನ ಜೀವನ ಚಿತ್ರಣ ಮಾಡುವ ಸಾಹಿತ್ಯ ಅಸಹಜ ಕಲ್ಪನೆಗಳ ಕಣಜವಾಗಿದೆ ಎಂದು ಹೇಳಿ, ಮುಖ್ಯ ಉದಾಹರಣೆಯಾಗಿ ಅಕ್ಕಮಹಾದೇವಿ ರಗಳೆ ಹಾಗೂ

ಶೂನ್ಯಸಂಪಾದನೆ ಕೃತಿಗಳಿಂದ ಆಯ್ದು ಪ್ರಸಂಗಗಳನ್ನು ವ್ಯಾಖ್ಯಾನಿಸಿದರು. ಹರಿಹರನ ರಗಳೆಯ ಆರನೇ ಸ್ಥಲದ ಕೊನೆಯಲ್ಲಿ ಒಂದು ಸನ್ನಿವೇಶ ಬರುತ್ತದೆ. ಕೌಶಿಕ ಮತ್ತು ಅಕ್ಕಮಹಾದೇವಿಯರು ಮಲಗುವ ಕೋಣೆಗೆ ಅಕ್ಕನ ಗುರುಗಳು ಶಿಷ್ಯಸಮುದಾಯದೊಂದಿಗೆ ನೇರವಾಗಿ ಪ್ರವೇಶಿಸುತ್ತಾರೆ, ಗುರುಭಕ್ತಿಯಲ್ಲಿ ಮೈಮರೆತ ಅಕ್ಕ ಬೆತ್ತಲೆಯಾಗಿಯೇ ಗುರುಗಳಿಗೆ ನಮಿಸುತ್ತಾಳೆ ಎಂಬುದು ಪ್ರಸಂಗ. ಸ್ವಾಮೀಜಿಗಳಿಗೆ ಬಂದ ಪ್ರಶ್ನೆಗಳೆಂದರೆ ಅರಮನೆಯ ಶಯ್ಯಾಗೃಹಕ್ಕೆ ಗುರುಗಳು ದಿಢೀರನೆ ಪ್ರವೇಶಿಸಲು ಹೇಗೆ ಸಾಧ್ಯ, ಅಲ್ಲಿ ಕಾವಲು ಇರಲಿಲ್ಲವೇ, ಗುರುಗಳಿಗೆ ಉಚಿತಾನುಚಿತ ವಿವೇಕವಿರಲಿಲ್ಲವೇ, ಅಕ್ಕನ ಭಕ್ತಿಯನ್ನು ಸಾದರ ಪಡಿಸಲು ಇಂಥಾ ಕಲ್ಪನೆಯೇ ಬೇಕಿತ್ತೇ ಎಂಬ ರೀತಿಯವು. ಶೂನ್ಯ ಸಂಪಾದನೆಯ ಇನ್ನೊಂದು ಪ್ರಸಂಗವನ್ನು ಉದಾಹರಿಸಿದ್ದಾರೆ. ಹಲಗೆಯಾರ್ಯನ ಶೂನ್ಯಸಂಪಾದನೆಯಲ್ಲಿ ಕೌಶಿಕನಿಂದ ಬಿಡಿಸಿಕೊಂಡು ಅಕ್ಕ ಉಡುತಡಿಯಿಂದ ಹೊರಟು ಕಲ್ಯಾಣಕ್ಕೆ ಬರುವ ಸಂದರ್ಭದ ಚಿತ್ರಣ. ಅಕ್ಕನ ಸೌಂದರ್ಯವನ್ನು ನೋಡಿ ಕಿನ್ನರಿ ಬೊಮ್ಮಯ್ಯ ಅಕ್ಕನೊಂದಿಗೆ ಶೃಂಗಾರ ಸಲ್ಲಾಪ ಆರಂಭಿಸುತ್ತಾನೆ. ಅಕ್ಕ ಆತನೊಂದಿಗೆ ಸಹೋದರ ಭಾವದಲ್ಲಿಯೇ ವ್ಯವಹರಿಸಿದರೂ ಕಿನ್ನರಿ ಬೊಮ್ಮಯ್ಯ ಆಕೆಯ ಕೈ ಹಿಡಿಯಲು ಮುಂದಾಗುತ್ತಾನೆ. ಆಕೆಯಲ್ಲಿ ದೇಹಾಭಿಮಾನವಿದೆಯೇ ಎನ್ನುವುದನ್ನು ಪರೀಕ್ಷಿಸಲು ಆತ ಆಕೆಯ ಅಂಗಾಂಗಗಳನ್ನು ಮುಟ್ಟಿ ಮುಟ್ಟಿ ನೋಡುತ್ತಾನೆ ಎಂಬುದು ವಿವರ. ಸ್ವಾಮೀಜಿ ಅಕ್ಕನನ್ನು ಚಿತ್ರಿಸಲು ಇಂಥಾ ಅಸಹಜ ಕಲ್ಪನೆಯ ಅಗತ್ಯವಿದೆಯೇ ಎಂದು ಪ್ರಶ್ನಿಸಿದರು. ಸ್ವಾಮೀಜಿಯವರ ಈ ಇಡೀ ವ್ಯಾಖ್ಯಾನ ಪತ್ರಿಕೆಯೊಂದರಲ್ಲಿ ವರದಿಯಾದದ್ದು. ಡಾ|| ಶಿವಮೂರ್ತಿ ಸ್ವಾಮೀಜಿಯವರು ಸಂಪ್ರದಾಯವಾದದ ಹಟವಾದಿಗಳಲ್ಲ. ನಮ್ಮ ಪ್ರಸ್ತುತಕ್ಕೆ ಅನ್ವಯವಾಗುವಂತೆ ಪ್ರಾಚೀನ ಚಿಂತನೆಗಳನ್ನು ಸಮನ್ವಯಗೊಳಿಸಬಲ್ಲ ವಿಶಿಷ್ಟ ಪರಂಪರೆಯವರು ಎಂಬುದು ಅವರ ನಡೆ ನುಡಿ, ಭಾಷಣಗಳಲ್ಲಿ ನಿರಂತರವಾಗಿ ವ್ಯಕ್ತವಾಗುತ್ತಿದೆ ಎಂಬುದು ನಿಜ. ಆದರೂ, ಎಂಥಾ ಉನ್ನತ ಉದ್ದೇಶದ, ಮುಕ್ತ ಹೃದಯದ ಚಿಂತನೆಗಳು ಕೂಡ ಎಷ್ಟೋ ಸಲ ಶತಮಾನಗಳ ರೂಢಿಯ ಪುರುಷ ಚಿಂತನೆಯಿಂದ ಮುಕ್ತವಾಗುವುದು ಕಷ್ಟ ಎಂಬುದನ್ನು ಹೇಳಲಷ್ಟೇ ಅವರ ಈ ವ್ಯಾಖ್ಯಾನವನ್ನು ಇಲ್ಲಿ ಪ್ರಸ್ತಾಪಿಸಿದ್ದೇನೆ. ಮಹಾದೇವಿಯ ಮಾನವನ್ನು ಸಂರಕ್ಷಿಸಲು ಸಮೃದ್ಧ ಕೂದಲಿನ ಕಲ್ಪನೆ ಮಾಡಿದ್ದಕ್ಕೂ, ಇಲ್ಲಿನ ವ್ಯಾಖ್ಯಾನಕ್ಕೂ ಮೂಲಭೂತ ವ್ಯತ್ಯಾಸವೇನಿಲ್ಲ. ಇಲ್ಲಿಯೂ ಅಕ್ಕನ ಮಾನರಕ್ಷಣೆಯೇ ಮುಖ್ಯ ಅವಧಾನವಾಗಿದೆ. ಅಸಹಜ ಕಲ್ಪನೆಗಳಿಂದಾಗಿ ಆಕೆಯ ಮಾನಕ್ಕೆ ಒದಗಿದ ನಷ್ಟದ ಬಗ್ಗೆ ಸಿಟ್ಟು ಇದೆ. ಇವೆಲ್ಲದರ ಹಿಂದೆ ಹೆಣ್ಣಿನ ದೇಹ, ಅವಳ ಶೀಲಮಾನಗಳನ್ನು ಕುರಿತಂತೆ ಈ ಸಮಾಜವು ಜಾರಿಯಲ್ಲಿಟ್ಟಿರುವ ನಿರ್ದೇಶಕಗಳ ಬಗೆಗೆ ಗೌರವಯುತ ಒಪ್ಪಿಗೆ ಹೊಂದಿರುವ ಮನಸ್ಸು ಚಿಂತನೆ ನಡೆಸಿದೆ ಎಂಬುದು ಮುಖ್ಯವಾದ ಮಾತು.

ಈ ಪ್ರಸಂಗಗಳನ್ನು ಒಬ್ಬ ಮಹಿಳೆ ಹೇಗೆ ಗ್ರಹಿಸಬಹುದು ಎಂಬ ಕುತೂಹಲ ನನ್ನದು. ಪುರುಷ ಚಿಂತನೆಗೇ ಒಗ್ಗಿಕೊಂಡು ಬಿಟ್ಟ ಬುದ್ಧಿಜೀವಿ ಮಹಿಳೆಗೆ ಪುರುಷ ತರ್ಕದಲ್ಲಿ ಲೋಪ ಕಾಣದಿರುವುದೂ ಸಾಧ್ಯ. ಆದರೆ, ಒಬ್ಬ ಸ್ತ್ರೀವಾದಿಯಾಗಿ ಇಡೀ ಈ ಅಕ್ಕನ ಬೆತ್ತಲೆ ಪ್ರಕರಣ ಹಾಗೂ ಅದರ ಸುತ್ತಲಿನ ಕಲ್ಪನೆ, ವ್ಯಾಖ್ಯಾನಗಳನ್ನು ಭಿನ್ನವಾಗಿ ಗ್ರಹಿಸುವ ಅಗತ್ಯವಿದೆ ಎನಿಸುತ್ತದೆ.

ಎಷ್ಟೋ ಶಿವಭಕ್ತರು ಬೆತ್ತಲೆ ನಡೆದ ಅಕ್ಕನಿಗಿಂತಲೂ ಉನ್ಮತ್ತರಾಗಿ ವರ್ತಿಸಿದ ಕತೆಗಳಿವೆ. ತಮ್ಮ ಪ್ರೀತಿಯ ಕರುಳಿನ ಕುಡಿಯನ್ನು ಕತ್ತರಿಸಿ ಹೋಳುಗಳನ್ನಾಗಿ ಮಾಡಿ, ಹದವಾಗಿ ಬೇಯಿಸಿ ಅಟ್ಟು ಶರಣರ ಎಲೆಯಲ್ಲಿ ಬಡಿಸಿದವರು, ಹೆಂಡತಿಯನ್ನು ಶರಣರ ಭೋಗಕ್ಕೆ ಒದಗಿಸಿದವರು ಇದ್ದಾರೆಂದ ಮೇಲೆ, ಬೆತ್ತಲಾಗುವುದು ಅಥವಾ ಇನ್ನಿತರ ಅಂಥಾ ಹುಚ್ಚಿಗೆ ಸಮೀಪದ ವರ್ತನೆಗಳನ್ನು ತೋರುವ ಭಕ್ತರ ರೀತಿ ತೀರಾ ಸಾಮಾನ್ಯವೇ. ಆದರೆ, ಪುರುಷ ಭಕ್ತರ ಈ ಯಾವ ವರ್ತನೆಗಳನ್ನೂ ಅನುಚಿತ ಎಂದೂ, ಅಸಹಜ ಎಂದೂ ಯಾರೂ ಹೇಳಿಲ್ಲ. ಅದನ್ನು ಭಕ್ತಿಯ ಉನ್ಮಾದ ಎಂದು ಕೂಡ ಹೇಳಿಲ್ಲ. ಬದಲಿಗೆ, ಭಕ್ತಿಯ ಪರಾಕಾಷ್ಠೆ ಈ ಲೋಕದ ಹಂಗನ್ನು ತೊರೆದ ಪರಿಪೂರ್ಣ ತಾತ್ವಿಕ ಮನಸ್ಥಿತಿ ಎಂದೇ ಕೊಂಡಾಡಲಾಗಿದೆ. ಆದರೆ, ಅಕ್ಕ ಬೆತ್ತಲಾದದ್ದು ಮಾತ್ರ ಈ ಧ್ವನಿಸಂಕೇತವನ್ನು ಪಡೆದುಕೊಳ್ಳುವುದಿಲ್ಲ. ಬೆತ್ತಲಾಗಿರುವುದೇ ನಿಜವಾದರೆ, ಕೇಶರಾಶಿಯಿಂದ ಶೀಲವನ್ನು ಮುಚ್ಚಿಕೊಳ್ಳುವ ಉದ್ದೇಶವೇನು ಎಂಬ ಪ್ರಶ್ನೆಗೆ ಜ್ಞಾನಿಗಳು ತುಂಬಿದ ಸಭೆಯೊಳಗೆ ಆಕೆ ಉತ್ತರಿಸಬೇಕಾಗುತ್ತದೆ. ಆಕೆಯೇನೋ 'ಹೀಗೆ ಮಾಡಿದ್ದು ನನ್ನ ಸ್ವಂತದ ರಕ್ಷಣೆಗಾಗಿ ಅಲ್ಲ, ಎದುರಿನ ಪುರುಷ ಎದೆಗುಂದಬಾರದೆಂದು ಮಾಡಬೇಕಾಯಿತು' ಎಂಬ ದಿಟ್ಟ ಉತ್ತರವನ್ನೇನೋ ಕೊಟ್ಟಳು. ಈ ಉತ್ತರವನ್ನು ಆಕೆಯ 'ಪ್ರತಿಭಟನೆ' ಎಂದು ಗುರುತಿಸುವ ಗೋಜಿಗೂ ಆ ಪುರುಷ ಸಮುದಾಯ ಹೋಗಲಿಲ್ಲ. ಹಾಗೆ ಗುರುತಿಸಿದರೆ ಸಾಮಾಜಿಕ ನ್ಯಾಯದ ಪ್ರಶ್ನೆಯನ್ನು ಎದುರಿಸಬೇಕಾಗುತ್ತದೆ. ಇದು ಅಸಂಭವವೇ ಆಗಿರುವಾಗ ಅವಳ ವರ್ತನೆಗೆ, ಪ್ರತಿಕ್ರಿಯೆಗೆ ತನಗೆ ಅನುಕೂಲವಾಗುವಂತೆ ಅರ್ಥ ಹೆಚ್ಚುವುದು ಸುಲಭದ ಉಪಾಯವಾಗಬಹುದು. ತನಗೆ ಕುರುಡು ಗಂಡನನ್ನು ಕಟ್ಟುತ್ತಿದ್ದಾರೆಂದು ತಿಳಿದ ಕ್ಷಣದಲ್ಲಿ ಗಾಂಧಾರಿಗೆ ಈ ಬಲೆಯಿಂದ ತಪ್ಪಿಸಿಕೊಳ್ಳಬಹುದೆಂಬ ಯಾವ ವಾಸ್ತವ ಮಾರ್ಗವೂ ಉಳಿದಿರಲಿಲ್ಲ. ಪ್ರತಿಭಟನೆಯಾಗಿ ತನ್ನ ಕಣ್ಣನ್ನೇ ಕಪ್ಪುಬಟ್ಟೆಯಿಂದ ಕಟ್ಟಿಕೊಂಡಳು. ದ್ರೌಪದಿ ತನಗೆ ಒಪ್ಪಿಗೆಯಿಲ್ಲದ ವಿವಾಹದ ನಿಯಮಗಳಲ್ಲಿ ಸಿಲುಕಿ ಅಗ್ನಿಕನ್ಯೆಯೇ ಆದರೂ ಪಾರಾಗುವ ದಾರಿಯೇನೂ ಉಳಿದಿರಲಿಲ್ಲ. ತನ್ನ ಬದುಕಿನುದ್ದಕ್ಕೂ ಪ್ರತಿಭಟನೆಯನ್ನು ವ್ಯಕ್ತಮಾಡಿದಳು. ಆದರೆ, ಹೆಣ್ಣಿನ ಪ್ರತಿಭಟನೆಯನ್ನು ಗುರುತಿಸುವುದೆಂದರೆ ಸಾಮಾಜಿಕವಾಗಿ ಅದಕ್ಕೊಂದು ಚಲಾವಣೆಯೇ ದೊರೆತು ಬಿಡುವ ಅಪಾಯ. ಈ ಪ್ರತಿಭಟನೆಯನ್ನು ಆ ಪ್ರಕರಣಕ್ಕೆ ಸಂಬಂಧಿಸಿದಂತೆ ಅಣಗಿಸಲಾಗದಾದರೂ, ಮಹಿಳಾ ಸಮುದಾಯಕ್ಕೆ ಅದು ಮಾದರಿಯಾಗಿ ಒದಗಿಬಿಡುವ ಅಪಾಯವನ್ನಾದರೂ ತಡೆಯಲೇಬೇಕು. ಈಗ ಗಾಂಧಾರಿ, ದ್ರೌಪದಿಯರ ಪ್ರತಿರೋಧದ ಅಭಿವ್ಯಕ್ತಿಯನ್ನು ಪಾತಿವ್ರತ್ಯ, ತ್ಯಾಗ, ಸಹನೆಗಳೆಂದು ಅರ್ಥೈಸಲಾಗುತ್ತದೆ. ಅಕ್ಕನ ಪ್ರತಿಭಟನೆಯನ್ನು ಭಕ್ತಿ, ಅನುಭಾವಗಳ ದಿಕ್ಕಿನಲ್ಲಿ ಹೊರಳಿಸಲಾಗುತ್ತದೆ. ಈ ಮಾತನ್ನು ಹೇಳುವಾಗ, ಅಕ್ಕನ ಭಕ್ತಿ ಅನುಭಾವಗಳ ಸಾಧನೆಗಳನ್ನು ಕುರಿತು ಹಗುರವಾದ ಪರಿಗಣನೆ ಖಂಡಿತವಾಗಿಯೂ ಇಲ್ಲ. ಅಂದಿನ ತನ್ನ ಸಾಮಾಜಿಕ ಸಂದರ್ಭದಲ್ಲಿ, ಒಲ್ಲದ ಗಂಡನೊಂದಿಗೆ ಸಂಸಾರವನ್ನು ನಡೆಸಬೇಕಾಗಿ ಬಂದ ಒತ್ತಾಯಕ್ಕೆ, ಆ ಗಂಡನನ್ನು ತ್ಯಜಿಸಿ ಒಂಟಿಯಾಗಿಯೇ ಸಾಗುವೆನೆಂಬ ಪ್ರತಿಭಟನೆಯನ್ನು, ವೈಯಕ್ತಿಕ ನೆಲೆಯಲ್ಲಿಯೇ ಆಗಲಿ, ಒಡ್ಡಿದಳು. ಈ ಪ್ರತಿಭಟನೆಯನ್ನು ನಗಣ್ಯವಾಗಿ ಕಂಡ ಸಮಾಜದ ನಡುವೆಯೇ ಉಳಿದು, ಅದು ಹಾಕಿದ ವಿವಾಹ ಎಂಬ ನಿಯಮವನ್ನು ಮುರಿದು ಆ ವಿವಾಹಕ್ಕೆ ತನ್ನದೇ ವ್ಯಾಖ್ಯಾನವನ್ನು ಕಲ್ಪಿಸಿ

ಬದುಕಿದಳು. ಒಲ್ಲದ ಗಂಡನನ್ನು ತ್ಯಜಿಸುವುದೇ ದೊಡ್ಡ ಸಾಹಸವೆನಿಸುವಾಗ, ಆಯ್ಕೆಯ ಗಂಡನನ್ನು ಹುಡುಕುವ ಮಾತು ನಿರರ್ಥಕವೇ ಸರಿ. ಆ ಹುಡುಕಾಟಕ್ಕೆ ವಾಸ್ತವದ ಬೇರುಗಳು ಇಲ್ಲ. ಏನೆಲ್ಲ ಸಾಹಸ ಮಾಡಿದರೂ ಹೆಂಗಸು ತನ್ನ ಆತ್ಯಂತಿಕ ಬಿಡುಗಡೆಯನ್ನು ಕಲ್ಪಿಸುವುದು ಇಂದಿಗೂ ಕಷ್ಟದ ಸಂಗತಿಯೇ. ದಿಟ್ಟ ಹೆಂಗಸು ಕೊನೆಯ ಪಕ್ಷ ತನ್ನ ಜಂಜಡದ ಬದುಕಿನಿಂದಲಾದರೂ ಬಿಡುಗಡೆಯನ್ನು ಪಡೆಯುವ ಸಾಹಸ ಮಾಡಿಯಾಳು. ಸಾಧಾರಣವಾಗಿ ಹೆಣ್ಣುಮಕ್ಕಳು ಲೋಕದ ತಾರತಮ್ಯಗಳನ್ನೂ, ಹೆಣ್ಣಿನ ಸ್ಥಿತಿಗತಿಗಳ ವೈರುಧ್ಯಗಳನ್ನೂ ತಿಳಿದು ಅನುಭವಿಸಿ, ಅದಕ್ಕೊಂದು ಹೊರ ಮಾರ್ಗವೆಂಬಂತೆ ಕನಸಿನ ಲೋಕವನ್ನು ಕಟ್ಟಿಕೊಳ್ಳುತ್ತಾರೆ. ಸಾಧಾರಣ ಹೆಣ್ಣುಮಕ್ಕಳು ಹೀಗೆ ಹಗಲುಗನಸುಗಳನ್ನು ಕಾಣುವಾಗ ಅದಕ್ಕೆ ರಂಜಕತೆ ಇರುತ್ತದೆ, ಯಾವುದೇ ಆಳವಿಲ್ಲದೆ ಹರಿಯುತ್ತಲೇ ಸಾಗುವ ವ್ಯಾಪಕತೆ ಇರುತ್ತದೆ. ಇವಕ್ಕೆ ವಾಸ್ತವದ ಬೇರುಗಳೇ ಇಲ್ಲವಾದ್ದರಿಂದ, ಇವು ಎಂದಿದ್ದರೂ ಕುಸಿದುಬೀಳುವ ಮರಳ ಗೂಡುಗಳಷ್ಟೇ. ಈ ಕಟು ವಾಸ್ತವದ ಎದುರಲ್ಲೇ ನಿಂತು ಕೂಡ, ತನ್ನ ಆತ್ಮಗೌರವವನ್ನು ಕಾಯ್ದುಕೊಳ್ಳುವ ನಿಲುವನ್ನು ತಳೆಯುವುದು ಅಪರೂಪದ ಅಕ್ಕಮಹಾದೇವಿಯರಂತಹ ಗಟ್ಟಿ ಹೆಣ್ಣುಗಳಿಗಷ್ಟೇ ಸಾಧ್ಯವಾಗುತ್ತದೆ. ಈ ಹೆಣ್ಣುಗಳು ಕಾಣುವ ಕನಸುಗಳು ಪ್ರತಿಭಟನೆಯ ಒಂದು ವಿಧಾನವೇ ಆಗಬಹುದು. ಸಾಮಾಜಿಕ ನ್ಯಾಯ ಎಂಬುದು ಹೆಣ್ಣಿಗೆ ದಕ್ಕಲಾರದ ಸಂಗತಿಯಾಗಿಬಿಟ್ಟಾಗ, ಆತ್ಮದಂಡನೆಯ ಮಾರ್ಗವೇ ಪ್ರತಿರೋಧದ ಅಭಿವ್ಯಕ್ತಿಯಾಗಬೇಕಾಗುತ್ತದೆ. ಸಮಾಜವೇನೂ ಈ ಪ್ರತಿರೋಧಕ್ಕೆ ಸಕಾರಾತ್ಮಕವಾಗಿ ಸ್ಪಂದಿಸುತ್ತದೆಂದಿಲ್ಲ. ಅದನ್ನು ನಿರ್ಲಕ್ಷಿಸಲು, ಪಕ್ಕಕ್ಕೆ ಸರಿಸಲು, ಅಣಗಿಸಲು ಸಕಲ ಪ್ರಯತ್ನಗಳನ್ನೂ ಮಾಡುತ್ತದೆ. ಅಕ್ಕನಂತಹ ಗಟ್ಟಿ ವ್ಯಕ್ತಿತ್ವದ ಹೆಣ್ಣನ್ನು ಹೀಗೆ ಹಗುರವಾಗಿ ಕಾಣಲು ಸಾಧ್ಯವಾಗುವುದಿಲ್ಲ. ಸಮಾನ ನೆಲೆಯಲ್ಲಿ ಕಾಣುವುದು ಅನಿವಾರ್ಯವೇ ಆಗಿಬಿಡುತ್ತದೆ. ಆದರೂ ಸಮಯ ಸಿಕ್ಕಾಗಲೆಲ್ಲ ಧೃತಿಗೆಡಿಸುವ ಪ್ರಯತ್ನವನ್ನಾದರೂ ಮಾಡುತ್ತಲೇ ಇರುತ್ತದೆ. ಅಕ್ಕನ ಆತ್ಮಬಲವಿದ್ದರೆ ಮಾತ್ರ ಹೆಣ್ಣು ಕಟ್ಟಕಡೆಯವರೆಗೂ ತನ್ನ ಪ್ರತಿಭಟನೆಯನ್ನು ಸಂಗಾತವಾಗಿಸಿಕೊಳ್ಳುತ್ತದೆ.

ಇಂಥ ಬಿಗುವಾದ ಸಮಾಜ ವ್ಯವಸ್ಥೆಯ ಚೌಕಟ್ಟಿನಲ್ಲಿಯೇ ನಮ್ಮೆಲ್ಲಾ ಜ್ಞಾನವಲಯಗಳೂ ಕೆಲಸ ಮಾಡುತ್ತಿರುತ್ತವೆ. ಹರಿಹರನಂತಹ ಭಕ್ತನಿಗೆ ಈ ಚೌಕಟ್ಟಿನ ಹಂಗೇನೋ ಇಲ್ಲ. ಆದರೆ ಆತನಿಗೆ ಭಕ್ತಿಯಲೋಕದಿಂದ ಆಚೆಗೆ ಪ್ರಪಂಚ ಎಂಬುದಕ್ಕೆ ಅರ್ಥವೂ ಇಲ್ಲ. ಹಾಗಾಗಿ, ಯಾವುದೇ ಒಂದು ಸಮುದಾಯದ ಪರವಾಗಿ ಅವನ ಚಿಂತನೆ ಹರಿಯುವುದೂ ಇಲ್ಲ. ಆದರೂ, ಅವನು ಸಮಾಜ ಜೀವಿಯಾಗಿರುವ ಒಂದೇ ಕಾರಣದಿಂದ ರೂಢಿಗತ ಸಾಮಾಜಿಕ ಚಿಂತನೆಗಳು ಅವನಲ್ಲಿ ನೆಲೆ ಪಡೆದಿವೆ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಒಬ್ಬ ಪುರುಷನಾಗಿ ಅವನೊಳಗೆ ಒಪ್ಪಿತ ರೂಢಿಗತ ಪುರುಷ ಚಿಂತನೆಗಳಿವೆ. ಭಕ್ತಿಯ ಹೊರತಾಗಿ ಇನ್ನೇನನ್ನೂ ವಿಶೇಷವಾಗಿ ಚಿಂತಿಸುವ ಆಕಾಂಕ್ಷೆಯೂ ಇಲ್ಲದ ಆತನ ಅಭಿವ್ಯಕ್ತಿಯಲ್ಲಿ ಹೆಚ್ಚಿನ ಯಾವುದೇ ಉದ್ವೇಗವಿಲ್ಲದೆ ಪ್ರಚಲಿತ ಸಾಮಾಜಿಕ ಚಿಂತನೆಗಳು ಪ್ರಸ್ತುತಗೊಂಡಿರುತ್ತವೆ ಅಷ್ಟೇ. ಹಾಗಾಗಿಯೇ, ಹರಿಹರನ ರಗಳೆಗಳಲ್ಲಿ ಮಾನವೀಯ ಲಕ್ಷಣ ಎಂದರೆ, ಗಂಡಸಿನ ದೃಷ್ಟಿಕೋನದ ಮಾನವೀಯತೆಯಷ್ಟೇ ಇದೆ ಎಂದು ಗುರುತಿಸಿದರೆ ಅದು ಹರಿಹರನ ಮೇಲೆ ಹೇರುವ ಆರೋಪವೆನಿಸಬೇಕಿಲ್ಲ. ಬದಲಿಗೆ, ಅದು ಆ ಕಾಲದ ಸಾಮಾಜಿಕ ಚಿಂತನೆಯ ಚಿತ್ರಣ

ಎಂದಷ್ಟೇ ತಿಳಿಯಬೇಕು. ಉದಾಹರಣೆಗೆ, ನಮ್ಮ ಕೆಎಸ್‌ನ ಅವರು ಹೆಣ್ಣು-ಗಂಡು ಸಂಬಂಧಗಳನ್ನು ಅತ್ಯಂತ ನವಿರಾಗಿ, ಮಧುರವಾಗಿ, ಆತ್ಮೀಯವಾಗಿ ಚಿತ್ರಿಸಿದವರು. ಆದರೆ 'ತೌರ ಸುಖದೊಳಗೆನ್ನ ಮರೆತಿಹಳು ಎನ್ನದಿರಿ' ಎನ್ನುವಲ್ಲಿ, ಅಥವಾ 'ಮದುವೆಯಾಗಿ ತಿಂಗಳಿಲ್ಲ ನೋಡಿರಣ್ಣ ಹೇಗಿದೆ ನಾನು ಕರೆದಾಗಲೆಲ್ಲ ಬರುವಳೆನ್ನ ಶಾರದೆ' ಎಂದಾಗ, ಇಚ್ಛೆಯನರಿತು ನಡೆವ ಸತಿಯ ಮಾದರಿಯೇ ಇದೆ. ಇದನ್ನು ಹಿಡಿದು ನಾನು ಕೆಎಸ್‌ನ ಸ್ತ್ರೀವಿರೋಧಿ ಎಂದು ಪ್ರತಿಪಾದಿಸಿದರೆ ಮೂರ್ಖತನವೆನಿಸೀತಷ್ಟೆ. ಇಲ್ಲಿನ ಅಭಿವ್ಯಕ್ತಿ, ನಮ್ಮಲ್ಲಿ ಪುರುಷ ದೃಷ್ಟಿಯೇ ಲೋಕದೃಷ್ಟಿಯಾಗಿರುವ ಸಂದರ್ಭದ ಒಂದು ಮಾದರಿ ಅಷ್ಟೆ.

ಹೀಗಾಗಿಯೇ, ಹರಿಹರನಲ್ಲಿ ವರ್ಗ, ವರ್ಣ, ಲಿಂಗ ಮೊದಲಾಗಿ ಲೋಕಸಂಬಂಧಿ ಚಿಂತನೆಗಳು ಬಂದಿವೆಯಾದರೂ ಅವನ್ನು 'ಹರಿಹರನ ದೃಷ್ಟಿಕೋನ' ಎಂದು ವಿಶೇಷವಾಗಿ ಗುರುತಿಸುವುದು ಕಷ್ಟ. ಹೆಚ್ಚೆಂದರೆ, ಈ ಕುರಿತು ವೀರಶೈವ ಚಳುವಳಿಗಳ ತಾತ್ವಿಕತೆಗೆ ಅವನ ಒಪ್ಪಿಗೆ ಇದೆ ಎಂದಷ್ಟೇ ಹೇಳಬಹುದು. ಅವನ ಪಾಲಿಗೆ ಈ ಚಿಂತನೆಗಳು ಅವನ ಆತ್ಯಂತಿಕ ಆಸಕ್ತಿಗಳೂ ಅಲ್ಲ. ತಾತ್ವಿಕ ಗುರಿಯೂ ಅಲ್ಲ. ಭಕ್ತಿ ಪರಾಕಾಷ್ಠೆಗೆ ಬಳಕೆಗೊಳ್ಳುವ ಸೋಪಾನಗಳಷ್ಟೇ. ಆದ್ದರಿಂದಲೇ, ವರ್ಗ, ವರ್ಣ ಅಥವಾ ಲಿಂಗಸಂಬಂಧಿ ಚಿಂತನೆಗಳು ಹರಿಹರನಲ್ಲಿ ಈಗಾಗಲೇ ಒಪ್ಪಿತ ಮಾದರಿಯ ಲೋಕದೃಷ್ಟಿಗಷ್ಟೇ ಸೀಮಿತವಾಗಿರುತ್ತದೆ. ಸ್ತ್ರೀಯಾಗಲೀ, ಪುರುಷನಾಗಲೀ ಹರಿಹರನ ದೃಷ್ಟಿ ಅಲ್ಲಿ ಭಕ್ತಿಯ ಪರಾಕಾಷ್ಠೆಯ ಮಾದರಿಯನ್ನು ಶೋಧಿಸುವಲ್ಲಿ ಮಾತ್ರ ಆಸಕ್ತವಾಗಿದ್ದು, ಲಿಂಗ ತಾರತಮ್ಯದ ಪ್ರಶ್ನೆ ಎಂಬುದು ಕೇವಲ ಆರೋಪಿತವಾಗುತ್ತದೆ.

ಈ ಹಿನ್ನೆಲೆಯಲ್ಲಿಯೇ, ಹರಿಹರನ ರಗಳೆಗಳಲ್ಲಿ ಶರಣೆಯರ ಪ್ರಸ್ತಾಪಗಳೂ ಭಕ್ತಿಯ ಪರಾಕಾಷ್ಠೆಯ ಮಾದರಿಗಳಾಗಿ ಚಿತ್ರಣಗೊಂಡಿವೆಯಾದರೂ, ಆ ಮಹಿಳೆಯರಿಗೆ ಸ್ವತಂತ್ರ ವ್ಯಕ್ತಿತ್ವವಿಲ್ಲ ಎಂಬುದನ್ನು ಗುರುತಿಸಬೇಕಾಗುತ್ತದೆ. ಏಕೆಂದರೆ, ಸಾಮಾಜಿಕ ಜೀವನದಲ್ಲಿ ಮಹಿಳೆಯ ಇನ್ನಿತರ ಸಾಧನೆಗಳು ಏನೇ ಇರಬಹುದಾದರೂ ಮೊದಲಿಗೆ ಆಕೆ ಸದ್ಗೃಹಿಣಿ, ಆದರ್ಶ ಸತಿಯಾಗಿರಬೇಕು. ಇದೇ ಪ್ರಚಲಿತ ಲೋಕದೃಷ್ಟಿ. ಮದುವೆ ಎಂಬ ಸಾಮಾಜಿಕ ಸಂಸ್ಥೆಯ ನಿಯಮಗಳನ್ನು ಉತ್ತರಿಸಿದಲ್ಲದೆ ಯಾವ ಹೆಣ್ಣಿಗೂ ಗತ್ಯಂತರವೇ ಇಲ್ಲ. ಆಕೆ ಕರಿಕಾಲಮ್ಮೆ, ಪಾಂಡ್ಯ ಮಹಾದೇವಿ, ಯಸ್ಯಜ್ಞಾನ ದೇವಿಯರಂತೆ ಭಕ್ತಿಯಲ್ಲೂ ಮದುವೆ ಎಂಬ ಸಂಸ್ಥೆಯ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಾ ಪತಿಯ ನೆರಳಾಗಿ ಮಾತ್ರವೇ ಉಳಿಯಬೇಕು. ಅವರು ಶಿವನ ಸಾನ್ನಿಧ್ಯವನ್ನು ಸೇರುವುದು ಕೂಡ ಇದೇ ಸ್ಥಿತಿಯಲ್ಲೇ. ಅಮ್ಮವ್ವೆಯಂತೆ ವಿಧವೆಯಾದರೆ ಅವಳ ತಾಯ್ತನದ ಹಂಬಲವೇ ಶಿವಭಕ್ತಿಯಾಗಬಹುದು. (ನಮ್ಮ ದಾಸಸಾಹಿತ್ಯದ ಹರಪನಹಳ್ಳಿ ಭೀಮವ್ವ, ಶೃಂಗಾರಮ್ಮ, ನಮ್ಮ ಕಾಲದ ತಿರುಮಲಾಂಬ, ಕಲ್ಯಾಣಮ್ಮ.... ಇಂಥ ಹಲವಾರು ಸಾಧಕಿಯರದು ಇದೇ ದಾರಿ.) ಮಲುಹಣನ ವ್ಯಾಮೋಹವನ್ನು ಬಿಡಿಸುವ ಮಲುಹಣಿ ಗುರುವಾಗುತ್ತಾಳೆ. 'ಹೆಂಗೂಸಿಲ್ಲದೆ ನನಗೆ ರಾತ್ರಿ ಕಳೆಯದು' ಎಂದ ಶರಣನಿಗೆ ಯಾರೂ ಸಿಗದಿದ್ದರೆ ತನ್ನನ್ನೇ ಅದಕ್ಕೆ ಬಳಸುತ್ತಾನೆ ಎಂಬ ಸಂಗತಿಯ ಅರಿವಿದ್ದ ಬಸವದೇವನ ಹೆಂಡತಿ ಮಾಯಿದೇವಿ ಆ ಕರೆಯ ನಿರೀಕ್ಷೆಯಲ್ಲಿ ಸಿದ್ಧವಾಗಿ ನಿಂತಿರುತ್ತಾಳೆ. ಮದುವೆಯ ಬಂಧದಲ್ಲಿ ಭಕ್ತೆಯು ಈ ಪರಿಯ ಭಕ್ತಿಯನ್ನು ಮೆರೆಯುತ್ತಾಳಾದರೆ,

ಆ ಮದುವೆಯ ಬಂಧವನ್ನು ನಿರಾಕರಿಸಿದಾಗಲೂ ಆಕೆಗೆ ಪುರುಷ ಲೋಕದೃಷ್ಟಿಯ ಆಚೆಗೆ ದಾಟುವುದೇನೂ ಸಾಧ್ಯವಾಗುವುದಿಲ್ಲ. ಮಹಾದೇವಿ, ಹೇರೂರ ಹೆಂಗಸು ಮತ್ತು ವೈಜಕವ್ವೆಯರು ಗಂಡನನ್ನು ನಿರಾಕರಿಸಿದ್ದು ಆ ಗಂಡಂದಿರು ಭವಿಗಳು ಎಂಬ ಕಾರಣಕ್ಕೆ. ಒಬ್ಬಳ ಗಂಡ ರಾಜ, ಉಳಿದಿಬ್ಬರ ಗಂಡಂದಿರು ಜೈನರು. ಮಹಾದೇವಿ ನೇರ ಸವಾಲೆಸೆದು ಗಂಡನನ್ನು ತೊರೆದು ಬೆತ್ತಲಾಗಿ ಹೊರಟು ಮಲ್ಲಿಕಾರ್ಜುನನನ್ನು ಸೇರುತ್ತಾಳೆ. 'ಹೇರೂರ ಹೆಂಗಸು ಗಂಡುತನವಂ ಕೊಂಡು...... ಮನವಾರೆ ಗಂಡಾದ ಸಂತೋಷವಂ ತೊಟ್ಟು....' ಈ ಸಂದಿಗ್ಧದಿಂದ ಪಾರಾಗುತ್ತಾಳೆ. ರಿಸಿಗಳಿಗೆ ಅಪಚಾರವಾಯಿತೆಂದು ಗಂಡನು ವೈಜಕವ್ವೆಯನ್ನು ಹೊಡೆದರೆ 'ಮದುವೆಯಾಗು ಪೋಗು ಮಗಳೆ ಮರೆವೆನಲ್ಲಿ ನಿನ್ನನು' ಎಂದು ಶಿವ ಅವಳ ಬೆನ್ನಿಗೇ ನಿಂತಿದ್ದಾನೆ. ಈ ಮೂವರು ಭಕ್ತೆಯರಿಗಿಂತಲೂ ಭಿನ್ನವಾಗಿ ನಿಂಬಿಯಕ್ಕ ತನ್ನ ಹೆಣ್ಣು ದೇಹವನ್ನು ಭಕ್ತಿಗೆ ಮೀಸಲಿರಿಸಿ 'ಇಂದು ಮೊದಲಾಗಿ ಎನ್ನ ಕಾಯವಂ ದೇವ ಬಂದ ಜಂಗಮಕ್ಕೊಪ್ಪುಗುಡುವೆನಿಂತೆಲೆ ದೇವ' ಎಂದು ನೇಮ ಹಿಡಿದಿದ್ದಾಳೆ.

ಭಕ್ತರ ಭಕ್ತಿ ಹಾಗೂ ಅವರ ಜೀವನ ಚರಿತ್ರೆಗಳೆದುರು ಈ ಭಕ್ತೆಯರ ಭಕ್ತಿ ಹಾಗೂ ಜೀವನ ಚರಿತ್ರೆಗಳನ್ನು ನಿಲ್ಲಿಸಿದಾಗ, ಈ ಸಮಾಜ ಹೆಣ್ಣಿಗೆಂದೇ ನಿರ್ಮಿಸಿರುವ ನಿರ್ಬಂಧ ನಿರ್ದೇಶನಗಳು ಹಾಗೂ ಯಾವುದೇ ನೆಲೆಯಲ್ಲೂ ಇವುಗಳನ್ನು ಮೀರಲಾಗದ ಸಂದಿಗ್ಧಕ್ಕೆ ಬೀಳುವ ಹೆಣ್ಣಿನ ಅವಸ್ಥೆಗಳನ್ನು ಸ್ಪಷ್ಟವಾಗಿ ಕಾಣಬಹುದು. ಭಕ್ತಿಯ ತಪಸ್ಸು ಪುರುಷನಿಗೆ ಮೋಕ್ಷವನ್ನು, ಕೈಲಾಸವನ್ನು ದೊರಕಿಸಬಹುದು. ಆದರೆ ಮಹಿಳೆಯ ಭಕ್ತಿಗೆ, ತಪಸ್ಸಿಗೆ ಈ ಬಗೆಯ ಬಿಡುಗಡೆಯ ಫಲ ದಕ್ಕಲಾರದು. ಬದಲಿಗೆ, ಅವಳು ಪುರುಷನಿಗೆ ಹೆಂಡತಿಯಾಗಿ, ತಾಯಿಯಾಗಿ, ಮಗಳಾಗಿ, ಏನೂ ಅಲ್ಲವಾದರೆ ದೇಹವನ್ನೇ ಉಣಬಡಿಸುವ ಕಾಯಕ ಮಾಡಿಯೇ ಶಿವನ ಕರುಣೆಯನ್ನು ಸಾಧಿಸಬೇಕು.

ಈ ಅರ್ಥದಲ್ಲಿ ಸಮಕಾಲೀನ ಸಾಮಾಜಿಕ ವಾಸ್ತವವನ್ನು ಚರಿತ್ರೆಯಲ್ಲೂ ಗುರುತಿಸಬಹುದಾದ ಮಾದರಿಯಾಗಿ ಹರಿಹರನ ರಗಳೆಗಳ ಭಕ್ತೆಯರ ಜೀವನ ಚರಿತ್ರೆಗಳನ್ನು ನೋಡುವುದು ಸಾಧ್ಯ ಎನ್ನಬಹುದೇ ಹೊರತು, ಸ್ತ್ರೀವಾದಿ ಚಿಂತನೆ ಹಾಗೂ ಆ ಮಾದರಿಗಳನ್ನು ಇಲ್ಲಿ ಶೋಧಿಸಲು ತೊಡಗುವುದು ಕಷ್ಟ.



---

ಡಾ. ಎಚ್.ಎಸ್. ಶ್ರೀಮತಿ, ಮುಖ್ಯಸ್ಥರು, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೨೧

# ಟಿ. ಯಲ್ಲಪ್ಪ : ಐದು ಕವಿತೆಗಳು

## ಕಣ್ಣಾವಲು

ಕಣ್ಣ ರೆಪ್ಪೆಯ ಹಾಗೆ
ಹಣ್ಣ ಸಿಪ್ಪೆಯ ಹಾಗೆ
ವಜ್ರಕೋಟೆಯ ಕಟ್ಟಿ ಕಾವಲಿರಿಸಿ
ಕಾಪಾಡಿದ ನನ್ನ ಅರಗಿಣಿ ನೀನು

ಮಾಟಗಾರನ ಕರೆಸಿ
ಮಾಯದೂರಿಂದ
ಮಾಯಕದ ನಿನ್ನ ಮೈಮಾಟವನು
ನಿಲಿಸಿದ್ದೆ

ಕತ್ತಿಯಂತಹ ನಿನ್ನ
ಕಣ್ಣೋಟದ ಹರಿತಕ್ಕೆ
ನನ್ನೆದೆಯ ನೆತ್ತರ ಗಾವು ನೀಡಿದ್ದೆ

ನೀನು ಮಲಗುವ ಮಂಚಕ್ಕು ಕೂಡಾ
ನಿನ್ನ ಮೈಯ್ಯ ಬೆವರ ಸುಖ
ಸಿಗದಿರಲೆಂದು
ಲಾವಂಚದ ಅಂಚು ಕಟ್ಟಿದ್ದೆ
ನಿನ್ನ ಕಾಲ ಬೆರಳಿಗೆ
ಕಾಟೇರಿಯಿಂದ ಕಾಡಿಗೆಯ ತಂದು ಸವರಿದ್ದೆ

ಕಾಟೇರಿ, ಕರಿಮಾರಿಯರ
ಉರಿಗಣ್ಣ ಕೋಪ
ನಿನ್ನ ಚಂದಕ್ಕೆ ಶಾಪವಾಗದಿರಲೆಂದು
ಕೋಣ, ಕುರಿ, ಕೋಳಿಗಳ ಕಡಿದು

ಚಾಕಣಮೂಟವಿಕ್ಕಿ
ಚೌಡಿ, ಚಂಡಿ, ಚಾಂಡಾಳಿಯರ
ಭೂತನೃತ್ಯವ ನೀಡಿದ್ದೆ!

ಯಾವ ಮಾಯದ ಭೂತ
ಆಯ ತಪ್ಪಿದ ವೇಳೆ
ನಿನ್ನ ನುಂಗಿ ನೀರು ಕುಡಿದಿತ್ತೋ ಕಾಣೆ

ಏಳು ಸುತ್ತಿನಕೋಟೆ
ಅಲ್ಲೊಂದು ಕೊಪ್ಪರಿಗೆ
ತುಂಬು ತಿಂಗಳಿನಲ್ಲಿ
ಹಾವಾಗಿ ಕಾದಿರುವೆ
ಗೆಳತಿ
ಅಲ್ಲಿ ನೀನೊಂದು
ಮುತ್ತಾಗಿ ಅಡಗಿರಬಹುದೆಂದು!

## ಜೀತ

ದನಿಯರ ಹಟ್ಟಿಯಲಿ
ಅಮ್ಮ ಕರೆವ ಹಸು,
ಅಪ್ಪ ಮೇಯಿಸುವ ಗೋವಳ
ನಾನು ಅವರ ಹಿತ್ತಲಿಗೆ
ಹೊತ್ತು ಹಾಕಿದ ಸೆಗಣಿ

ಒಂದು ದಿನ
ದನಿಯರ ಗಿಡಗಳಿಗೆ
ನಾನು ಕಸುವಾಗಿ ಹೋಗುತ್ತೇನೆ

ಮೇಯುವ ಹಸು
ಮೇಯಿಸುವ ಗೋವಳ
ಕರೆಯುವ ಕೆಚ್ಚಲು
ಎಲ್ಲ ಬತ್ತಿದಾಗಲೂ
ನಾನೊಬ್ಬನೇ
ಈ ಮಣ್ಣಿನ ಹಾಡ ಹಾಡುತ್ತೇನೆ

ಬೇಸಿಗೆಯಲ್ಲಿ ಬೆಳೆದ ಮರಗಳ
ಕೆಳಗಿನ ಕಪ್ಪು ನೆರಳಿನ
ಕಪ್ಪು ಮಣ್ಣಿನ ತಳದ ತಳದಲ್ಲಿ
ನಿಲ್ಲದು ನನ್ನ ತಳವಾರಿಕೆ

ಮುಂದಿನ ಸಂತಾನಕ್ಕೆ
ನನ್ನ ತಮ್ಮನ ಕಪ್ಪು ಕದಪುಗಳ
ನೆಕ್ಕಿ ನೇವರಿಸಿ, ತಿಕ್ಕಿ ತೀಡುವ
ಹೊಳಪಿಗೆ, ಹೊಳಪು ಕಂಗಳ ಅಂಚಲ್ಲಿ
ಒಂದಷ್ಟು ಕಣ್ಣೀರು ಬಂದಾಗ
ದನಿಗೆ ಖುಷಿಯಾಗುತ್ತದೆ
ಓ, ನನ್ನ ಬಯಲಿಗೆ ಬಂಜರಿಗೆ
ಹೆಗಲು ಕೊಡುವ ಹೋರಿ ಎಂದು!

## ಅಣಕ

೧

ದಿನವೂ ಸೂರ್ಯ
ಸಾಯುವ ಹೊತ್ತು
ಕತ್ತಲ ಮನೆಯಲ್ಲಿ
ಸೊಡರಿಗೆ ಹುಡುಕಾಟ ನಡೆದು
ಕತ್ತಲೆಯಲ್ಲೇ ಕಳೆದು
ಹೋಗುವ ಭಯವಾಗಿ
ಕಾಡಿಗೆ ಕಣ್ಣಿನ ಹುಡುಗಿ
ಅಮ್ಮನ ಸೆರಗಿಗೋ
ಅಪ್ಪನ ಬಗಲಿಗೋ ಗಂಟು ಬಿದ್ದು
ಮಿಣ್ಣಂ-ಮಿಣುಗುವ
ಮಿಂಚು ಹುಳುವಿನ ಕಣ್ಣಲ್ಲೇ
ತೂಕಡಿಸಿ ಕನಸಲ್ಲಿ
ಕರಗಿ ಹೋಗುತ್ತೇನೆ

೨

ಅಪ್ಪನ ಹುರಿಗಟ್ಟಿದ
ಕರಿಮೀಸೆಯ ಮೇಲೆರಡು
ಕೆಂಗರಿಯ ಕರಿಮೀನಾಡಿ
ಬೀಡಿ ಪುನುಗು ಘಮಗುಟ್ಟಿ
ಬಿಳಿಹಲ್ಲು ಹೊಳೆದದ್ದೇ
ಅಮ್ಮನ ಕರಿಕೈಯ ಕರಿಬಳೆಯ
ಕಿಂಕಿಣಿ ನಾದಮೊಳಗಿ
ಬುಸುಗುಡುವ ಹಾವುಗಳ ಹಾಗೆ

ಪರಿದ ದಿನ
ಕೇತಕೀ ವನದ ಸರ್ಪ ವೈಭವದ ನೆನಪಾಗಿ
ಕಿಟಾರನೆ ಕಿರುಚುವ
ನಾಲಗೆಗೆ ದನಿಯೇ ಬರದೆ
ಸ್ವೇದ ರಾತ್ರಿಗಳೊಳಗೆ ನೆನೆದು ಹೋದೆ!

೩

ಮುಂಜಾನೆಗೆ ಸಂಜೆಯ ಭಯವಾಗಿ
ಸಂಜೆಗೆ ರಾತ್ರಿಯ ನಡುಕ ಹುಟ್ಟಿ
ರಾತ್ರಿಯ ಕತ್ತಲೆಯೇ ನಂಜಾಗಿ
ಕೊಲ್ಲುವ ಸ್ವಪ್ನಗಳಿಗೇ ಬೆಳಕು ತೊಡಿಸುವ ಹಾಗೆ
ಚಿಮಿಣಿ ಎಣ್ಣೆಯ
ದೀಪ ಹಚ್ಚುವ
ಅಮ್ಮನ ಸೊಗಸಿಗೇ ಬೆರಗು ಮೂಡಿ
ಮೂಗು, ಗಂಟಲು, ಬಾಯಿಯಲ್ಲಿದ್ದ
ಕಫ ತೆಗೆದು ಹೊರಗೆ ಉಗಿದೆ.

೪

ಎಲ್ಲವೂ ಕಪ್ಪಗೆ
ನನ್ನನ್ನೇ ಅಣಕಿಸಿದ ಹಾಗೆ
ಹೆದರಿ, ಓಡೋಡಿ ಒಳಗೆ ಹೋದೆ
ಸೂತಕದ ಮನೆಯ
ಬಾಗಿಲ ಸಂದಿಯಲ್ಲಿ
ಅಪ್ಪನನ್ನೇ ಅಣಕಿಸುವ ಹಾಗೆ
ಬಿದ್ದಿದ್ದ ಕೆಂಪನೆಯ ಮುದ್ದೆಗೆ ಹೆದರಿ
ಗಂಗಳದಲ್ಲಿದ್ದ ತಂಗಳನ್ನವ
ಗಬಗಬನೆ ತಿಂದು ನೀರು ಕುಡಿದೆ!

## ಮಳೆಯ ರಾತ್ರಿ

ಇದು ಮಳೆಯ ರಾತ್ರಿ
ಹಳೆಯ ನೆನಪುಗಳೆಲ್ಲಾ
ಇಳಿಯುತ್ತಿವೆ ಮನಸ್ಸಿಗೆ
ಇಳಿದಂತೆ ಮಳೆ ಭೂಮಿಗೆ
ಇದು ಮಧುರರಾತ್ರಿ

ಮೈಯೆಲ್ಲಾ ಪುಳಕಗೊಳ್ಳುತ್ತಿದೆ
ಬಾಯ್‌ತೆರೆದ ಮಣ್ಣಿನಲಿ
ಮೊಳಕೆಯಾಗುವ ಪುಳಕದಲ್ಲಿ
ಬೀಜಗಳೆಲ್ಲ ಬಿರಿದುಕೊಂಡಂತೆ

ಇದು ಸುಮ್ಮಾನ ಕಳೆದ ರಾತ್ರಿ
ಮನದ ಮುಗುಡಗಳೆಲ್ಲಾ ದೂರ ಸರಿಯುತ್ತಿವೆ
ಕರಿಮುಗಿಲುಗಳೆಲ್ಲಾ ಮಳೆಯಾಗಿ
ಕರಗಿ ಬಂದಂತೆ ಭೂಮಿಗೆ

ಇದು ಮುದಿತನವ ತೊಡೆದು
ಮಗುತನವ ದಯೆಗೈದ ರಾತ್ರಿ
ಬೇಸಿಗೆಯ ಬಿಗಿತವೆಲ್ಲಾ ಲಟಪಟ
ನೆಟಿಕೆ ತೆಗೆದು
ವಸುಂಧರೆಯೆಂಬ ವಯ್ಯಾರಿ ಹೊರಳಾಡಿ
ಭೂಮಿ ಭಾನುಗಳ
ಸುರತ ಸುಖದಲ್ಲಿ ತೊಯ್ದಂತೆ

## ಉತ್ತರ ಧೃವದಿಂ – ದಕ್ಷಿಣ ಧೃವಕೆ.......

ಹಾಡಾಗುವ ಅನುಭವಗಳ
ಹಾಳಾಗಿಸಿ, ಹಾಡಿನ ಜಾಡಿನಲ್ಲಿ
ಬಿಕ್ಕಳಿಕೆಗಳ 'ಪಲ್ಲವಿ'ಗೆ ಪೀಠಿಕೆ ಹಾಕುವ
ನೀನು ಆಲಾಪಿಸಿದ ನಂತರ
ನಾನು ಯಾವ 'ಚರಣ'ದಲಿ
'ಜೀವಸ್ವರ' ಹಿಡಿದು ಆಲಾಪಿಸಲಿ?

ನಿನ್ನ ಆಲಾಪದ
ಒಂದೊಂದು ಆರೋಹಣ ಅವರೋಹಣದಲ್ಲೂ
ನನ್ನ ರಾಗದ ಸ್ವರಗಳು
ನಿನ್ನ ಶೃತಿಯೊಡನೆ
ಸಂಧಿಸಲಾಗದ ನೋವಿನಲ್ಲಿ
ಬಂಧಿಸಲಾಗದ ಅನುಭವದಲ್ಲಿ
ಕೃತಿಯಾಗುವುದಿಲ್ಲ ರಾಗಿಣಿ ಕೃತಿಯಾಗುವುದಿಲ್ಲ

ನೀನು ಪಂಚಮದಲ್ಲಿ
ತಾರಕಕ್ಕೇರಿದರೆ
ನಾನು ಗಾಂಧಾರದಲ್ಲಿ

ಮುಂಪರಕ್ಕಿಳಿದು ಹೋದೆ
ನೀನು ಆಕಾಶಗಂಗೆಯಲ್ಲಿ
ಮಿಂದು ಮಡಿಯುಟ್ಟರೆ
ನಾನು ಪಾತಾಳ ಭೈರವಿಯಲ್ಲಿ
ಒದ್ದಾಡುತ್ತೇನೆ

ಹೀಗಿದ್ದರೆ
ನಮ್ಮಿಬ್ಬರ ಮಿಲನವಾಗುವುದು ಹೇಗೆ?
ನೀನು ಉತ್ತರಾದಿಯಾದರೆ
ನಾನು ದಕ್ಷಿಣಾದಿಯಾದೆ
ಎದೆಯಪ್ಪುಗಟ್ಟಿಸುವ
ಎತ್ತರದ ನಿನ್ನ ಶೀತಲದಿಂದ
ನನ್ನ ಕೊರಕಲುಗಳಲ್ಲಿ ಧುಮುಕಬೇಡ!

ನಿನ್ನ ರಾಗಗಳಲ್ಲಿ
ನನ್ನ ಶಾರೀರ ಬೆರೆವುದೇ ಪ್ರಿಯೆ?
ನನ್ನ ಎಳೆದಾಟದಲ್ಲಿ
ನೀನು ಹೊಳೆ ದಾಟಲಾರೆ
ಬಳೆ ತೊಡಲಾರೆ

ನಾನು ಗಂಗೆಯಲ್ಲಿ
ಮಿಡಿವ ವೀಣೆಯಾದರೆ
ನೀನು ಗಾಳಿಯಲಿ ಉಲಿವ
ಅಲೆಯ ಹಾಗೆ
ಅದಕ್ಕೇ.....
ಹಾಡಾಗುವ ಅನುಭವಗಳ
ನೀನು ಹಾಳಾಗಿಸಬೇಡ
ಹಾಳಾಗಿಸುವ ಅನುಭವಗಳ ಹಾಡಾಗಿಸು

ಹಾಡು ಹಕ್ಕಿಯ ಕೊರಳು
ಕಾಡುವನು ಭವಗಳ ಉರುಳೊಳಗೆ
ಕರುಳು ಮಿಡಿಸುವ ಹಾಗೆ
ನಿನ್ನ 'ಪಲ್ಲವಿ'ಗೆ ನಾನು
'ಚರಣ' ದಾಸನಾಗಿ ಆಲಾಪಿಸುತ್ತೇನೆ.

ಟಿ. ಯಲ್ಲಪ್ಪ, ನಂ. ೩೮, 'ಎ' ನಾರಾಯಣಪುರ ಬಡಾವಣೆ, ದೂರವಾಣಿನಗರ ಅಂಚೆ,
ಬೆಂಗಳೂರು - ೫೬೦ ೦೧೬

# ಚೌಡರೆಡ್ಡಿಯವರ ಹನಿಗವಿತೆಗಳು

- ಆರ್. ಚೌಡರೆಡ್ಡಿ ಪಣಸಮಾಕನಳ್ಳಿ

## ಅಂತರ

ಅಪ್ಪ ಹೇಳಿದ:
'ಕೂಡುವುದು
ಲಾಭ'!
ಮಗ ಹೇಳಿದ:
'ಕಳೆಯುವುದೇ
ಸುಲಭ!!'

## ಮಾವೋ ಮಾವೋ

ಚೀನಾದಲ್ಲಿ ಈಗಲೂ
ಮಾವೋ ಮಾವೋ
ಬೇಸಿಗೆಯ ಶ್ರೀನಿವಾಸಪುರದಲ್ಲೂ
ಎಲ್ಲೆಲ್ಲೂ
ಮಾವೋ ಮಾವೋ

## ಮಧ್ಯರಾತ್ರಿ

ಚುನಾವಣೆಯ
ಹಿಂದಿನ
ಮಧ್ಯರಾತ್ರಿ,
ನಮ್ಮೂರಿಗೆ ಮಧ್ಯರಾತ್ರಿ!

# ನಿನ್ನೆಗಳು ಮೊನ್ನೆಗಳಾಗಿ ಬಿಡುವ ಅಪಾಯದ 'ದಿವ್ಯ'

- ಡಾ|| ಜಿ. ಪ್ರಶಾಂತ ನಾಯಕ

ಕನ್ನಡ ಸಾಹಿತ್ಯದ ವರ್ತಮಾನದ ನೆಲೆ-ಬೆಲೆಗಳನ್ನು ಕುರಿತ ಚರ್ಚೆ ಅಕಡೆಮಿಕ್ ಅಲ್ಲದೆ ಅದರಿಂದಾಚೆಗೂ ನಡೆಯುತ್ತಿದೆ. ಇದರರ್ಥ ಕನ್ನಡದ ಆಧುನಿಕ ಸಾಹಿತ್ಯ ಪರಂಪರೆಗೆ ಜನಮನ್ನಣೆಯ ಪ್ರೀತಿಯಿತ್ತು ಎಂಬುದು. ಸವಾಲುಗಳು ಮತ್ತು ಮಾದರಿಗಳ ಘಟುಕಾಟದ ನಡುವೆ ಈ ಬಗೆಯ ಚರ್ಚೆಗಳಿಗೆ ಭಿನ್ನವಾದ ಆಯಾಮಗಳೂ ಇವೆ. ಒಂದು ಸಂಕೀರ್ಣ ಪರಿಸ್ಥಿತಿ ಎಂದುಕೊಂಡ ಸಂವೇದನೆಯ ಸಂದರ್ಭಕ್ಕೆ ಅನಂತಮೂರ್ತಿಯವರ 'ದಿವ್ಯ' ಪ್ರಕಟಗೊಂಡಿದೆ.

ಒಂದು ಕೃತಿ ಪ್ರಕಟಗೊಳ್ಳುವ ಮೊದಲೇ ಬಹುದೊಡ್ಡ ನಿರೀಕ್ಷೆಯನ್ನು ಹುಟ್ಟಿಸಬಹುದಾದರೆ ಅದಕ್ಕೆ ಲೇಖಕನ ಬಗೆಗಿನ ನಿರೀಕ್ಷೆಯು ಮುಖ್ಯ ಕಾರಣವಾಗಿರುತ್ತದೆ. ಆ ನಿರೀಕ್ಷೆಯೂ ಬಹುಪಾಲು ಲೇಖಕನ ನಿನ್ನೆಗಳ ವಿಚಾರ ಸರಣಿಯ ಮತ್ತು ಆ ಬಗೆಯ ವ್ಯಕ್ತಿ ವಿಕಸನದ ಗ್ರಹಿಕೆಯಿಂದಲೇ ಉಂಟಾಗುವಂತಾಗಿರುತ್ತದ. ಹಾಗಾದಾಗ ಲೇಖಕನ ಜವಾಬ್ದಾರಿಯೂ ದೊಡ್ಡದೆ. ಈ ಬಗೆಯ ನಿರೀಕ್ಷೆಗಳನ್ನು ಆತ ಖಂಡಿತಾ ಅರಿತಿರುತ್ತಾನೆ. ಅದರರ್ಥ ಅವರನ್ನು ಸಮಾಧಾನಿಸುವ ನೆಲೆಯಲ್ಲಿ ಕೃತಿ ಸೃಷ್ಟಿಸುತ್ತಾನೆ ಅಥವಾ ಸೃಷ್ಟಿಸಬೇಕು ಎಂಬುದಲ್ಲ. ತನ್ನ ಆಲೋಚನೆಗಳ ಬದ್ಧತೆಯನ್ನು ಆತ ಎಷ್ಟರಮಟ್ಟಿಗೆ ಕಾಯ್ದುಕೊಂಡಿರುತ್ತಾನೆ ಮತ್ತು ಸಮರ್ಥಿಸುತ್ತಾನೆ ಎನ್ನುವುದು ಮುಖ್ಯ.

ಕನ್ನಡ ಸಾಹಿತ್ಯದಲ್ಲಿ ವಿಚಾರ ಬದ್ಧತೆಗಳಿಗಿರುವ ವ್ಯಾಪ್ತಿ ಬಹಳ ಅನನ್ಯವಾದುದು. ಅದು ಏಕಕಾಲಕ್ಕೆ, ಸಾಹಿತ್ಯಾಭಿರುಚಿ ಮತ್ತು ಸಹೃದಯ ಶ್ರೇಷ್ಠತೆಯನ್ನು ದಾಖಲಿಸುವಂತಹುದು. ಬಹಳ ಸಲ ಕೃತಿಯನ್ನು ಕೃತಿಯಾಗಿ ನೋಡುವಾಗ ಸಾಧ್ಯವಾದಷ್ಟು ತನ್ನ ವ್ಯಕ್ತಿಗತ ನೆಲೆಯ ಮಿತಿಗಳಿಂದಾಚೆಗೆ ಒಳಗೊಳ್ಳಲು ಇಲ್ಲಿನ ಸಹೃದಯತೆ ಹಾತೊರೆದಿದೆ ಎನ್ನುವುದಕ್ಕೆ ಬಹಳಷ್ಟು ಸಾಕ್ಷಿಗಳಿವೆ.

ಅಂತಹ ಸಾಕ್ಷಿಗಳಲ್ಲಿ ಅನಂತ ಮೂರ್ತಿಯವರ ಬಗೆಗಿನ ಓದುಗರ ಪ್ರೀತಿಯೂ ಒಂದು.

'ಸಂಸ್ಕಾರ'ದ ಮೂಲಕ ಅನಂತಮೂರ್ತಿ ಸೃಷ್ಟಿಸಿದ್ದು, ದಾಖಲಿಸಿದ್ದು ಸಾಮಾನ್ಯ ಪರಂಪರೆಯಲ್ಲ. ಅದಕ್ಕೊಂದು ನಿರಂತರತೆಯ ಸಂಚಲನವಿತ್ತು ಜೊತೆಗೆ ಆ ಲೇಖಕನ ಜವಾಬ್ದಾರಿಯೂ ತುಸು ದೊಡ್ಡದೇ ಆಗಿತ್ತು. ಆದರೆ ಅದನ್ನು ಲೇಖಕ ಉಳಿಸಿಕೊಂಡದ್ದು ಹೇಗೆ? ಚರ್ಚೆ ನಡೆಯುತ್ತಿರುವುದು ಈ ಕಾರಣದಿಂದಲೇ.

ಈ ಬಗೆಯ ಚರ್ಚೆ ಬಹುಪಾಲು ಅನಂತಮೂರ್ತಿಯವರ ವಿಚಾರಸರಣಿಯ ಜೊತೆಗೆ ಮೈ ತಾಳಿದೆಯೆನಿಸುತ್ತದೆ. ಒಂದಲ್ಲ ಒಂದು ಕಾರಣಕ್ಕೆ ಅನಂತಮೂರ್ತಿ ಸಾಹಿತ್ಯ ಸಂದರ್ಭಕ್ಕೆ ಪ್ರಸ್ತುತರಾದವರಿದ್ದಿದೆ. ಆದರೆ ಅದು ಎಲ್ಲಾ ಸಂದರ್ಭಗಳಲ್ಲಿಯೂ ಸಮರ್ಪಕವಾದ ಉತ್ತರವನ್ನು ಕಂಡುಕೊಂಡಿದೆ ಎಂಬಂತಿಲ್ಲ. ಜಾತ್ಯಾತೀತವಾದ ಈ ವ್ಯವಸ್ಥೆಯ ಸಂದರ್ಭದಲ್ಲಿ ಜಾತಿ-ಮತಗಳಾಚೆಗೆ ಅಷ್ಟು ಸುಲಭಕ್ಕೆ ಒಂದು ಸಾಹಿತ್ಯ ಕೃತಿ ಅಥವಾ ಲೇಖಕ ಪಾರಾಗುವುದಾಗಲಿ, ಅನಂತ ಎಂದುಕೊಳ್ಳುವುದಾಗಲಿ ಸಾಧ್ಯವಾಗಿಲ್ಲ. ಅನಂತಮೂರ್ತಿಯವರ ವಿಚಾರಧಾರೆ ಕುರಿತ ಅನುಮಾನಗಳು ಈ ನೆಲೆಯಲ್ಲೇ ಮುಖ್ಯವಾಗುತ್ತವೆ. ಈ ಮೇಲೆ ಗಮನಿಸಿದಂತೆ ಅದು ಬದ್ಧತೆ ಮತ್ತು ಆ ಬಗೆಯ ಘೋಷಣೆಗೆ ಸಂಬಂಧಿಸಿದ ಸಂಗತಿ. ಇಲ್ಲವಾದರೆ, 'ಸಂಸ್ಕಾರ' ಸೃಷ್ಟಿಸಿದ ಒಬ್ಬ ದಿಢೀರ್ ಚಿಂತಕ ಇಂದು ಮತ್ತೆ ಆ ಕೃತಿಯ ಪುನರಾವಲೋಕನದ ಸಂದರ್ಭಕ್ಕೆ ಭಿನ್ನವಾಗಿ ಕಾಣಬಹುದಾದ ಸಂದರ್ಭ ಸೃಷ್ಟಿಯಾಗುತ್ತಿರಲಿಲ್ಲವೇನೋ?

'ಸಂಸ್ಕಾರ'ಕ್ಕೆ ಭಿನ್ನವಾಗಿ ಅನಂತಮೂರ್ತಿಯವರನ್ನು ನೋಡುವ ತುರ್ತನ್ನು ಅವರ 'ಭವ' ಕಾದಂಬರಿಯೇ ವಿಸ್ತೃತವಾದ ನೆಲೆಯಲ್ಲಿ ಸೃಷ್ಟಿಸಿತೆನ್ನಬಹುದು. ಅದರ ಮುಂದುವರಿದ ಹಾದಿಯಲ್ಲಿ 'ದಿವ್ಯ' ಏನನ್ನು ಹೇಳುತ್ತಿದೆ.

ಇದರ ಅಗತ್ಯವಿರಲಿಲ್ಲ ಎನ್ನುವ ಮಟ್ಟಿಗಿನ ನಿರೀಕ್ಷೆಯಲ್ಲಿ ಅರಳಿದ ವಾದಗಳಂತೆ ಕೃತಿಯನ್ನು ಶತಮಾನದ ಶ್ರೇಷ್ಠಕೃತಿ ಎಂದು ದಾಖಲಿಸುವ ವಿಪರ್ಯಾಸವೂ ನಡೆದಿದೆ. ಹಾಗಲ್ಲದೆ ತೀರಾ ಪ್ರಚೋದಕ ಕೃತಿಯಷ್ಟೇ ಎಂಬ ಚರ್ಚೆಯೂ ಚಾಲ್ತಿಯಲ್ಲಿದೆ. ಅವು ತೀರಾ ವೈಯಕ್ತಿಕ ಎನ್ನುವಂತಿಲ್ಲ. ಈ ಆಧಾರಗಳಿಂದಲೇ ಸಾಮಾನ್ಯ ಓದುಗ ತನ್ನ ತೀರ್ಮಾನದಾಚೆಗೆ ನಿಂತುಬಿಡಬಹುದು.

ಲೇಖಕನನ್ನು ಮರೆತು ಕಾದಂಬರಿಯನ್ನು ಓದಿ ಪಕ್ಕಕ್ಕಿರಿಸಿದರೆ, ತುಸು ಗಂಭೀರವೆನಿಸಬಹುದಾದ ಆದರೆ ಜನಪ್ರಿಯ ಲೇಖಕನ ಧಾಟಿ ಹಿಡಿದ ಯಾವುದೇ ಲೇಖಕನ ಕೃತಿ ಎಂದಷ್ಟೇ ಎನಿಸಿಬಿಡುವ ದಿವ್ಯವನ್ನು ಅರ್ಥಮಾಡಿಕೊಳ್ಳಲು ಬೇರೆಯದ್ದೇ ಆದ ಮಾನದಂಡ ಬೇಕೆ? ಹಾಗೆನಿಸುವಾಗ ಆ ಕುರಿತ ಸುಳಿವನ್ನು ಲೇಖಕರಂತೂ ಎಲ್ಲೂ ನೀಡಿರುವುದಿಲ್ಲ. ಕನ್ನಡದ ಕಾದಂಬರಿಯ ಸಂಖ್ಯೆಯನ್ನು ಹೆಚ್ಚು ಮಾಡಿದ ಆ ಕೃತಿಯೊಳಗೆ ಮೈದಾಳುವ ಮಹತ್ವಗಳೇನು? ಎಂದರೆ ಸುಲಭವಾಗಿ ಗೌರಿಯಾಗಲಿ, ಕೇಶವನಾಗಲಿ, ಅಕ್ಕುವಾಗಲಿ, ಘನಶ್ಯಾಮನಾಗಲೀ ಉತ್ತರ ಹೇಳುವುದಿಲ್ಲ. ಗೌರಿಯನ್ನು ದಿವ್ಯತ್ವಕ್ಕೆ ಏರಿಸಿದ್ದಕ್ಕಾಗಲಿ ಅಥವಾ ಅವಳು ಹಾಗೆ ಏರಿದ್ದಕ್ಕಾಗಲೀ ಯಾರೂ ಯಾವ ಸಮಾಧಾನವನ್ನು ನೀಡುವುದಿಲ್ಲ. ಆದರೆ ನಂಬಿಕೆಗಳನ್ನು ಮಾತ್ರ ಕಾದಂಬರಿ ಓದಿಸಿಕೊಳ್ಳುತ್ತಲೇ ಸೃಷ್ಟಿಸಲು ಪ್ರಯತ್ನಿಸುತ್ತದೆ. ಅದಕ್ಕೆಂದೇ ಕರಿಯ-ಜಲಜರ ಪಾತ್ರಗಳೂ ಸೃಷ್ಟಿಯಾಗಿ ದಿಢೀರ್ ಕಣ್ಮರೆಯಾಗಲು ಹಾತೊರೆಯುತ್ತವೆ.

ಕೇಶವನ ಪಾತ್ರದ ವ್ಯಾಪ್ತಿ ಪ್ರಶ್ನೆಯೇ ಲೇಖಕನ ನಂಬಿಕೆಯನ್ನು ಆತ ಪೋಷಿಸಲು ಬಯಸುವ ಪರಂಪರೆಯನ್ನು ಪ್ರಕಾಶಗೊಳಿಸುವಂತೆ ತೋರುತ್ತದೆ. ಹಾಗಲ್ಲದಿದ್ದ ಘನಶ್ಯಾಮನ ವ್ಯಕ್ತಿತ್ವಕ್ಕೂ, ಕೇಶವನ ಕರ್ಮಕ್ಕೂ ಇಷ್ಟು ಸರಳವಾದ ಸಂಬಂಧವೇರ್ಪಡುವುದು ಸಾಧ್ಯವಾಗುತ್ತಿತ್ತೆ? ಪಾತ್ರ-ಪಾತ್ರಗಳನ್ನು ಸಮೀಕರಿಸಿ ಜೋಡಿ ಮಾಡಿಬಿಡುವ ಸಿನಿಮೀಯ ಕಥಾನಕ ಬಹಳ ದೊಡ್ಡ ಚಿಂತನೆಯನ್ನಾಗಲಿ, ವಿಚಾರ ಸಂಘರ್ಷವನ್ನಾಗಲೀ ಬೆಳೆಸುವುದಿಲ್ಲ. ಪ್ರಾಮಾಣಿಕ ತುಡಿತಗಳಾಗಲಿ, ಆ ಬಗೆಯ ಕಳಕಳಿಗಳಾಗಲಿ, ಸೋಲುವುದು ಇಲ್ಲಿಯೇ.

ಮಂಜಯ್ಯ, ಗಣಪಯ್ಯರ ಚಿತ್ರಗಳು ಚರಿತ್ರೆಗಳಾಗಿ ದಾಖಲಾಗುವುದಾದರೆ ಗೌರಿ-ಗಂಗೆ-ಅಕ್ಕು ದಿವ್ಯತ್ವದೆಡೆಗೆ ಸಾಗಿ ಬಿಡುವುದೂ ಒಂದು ತಂತ್ರವೇ ಆಗಿಬಿಡುತ್ತದೆ. ತನ್ನಷ್ಟಕ್ಕೆ ಒಂದು ಗಟ್ಟಿಯಾದ ಕಾರಣವೇ ಇಲ್ಲದಂತೆ ಸಾಮಾನ್ಯತೆಯನ್ನು ಮೀರಿಬಿಡುವ ಗೌರಿಯೇ ಇಡೀ ಕಾದಂಬರಿಯನ್ನು ನಿಯಂತ್ರಿಸಲು ಪ್ರಯತ್ನಪಟ್ಟದ್ದು ಒಂದು ಹೆಣಗಾಟದಂತೆ ಭಾಸವಾಗಿಬಿಡುತ್ತದೆ. ಮಂಜಯ್ಯನಿಗೆ ಮೋಕ್ಷದ ಹಾದಿಯೂ ಗೌರಿಯಿಂದಲೇ ಲಭ್ಯವಾಗಬೇಕಾದ ತುರ್ತು ಸೃಷ್ಟಿಯಾಗುವುದೇ ಈ ಕಾರಣಕ್ಕೆ.

ಗಂಗೆಯ ಸಾವಿಗೆ ಅಧಿಕೃತತೆಯನ್ನು ಆರೋಪಿಸಲಾಗದ ಸಡಿಲತೆಯೇ ಕಾದಂಬರಿಯ ನೀರಸ ಮುಕ್ತಾಯಕ್ಕೂ ಚಾಚಿಕೊಂಡಿದೆ. ಗಟ್ಟಿ ಪಾತ್ರವಾಗಬಹುದಾಗಿದ್ದ 'ಅಕ್ಕು' ದಿಕ್ಕುತಪ್ಪಿದಂತೆ ಕಾಣಿಸುವುದು ಸಹ ಇಂತಹದ್ದೇ ಕಾರಣಗಳಿಂದಾಗಿ.

ಜೀವ ತುಂಬಿಕೊಳ್ಳಬಹುದಾಗಿದ್ದ ವಿಮಲ-ಮಿಂಗೇಲಿಯರೂ ಮತ್ತಾವುದೋ ಪಾತ್ರದ ನ್ಯಾಯ-ತೀರ್ಮಾನದ ನೆರಳುಗಳಾಗಿ ಕಾಣುವುದೂ ಕಾದಂಬರಿಯ ವೈಚಿತ್ರ್ಯಗಳಲ್ಲಿ ಒಂದು. ಅದು ಸರಸ್ವತಿ-ದುರುಗರ ಪಾತ್ರಗಳಿಗಾದ ಅನ್ಯಾಯವನ್ನು ಸಮೀಕರಿಸಲು ಸೃಷ್ಟಿಯಾದಂತೆ ಆಗಾಗ ಅನಿಸತೊಡಗುತ್ತದೆ. ಆ ದುರಂತವನ್ನು ಮರೆಸಲು ಇವರಿಬ್ಬರ ಸಂಸಾರ ಅನಿವಾರ್ಯ ಎನಿಸುವಂತಿದೆ.

ಮೀನಾಕ್ಷಿ-ವಿನೋದಿನಿಯರ ಪಾತ್ರಜೀವಂತಿಕೆ ಮತ್ತೊಂದು ಬಗೆಯದು. ನಿರ್ದೇಶಕ ಹೀಗೆ-ಹಾಗೆ ಎಂದಂತೆ ವರ್ತಿಸುವ ಸಿದ್ಧ ಮಾದರಿಗಳಲ್ಲಿ ಈ ಯಾಂತ್ರಿಕತೆಯ ನಡುವೆಯೇ ಆಗೊಮ್ಮೆ-ಈಗೊಮ್ಮೆ ಗಂಭೀರ ವಿನೋದಿನಿಯೇ ಕಾದಂಬರಿಯ ಮಹತ್ವದ ಒಳನೋಟಗಳ ತಿರುವುಗಳಿಗೆ ಸಾಧ್ಯವಾಗಬಹುದಾಗಿದ್ದನ್ನು ಪ್ರತಿನಿಧಿಸಿದರೂ ಅಷ್ಟರಲ್ಲೇ ಹೊರಳಿಬಿಡುತ್ತದೆ. ಮಾಂತ್ರಿಕ ಸ್ಪರ್ಶದ ಅಗತ್ಯವಿದ್ದದ್ದು ಇಂತಲ್ಲಿಯೇ. ಸುಮ್ಮನೆ ಎರಡು ಕುಟುಂಬಗಳ ಬದುಕಿನ ಬಗೆಯನ್ನು ಪರಿಚಯಿಸಿ ಒಂದಾಗಿಸುವ ಮಂಜಯ್ಯನ ಪಾತ್ರದ ನೆಪದಿಂದಾಚೆಗೆ ಹೊರಳಲು ಕಾದಂಬರಿಯಲ್ಲಿ ಈ ಬಗೆಯ ಬಹಳಷ್ಟು ಹೊಸ ಹೊಳಹುಗಳಿವೆ ಎಂದು ಓದುಗನಿಗೆ ಅನಿಸುತ್ತಿರುವಾಗಲೇ ಕಾದಂಬರಿ ತನಗೊಂದು ತನ್ನದೇ ಗೊತ್ತುಪಡಿಸಿದ ಮಾರ್ಗವಿದೆ ಎಂದು ಹಠವಿಡಿದಂತೆ ಸಾಗಿಬಿಡುತ್ತದೆ. ಆದ್ದರಿಂದಲೇ ಅದು ತನಗೆ ಬೇಕು ಎನಿಸಿದಾಗ ಕೃಷ್ಣಶಾಸ್ತ್ರಿಯನ್ನು ಒಪ್ಪಿಕೊಂಡೇ ಶಾಸ್ತ್ರೀಯವಾದ ತನ್ನ ಸ್ವರೂಪವನ್ನು ಪ್ರದರ್ಶಿಸುತ್ತದೆ. ಹೀಗ ಎಲ್ಲಿಂದಲೋ ಬರುವ ಭಾವ-ಸ್ವಭಾವದ ಪಾತ್ರಗಳು ಗೌರಿಯನ್ನು ದಿವ್ಯವಾಗಿಸುವ ಛಲಹೊತ್ತು ಪ್ರದಕ್ಷಿಣೆ ಹಾಕಿ ಕೆಲಸ ಮುಗಿಸುತ್ತವೆ. ಆದರೆ, ಮಂಜಯ್ಯ, ಗಣಪಯ್ಯರೂ ಹಾಗೆ ಸುತ್ತು ಹೊಡೆಯುವುದೇ ಸೃಜನಶೀಲತೆಯ ದುರಂತವೂ ಆಗಿಬಿಟ್ಟಿದೆ.

ಹೀಗೆ ಎನ್ನುವ ಚಳವಳಿಯ ಚರ್ವಿತ ಚರ್ವಣ ಸ್ವರೂಪದಾಚೆಗೆ ಸಿಡಿದಂತೆನಿಸಬಹುದಾಗಿದ್ದ ಭಾಷೆ-ನಿರೂಪಣೆಗಳು ಕಾದಂಬರಿಯ ಕೇಂದ್ರ ಪ್ರಜ್ಞೆಯ ಕಾರಣಕ್ಕಾಗಿಯೇ ತಮ್ಮ ಹೊಸತನವನ್ನು ಕಳೆದುಕೊಂಡಿವೆ. ಲೇಖಕರ ಹೊಸ ಸಾಧ್ಯತೆಯ ಚಿಂತನೆಗಳನ್ನು ನುಂಗಿಹಾಕಿದೆ. ಹುಟ್ಟಿಸಿದ ಬಹಳ ನಿರೀಕ್ಷೆಯ ಕಾರಣಕ್ಕೆ ಓದುತ್ತಾ ಹೊಸ ಆಯಾಮಗಳನ್ನು ಹುಡುಕಿ ಚರ್ಚಿಸಬೇಕಾದ ವಿಪರ್ಯಾಸವೂ ಸೃಷ್ಟಿಯಾಗಿದೆ. ವರ್ತಮಾನದ ಸಂಸ್ಕೃತಿ-ಮಂದಿರ ಸಂಪ್ರದಾಯ ಸಂಬಂಧೀ ಸೆಲೆಗೆ ಎಲ್ಲೋ ಒಂದೆಡೆ ಗೌರಿಯೂ ಪ್ರತಿನಿಧಿಯೇ? ಎಂದೆನಿಸಿಬಿಡುತ್ತಾ ಆ ಬೇಸರದಿಂದಲೇ ಕಾಡತೊಡಗುತ್ತಾಳೆ. ಗೌರಿ-ಕೇಶವ-ಕೃಷ್ಣಶಾಸ್ತ್ರಿಗಳ ನಡುವೆ ಘನಶ್ಯಾಮ ಅಧೀರವಾಗುವುದು ವಿಸ್ತರಿಸಿಕೊಳ್ಳಲಾಗದೆ ಚಿಪ್ಪಿನೊಳಗೆ ಸೇರಿದ ಚಿಂತನೆಯೂ ಆಗಿಬಿಟ್ಟಿದೆ.

ಸಮಕಾಲೀನ ತುರ್ತುಗಳು ಬೇರೆಯೇ ಇತ್ತು. ಆದ್ದರಿಂದಲೇ ಇಲ್ಲಿನ ನಿರೀಕ್ಷೆಗಳೂ ಬಹು ಭಿನ್ನವಾಗಿದ್ದವು. ಪರಂಪರೆಯೆನ್ನುವುದು ಹೊಸತಾಗುವುದರ ಅರ್ಥವೂ ಹೌದು. ಆದರೆ ನಿನ್ನೆಗಳು ಮತ್ತಷ್ಟು ಮೊನ್ನೆಗಳಾಗಿ ಬಿಡುವ ಅಪಾಯ ಮಾತ್ರ ಕಲ್ಪನಾತೀತವಾದುದು. ಈ ಹೊತ್ತಿನ ಸಾಹಿತ್ಯ ಸಂದರ್ಭಕ್ಕೆ ದಿಕ್ಸೂಚಿಯಾಗಬೇಕಿದ್ದ ಕೃತಿಯೇ ತತ್‌ಕ್ಷಣದ ತುರ್ತು. ಕಡೇಪಕ್ಷ ಆ ಕುರಿತ ಒಂದು ಮುಷ್ಟಿಯ ಬಲವಾದರೂ ಬೇಕು. ಆದರೆ ದಿವ್ಯದಿಂದ, ತನ್ಮೂಲಕ ಚಿಂತಕ ಚಿಹ್ನೆಯ ಅನಂತಮೂರ್ತಿಯವರಿಂದ ಇದು ಸಾಧ್ಯವಾಗಲಿಲ್ಲವೆನ್ನುವುದೇ ದುರದೃಷ್ಟಕರ.



---

ಡಾ। ಜಿ. ಪ್ರಶಾಂತನಾಯಕ, ಅಧ್ಯಾಪಕ, ಕನ್ನಡಭಾರತಿ, ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ, ಶಿವಮೊಗ್ಗ ಜಿಲ್ಲೆ - ೫೭೭೪೫೧

# ಬುಡಬೆಳ್ಳಿ ನಡುಪಚ್ಚೆ ಗೊನೆಮುತ್ತು
## (ಜಾನಪದ ಕಥೆ ಆಧಾರಿತ ಮಕ್ಕಳ ನಾಟಕ)

---

- ಡಾ|| ಎಂ. ಬೈರೇಗೌಡ

### ದೃಶ್ಯ-ಒಂದು

(ಸಿಂಗಾರಗೊಂಡ ಪಟ್ಟಣ. ಏಕತಾರಿ ನುಡಿಸಿ ಹಾಡುತ್ತಾ ವೀರು ಪ್ರವೇಶ)

ವೀರು : ಗುರುವೀಗೆ ಶರಣೆಂದೆ
ಹರನೀಗೆ ಶರಣೆಂದೆ
ಹರನ ಪಾದವ ನೆನೆದು
ಪರಮ ಪಾವನೆಯಾದ
ನನ್ನ ಹಡೆದಂತ ಮಹಾತಾಯಿ
ಸತುವಂತೆ ರಾಮವ್ವೆ
ಕರಮುಗಿದು ಶರಣೆಂದೆನೂ!!

ಭಟ : (ಒಳನುಗ್ಗುತ್ತಿರುವವನನ್ನು ತಡೆದು) ಏಯ್ ಯಾರಯ್ಯ ನೀನು? ಒಳಗೋಗ್ವಂಗಿಲ್ಲ. ರಾಜಾಜ್ಞೆ ಆಗದೆ.

ವೀರು : ಅಣ್ಣಯ್ಯ, ನೋಡ್ರಪ್ಪ ನಾ ಭಿಕ್ಷುಕ. ನಾಕ್‌ಮನೆ ಭಿಕ್ಷ ಎತ್ಕಂಡು ನನ್‌ಪಾಡುಗ್ ನಾ ಹೋಯ್ತೀನಿ ಕಾಣ್ರಣ್ಣ.

ಭಟ : ಇಲ್ಲಯ್ಯ ಬುಡಕ್ಕಾಗಕ್ಕಿಲ್ಲ. ಒಂದ್ ನರ್ಪಿಳ್ಳೆನು ಒಳುಗ್ ಕೂಡ್‌ಬ್ಯಾಡಿ ಅಂತ ರಾಜಪ್ಪೆಣ್ಣೆ ಆಗದೆ.

ವೀರು : ನೋಡ್ರಣ್ಣ ಏನೋ ಹಬ್ಬ ನಡಿವಂಗದೆ, ಜನ ತಿಂದ್ ಬಿಸಾಕ್ದೆಲೆನಾಗಿರೋದ್ನ ತಿನ್ಕಂಡು ನನ್‌ಪಾಡುಗ್ ನಾ ಹೋಯ್ತಿನಿ ಬುಡ್ರಣ್ಣೋವ್.

ಭಟ : ಹ್ಞೂ... ಬರುವಾಗ ನರಿ ಬಂದಂಗ್ ಬಂದು ಆಮ್ಯಾಲೆ ಹುಲಿ ಆಯ್ತೀರಿ.

ಹೋಗಪ್ಪ ಸುಮ್ನ, ನಮ್ ಕೆಲ್ಸಕ್ ಸಂಚ್ಕಾರ ತರಬ್ಯಾಡ. (ಜಿಡವ ಕಾವಲುಗಾರರನ್ನು ವೀರು ಬೇಡುತ್ತಿದ್ದಾನೆ. ನೋಡುತ್ತ ನಿಂತಿದ್ದ ಅಜ್ಜ....)

ಸೂರಜ್ಜ : ಅಯ್ಯಾ, ಭಿಕ್ಷುಕ ಒಂದಿಪಾಟಿ ಬೇಡ್ಕಂಡೋಗ್ಲಿ ಬುಡ್ರಪ್ಪ.

ಭಟ : ಕಡಾಯ ಹಾಲ್ಗೆ ಕಡಾಯದಷ್ಟೆ ಹೆಪ್ಪಾಕ್ತಾರ ತಾತ? ನಮ್ ಕೆಲ್ಸ ಹೋಗುಕ್ಕೆ ಇಷ್ಟೇ ಸಾಕು.

ಸೂರಜ್ಜ : ಇಲ್ಲ ಇವ್ನ್ ನೋಡುದ್ರೆ ಒಳ್ಳೋನ್ ಥರ ಕಾಣ್ತಾನೆ. ಅಂತಾದ್ದೇನೂ ಆಗಕಿಲ್ಲ ಬುಡ್ರಪ್ಪ.

ಭಟ : ಇದ್ದೂರ್ ಕಳ್ಳನ್ನಂಬುದ್ರೂ ಪರೂರ್ ಸಜ್ಜನುನ್ ನಂಬ್ಯಾಡ್ದು ತಾತ. ನಮುಗ್ ಗುರುತಿಲ್ಲ. ಇವ್ನ ಒಳುಗ್ ಬುಡುಕ್ಕಾಗಕ್ಕಿಲ್ಲ.

ಅಜ್ಜ : ಕಾಮಾಲೆ ರೋಗ್ದೋನ್ಗೆ ಕಂಡದ್ದೆಲ್ಲ ಹಳದಿ ಅಂದಂಗೆ ಎಲ್ಲಾರ್ ಮ್ಯಾಲು ಅನ್‌ಮಾನ ಮಾಡ್‌ಬಾರ್ದು ಕಾಣ್ ಮಗ. ಹತ್ರು ಕೂಡಸ್ನೊಂದು; ಪರಸೆ ಕೂಡ ಗೋವಿಂದ ಅಂತ ಒಂದಿಷ್ಟ್ ಬೇಡ್ಕಂಡು ಹೋಯ್ತಾನೆ ಬುಡ್ರಪ್ಪ.

ಭಟ : ಅಜ್ಜ ನೀ ಇಷ್ಟ್ ಯೋಳುದ್‌ಮ್ಯಾಲೆ ಅವ್ನ ಬುಡ್ತೀವಿ. ಅಪ್ಪಾ ಅಣ್ಣಾ. ಸದ್ರ ಕೊಟ್ನಾಯಿ ಸಟ್ಗ ನೆಕ್ಕುಂಗ್ಮಾಡ್ಕಬ್ಯಾಡ. ಸತ್ಯ ಕೆಡ್ಸಲ್ಲ; ಅನಾಚಾರ ಬದುಕ್ಸಲ್ಲ ಗಡ್‌ಬಡ್ ಮಾಡ್ಕಂಡು ಕಷ್ಟುಕ್ ಸಿಗಾಕ್ಕಬ್ಯಾಡ. ಯಾರ್ಗು ಕಾಣ್ದಂಗೋಗ್ಬುಡು.

ವೀರು : ಉಂಡ್ ತಾಟ್ಗೇ ಉಗ್ಯೋನಲ್ಲ ನಾನು. ನಿಮ್ಗೆ ಯಾವ್ ತೊಂದ್ರೇನೂ ಬರ್ದಂಗ್ ನೋಡ್ಕತೀನಿ. ಕುರುಡ್ನೆತ್ತಿಗೆ ಹರ್ನೇ ಕಾವ್ಲಂದಂಗೆ ನಿಮ್ಮನ್ನ ಆ ಶಿವ ಕಾಪಾಡ್ತಾನೆ. ನಿಮ್ಗೆ ಪುಣ್ಯ ಬರ್ಲಿ... (ಮುಂದೆ ನಡೆವನು. ಅಜ್ಜ ಹಿಂಬಾಲಿಸಿ...)

ಸೂರಜ್ಜ : ಅಲ್ಲಪ್ಪ ನಿನ್ನೋಡಿದ್ರೆ ತುಂಬಿದ್‌ಮನೆ ಮಗ ಕಂಡಂಗ್ ಕಾಣ್ತೆ! ಏನಪ್ಪ ನಿನ್ ಸಮಾಚಾರ.

ಪೀರು : ಏನಂತ ಯೋಳ್ಲಿ ಅಜ್ಜಾ ನನ್ ಕಥ್ಯಾ, ಸತ್ತೋರ್ಗೆ ಸಂಗಿಲ್ಲ! ಕೆಟ್ಟೋರ್ಗೆ ನಂಟಿಲ್ಲ ಅನ್ಕೊಂಡಿದ್ದೆ. ಆದ್ರೆ ನಂಗ್ ನೀನ್ ಸಿಕ್ಕಿದ್ದೀಯಾ. ನಿಂಗೆ ನನ್ ಕಥೆ ಯೋಳ್ತೀನಿ.

ಅಜ್ಜ : ಬಾ ಮಗಾ ಇಲ್ ಕೂಕಂಡ್ ಮಾತಾಡುವ ಬಾರಪ್ಪ.

ಪೀರು : ಹ್ಞಾ.. ಆಗ್ಲಿ ತಾತ (ಮೂಲೆಯೊಂದರಲ್ಲಿ ಕೂರುವರು. ಆ ಭಾಗ ಕತ್ತಲಾಗುವುದು)

ಮೇಳ : ಕತೆ ಹೇಳುತಾನೆ ವೀರಣ್ಣ
ಕೂತು ಕೇಳುತಾನೆ ಸೂರಣ್ಣ
ಸತುವಂತೆ ರಾಮವ್ವ ಮುದ್ದು
ಕುಮಾರ ಧರೆಗೆಲ್ಲ ಬಲುಶೂರ!!

## ದೃಶ್ಯ-ಎರಡು

ಮೇಳ : ಸಣ್ಣೂರ ಪಟ್ಟಣದಾಗೆ
ಮಣ್ಣಯ್ಯ ಮಹಾರಾಜಾ
ಮತಿಗೆಲ್ಲ ಮಹಾತಾಯಿ
ಹಿತವಂತೆ ರಾಮವ್ವ
ಸುಖದಿ ಬಾಳುತಲಿದ್ದರು
ಸತಿ-ಪತಿ
ಸುಖದೊಳು ತಾವಿದ್ದರು!!

(ಊರಿನ ದೃಶ್ಯ. ಜನರ ಓಡಾಟ, ಸದ್ದು-ಗದ್ದಲಗಳ ನಡುವೆ ಜನ ಗುಂಪುಗೂಡಿ ಮಾತನಾಡಿಕೊಳ್ಳುತ್ತಿದ್ದಾರೆ)

ಹೆಂಡತಿ : ನಮ್ದೊರೆ ನಮ್ಮುನ್ನೆಲ್ಲ ಏಟ್ ಸಂದಾಕ್ ನೋಡ್ಕತಾ ಅವ್ನೆ? ಪುಣ್ಣಾತ್ಮ. ಮಕ್ಳು ಫಲಾನ ಆ ದ್ಯಾವ್ರು ಕೊಡ್ನಿಲ್ಲ.

ಗಂಡ : ಪಾಪ ರಾಣಿ ರಾಮವ್ವ.. ಆಕಿಗ್ ಮಕ್ಳಿಲ್ಲ ಅಂದ್ರೆ ಆ ದ್ಯಾವ್ರು ಒಳ್ಳೋನಲ್ಲ ಬುಡು. (ಸೂರಜ್ಜನ ಪ್ರವೇಶ)

ಸೂರಜ್ಜ : ಏನ್ರೋ ಗಂಡ ಎಡ್ತಿ ಬಾಳ ಗುಟ್ಟಾಗ್ ಮಾತಾಡ್ಕಂತ ಇದ್ದೀರಿ?

ಗಂಡ : ಓ ಸೂರಜ್ಜ ಬಾಪ್ಪೋವ್. ಇಂಗೇ ಮಾತಾಡ್ತಿದ್ದೋ.

ಸೂರಜ್ಜ : ಅದೇನ್ರಲ ಅಂತೆ ಇಷ್ಟ್ಯಾ. ಈ ಊರ್ನಾಗ್ ನಂಗ್ ಗೊತ್ತಿಲ್ದಂತದ್ದು?

ಹೆಂಡತಿ : ಅದೇ ಕಣಜ್ಜ, ನಮ್ ರಾಜ್ರುಗೆ ಮಕ್ಳಿಲ್ವಲ್ಲ, ಅದ್ಕೆ ಜನಯಲ್ಲ ಅದೇನೇನೋ ಮಾತಾಡ್ಕತ ಇದ್ರಪ್ಪೋ...

ಸೂರಜ್ಜ : ಎಲ್ಬಿಲ್ಲುದ್ ನಾಲ್ಗೆ ಸುಮ್ಕಲ್ಲಿದ್ದಾತು? ಏನೇನೋ ಮಾತಡ್ಕತಿದ್ನ ನಾನು ಕೇಳಿಸ್ಕಂಡೆ. ರಾಣಿ ರಾಮವ್ವನ್ ಕಿಪ್ಲಾ ಬಿದ್ದೈತೆ. ಭೂಮಿ ತೂಕ್ದೆಂಗ್ಳು, ಆ ಯಮ್ಮುನ್ ಮ್ಯಾಲೆ ಅನ್ನಾಯ ನುಡುದ್ರೆ ದ್ಯಾವ್ರೊಳ್ಳೆದ್ ಮಾಡಾಕಿಲ್ಲ.

ಹೆಂಡತಿ : ತಾತಾ ನಮ್ ರಾಜ್ರುಗೇ ಏನೋ ಐಬಿರ್‌ಬೇಕು. ರಾಣಿನ್ನೇ ಯಾಕನ್‌ಬೇಕು ಅಂತೀನಿ.

ಸೂರಜ್ಜ : ಮೆಲ್ಗ್ ಮಾತಾಡಮ್ಮೋವ್! ಯಾರನ ಕೇಳಿಸ್ಕಂಡಾರು.

ಗಂಡ : ಇಲ್ಲ ಇಲ್ಲ ರಾಜ್ನಾಗೇನು ಐಬಿಲ್ಲ. ರಾಮವ್ನೆ ಬಂಜೆ ಎಂಗ್ಸು. ಅವುಳ್ ಕಾಲಿಟ್ಟಳ್ಗೆನೇ ಸಂದಕಿಲ್ಲ.

ಸೂರಜ್ಜ : ಲೇಯ್ ನಿಂದೇ ನಾರ್‍ತ ಅದೆ. ರಾಜ-ರಾಣಿ ಇಸ್ಯ ಮಾತಾಡ್ತಿಯಲ್ಲಲ. ಮೊದ್ಲು ನಿಂದ್ ತೊಳ್ಕೊ.

ಹೆಂಡತಿ : ಅಯ್ಯೋ ಸಮುಗ್ಯಾಕ್ಬೇಕು ದೊಡ್ಡೋರಿಚಾರ. ಬಪ್ಪಾ ನೀ ಮಡುಗ್ದಂಗಿರು ಅಂತ, ಬಾ ಬೇಕಾದಷ್ಟ್ ಕೇಮ ಅಯ್ತೆ ಮಾಡನ.

ಸೂರಜ್ಜ : ಒಳ್ಳೋರ್ ಪಾಪ ಹಳ್ಳಿಲ್ಕಳ್ಬಂಗ ಅವುರ್ ಕರ್ಮ ಏನೈತೊ. ಮಕ್ಳು ಫಲ ಇಲ್ಲುದ್ಕೆ ಯಾರ್ನಂದೇನ್ ಪ್ರಯೋಜ್ನ? ನಡೀರಪ್ಪ ಅತ್ತ (ನಿರ್ಗಮಿಸುವರು).

ಮೇಳ : ಯಾರಿಟ್ಟ ಶಾಪಾವೋ
ಇದು ಯಂಥ ಪಾಪವೋ
ಕಾಡಿದೆ ಬಿಡದೆ ನೋಡಲ್ಲಿ
ಸಣ್ಣೂರ ದೊರೆಗೆ ಸುಖವೆಲ್ಲಿ?

## ದೃಶ್ಯ-ಮೂರು

(ಬೆಳಕು ಬಂದಾಗ ಮಣ್ಣಯ್ಯ ಚಿಂತೆಯಿಂದ ಕುಳಿತಿದ್ದಾನೆ. ರಾಮವ್ವನ ಪ್ರವೇಶ)

ರಾಮವ್ವ : ಸ್ವಾಮಿ ಯಾಕ್ ಯೋಚ್ನೆ ಮಾಡ್ತಿದ್ದೀರಿ?

ಮಣ್ಣಯ್ಯ : ಏನೂ ಅಂತ ಯೋಳ್ಲಿ. ಜನ ಅನ್ನೋದ್ನ ಈ ಕಿವ್ಯಾಗ್ ಕೇಳ್ಕಾಗೋಲ್ಲು. ಗೊಡ್ಡ್ರಾಜ-ರಾಣಿ ಅಂತ ಹಂಗಿಸ್ತಾರೆ.

ರಾಮವ್ವ : ಯಾವ್ ಜನ್ಮುದ್ ಕರ್ಮಾನೋ ಏನೋ ಈ ಜನುಮ್ದಾಗೆ ಕಾಡ್ತೈತೆ. ಅವುನ್ ನಡುಸ್ದಂಗೆ ನಾವ್ ನಡೀಬೇಕಲ್ವೆ?

ಮಣ್ಣಯ್ಯ : ಅಂಗನ್ಕಂಡು ಸಮಾಧಾನ್ವಾಗಿರೋದ್ ಕಲಿಬೇಕು.

ರಾಮವ್ವ : ಅಲ್ಲಾ ನಾ ಒಂದೇಳ್ತಿನಿ, ನಡುಸ್ಕೊಟ್ಟೀರಾ?

ಮಣ್ಣಯ್ಯ : ಯಾವತ್ತಾದ್ರು ನಿನ್ ಮಾತ್ಗೆ ಎದ್ರಾಡಿದ್ದೀನಾ?

ರಾಮವ್ವ : ಹಾಂ.... ಏನಿಲ್ಲ... ನೀವು... ಅದು...

ಮಣ್ಣಯ್ಯ : ಅದೇನಂತ ಸರ್ಯಾಗೇಳ್‌ಬಾರ್ದೆ?

ರಾಮವ್ವ : ಏನು ಇಲ್ಲ ಮಂತೆ, ನೀವು.... ನಿಮ್ಗೆ.... ಅದೂ...

ಮಣ್ಣಯ್ಯ : ಹ್ಲಾ... ನಂಗೇನಾಗೈತೆ? ಸರ್ಯಾಗೇಳ್ಬಾರ್ದೆ?

ರಾಮವ್ವ : ಅಲ್ಲಾ ನೀವ್ಯಾಕಿನ್ನೊಂದ್ ಮದ್ವಾಗ್‌ಬಾರ್ದು?

ಮಣ್ಣಯ್ಯ : ಅಯ್ಯೊ ಮಂಕ ಜನ ಅಂದ್ರು ಅಂತ ಯಾಕ್ತಲೆ ಕಡಿಸ್ಕಂಡಿದ್ದಿ? ಸುಮ್ಕಿರು ಏನೇನೋ ಯೋಳ್‌ಬ್ಯಾಡ.

ರಾಮವ್ವ : ಇಲ್ಲ ಅನ್‌ಬ್ಯಾಡ್ರಿ. ಇವೊಂದ್ ಮಾತ್ನಡಿಸ್ಕೊಡ್ರಿ.

ಮಣ್ಣಯ್ಯ : ಇಲ್ಲಿಬಾರ್‌ಗೂಳ ತಲೆಗ್ ತುಂಬ್ಕಬ್ಯಾಡ. ನಿಂಗ್ಸವ್ತಿ ತರುಕ್ಕೆ ನಂಗಿಷ್ಟ ಇಲ್ಲ.

ರಾಮವ್ವ : ಸ್ವಾಮಿ ನಮ್ ರಾಜ್ಯುಕೊಬ್ಬ ಉತ್ರಾಧಿಕಾರಿ ಬೇಕು. ನಿಮ್ ಪಾದ ಇಡ್ದು ಬೇಡ್ಕತೀನಿ, ಒಪ್ಕಳಿ.

ಮಣ್ಣಯ್ಯ : ಯಾಕ್ಲುಮ್ನೆ ಏನೇನೋ ಯೋಚ್ನೆ ಮಾಡ್ತೀ. ನೋಡನ ಏನಾಯ್ತುದೋ ನೀ ಸುಮ್ಕಿರು

ರಾಮವ್ವ : ಸ್ವಾಮಿ ನೀವೊಪ್ನಿಲ್ಲ ಅಂದ್ರೆ ನನ್‌ಮ್ಯಾಲಾಣೆ, ನಮ್ ಮನ್‌ದೇವುರ್ ಮ್ಯಾಲಾಣೆ. ನೀವೊಪ್ಕಳ್ಳೇಬೇಕು.

ಮಣ್ಣಯ್ಯ : ಆಯ್ತು, ವಿಧಿ ಬರ್ದಿರೋ ಸಾಲ್ನ ತಿದ್ ಬರ್ಯುಕ್ಕಾಯ್ತದ? ನಿನ್ನಿಚ್ಛೆ ಬಂದಂಗ್ ಮಾಡು (ಮಣ್ಣಯ್ಯನ ನಿರ್ಗಮನ. ಮಂತ್ರಿ ಆಗಮನ.)

ರಾಮವ್ವ : ಮಂತ್ರಿಗಳೆ, ಪಂಡ್ರಿ ರಾಯುರ್ನ ಪಡುವ್ಲಾಗೋಗಿ ರೂಪುಕ್ ಮಿಗ್ಲಾದೊಂದೆಣ್ಣುಡಿಕಂಡ್ ಬರುಕ್ಕೇಳ್ರಿ.

ಮಂತ್ರಿ : ತಾಯಿ... ಹೆಣ್ಣುಡ್ಕಿ... ಯಾ.. ನಂಗರ್ಥಾಗ್ನಿಲ್ಲ!

ರಾಮವ್ವ : ಹೆಚ್ಗೆ ಮಾತ್ ಬ್ಯಾಡ, ನಾ ಯೋಳ್ದಷ್ಟ್ ಮಾಡಿ. ಹ್ಲಾ ಅಂಗೇ ತಿಪ್ಪಣ್ಣುನ್ನ ಕೊಂಕ್ಣುಕ್ಕೆ, ನಮ್ಮುಪ್ಪಣ್ಣಯ್‌ನೋರ್ನ ತೆಂಕ್ಣುಕ್ಕು ಕಳ್ಸಿ. ಎಲ್ಲಾ ಕಡೆನು ಹುಡುಕ್ಲಿ. ಯಾ ದಿಕ್ಕಿಂದಾದ್ರು ಸರಿ, ಒಳ್ಳೆ ಹೆಣ್ಣುಡಿಕ ಬರುಕ್ಕೇಳಿ.

ಮಂತ್ರಿ : ಆಯ್ತು ತಾಯಿ ಅಪ್ಣೆ ಅಂದೆ. (ನಿರ್ಗಮಿಸುತ್ತಿದ್ದಂತೆ ಮುತ್ತಿನ್ ಶೆಟ್ಟಿ ಆಗಮನ..)

ರಾಮವ್ವ : ಒಳ್ಳೆ ಸಮ್ಯುಕ್ ಬಂದ್ರಿ ಸಟ್ರೆ. ನೀವು ದೇಸ್ದೇಸಾನೆಲ್ಲ ಸುತ್ತೋರು. ನಿಮ್ ಮ್ಯಾಲೆ ನಂಗೆ ನಂಬ್ಕೆ ಐತೆ. ನಮ್ಮಾರಾಜ್ರುಗೆ ಮುತ್ನಂತೆ ಒಂದೆಣ್ಣುಡಿಕ ಬನ್ನಿ.

ಮುತ್ತಿನ ಶೆಟ್ಟಿ : ಅಲ್ಲಾ ತಾಯಿ ಮಾರಾಜ್ರುಗೆ ಎಣ್ಣು...!

ರಾಮವ್ವ : ಊ್ಹ ಮಾರಾಜ್ರುಗೇ. ರೂಪುಕ್ ಮಿಗ್ಲಾದೆಣ್‌ಬೇಕು.

ಮುತ್ತಿನ ಶೆಟ್ಟಿ : ಅಲ್ಲವ್ವ ನೀವಿರ್ವಾಗ, ಮಾರಾಜ್ರುಗೆ ಮದ್ವೆ-ಎಣ್ಣು... ನಂಗರ್ಥ ಆಯ್ತಿಲ್ಲ.....

ರಾಮವ್ವ : ಹೌದು ಸಟ್ರೇ ಮಾರಾಜ್ರುಗೆ ಮದ್ವೆ! ಯಾಕನ್ಮಾನ್ವೇ?

ಮುತ್ತಿನ ಶೆಟ್ಟಿ : ನಿಮ್ಗೆ ಸವ್ತಿ ಬರಾದು ನಂಗಂತು ಇಷ್ಟ ಇಲ್ಲವ್ವ.

ರಾಮವ್ವ : ನಾ ಯೇನ್ ಮಾಡ್ಲಿ ಸಟ್ರೆ? ನಂಗಂತು ಮಕ್ಳು ಫಲ ಇಲ್ಲ. ನಮ್ ರಾಜ್ಯುಕ್ಕೆ ದಿಕ್ಕು ದೆಸೆ ಬ್ಯಾಡ್ವೆ?

ಮುತ್ತಿನ ಶೆಟ್ಟಿ : ಅಲ್ಲವ್ವಾ, ಯಾರ್ದೋ ಮಕ್ಳು ನಿಮ್ ಮಕ್ಳಾಗಕ್ಕಿಲ್ವಲ್ಲ. ಇನ್ನೊಂದ್ ಕಿತ ಯೋಚ್ನೆ ಮಾಡ್ರವ್ವ.

ರಾಮಪ್ಪ : ಯೋಚ್ನೆ ಮಾಡುಕ್ಕೇನು ಉಳ್ದಿಲ್ಲ ಸೆಟ್ರೆ. ನಾ ಯೋಳ್ದಂಗ್ ಮಾಡ್ರಿ.

ಮುತ್ತಿನಸೆಟ್ಟಿ : ಹ್ವಾ... ತಾಯಿ ಒಂದ್ ಮಾತ್ ಕ್ಯೋಳ್ಲೆ?

ರಾಮಪ್ಪ : ಕ್ಯೋಳಿ, ಅದ್ಕೇನಂತೆ.

ಮುತ್ತಿನ ಸೆಟ್ಟಿ : ಮಾರಾಜ್ರು ಈ ಮದ್ವೆಗೆ ಒಪ್ಪಿದ್ವಾರಾವ್ವಾ?

ರಾಮಪ್ಪ : ಹ್ವೂ ಒಪ್ಪಿದ್ದೀನಿ.

ಮುತ್ತಿನ ಸೆಟ್ಟಿ : ಒಪ್ಪಿದ್ದೀರಾ? ಯಾಕ್ರವ್ವ ಇಂಥ ಕೆಲ್ಸ ಮಾಡುದ್ರಿ?

ರಾಮಪ್ಪ : ದೊರೆಗಾಗ್ಲಿ, ನನ್ಗಾಗ್ಲಿ ಜನ ಅನ್ನೋದ್ನ ಕೇಳಕ್ಯಾಗಕ್ಕಿಲ್ಲ. ತೋಳ ಹಳ್ಳುಕ್ ಬಿದ್ರೆ ಆಳ್ಗೊಂದ್ ಕಲ್ಲಂದಂಗೆ ಎಲ್ಲಾದ್ಕು ನನ್ನೇ ಕಾರ್ಣ ಮಾಡಿ ಹಂಗ್ಸೋದ್ನ ಕೇಳ್ ಬ್ಯಾಸ್ರಾಗಿ ಈ ಸಿರ್ಧಾರುಕ್ ಬಂದಿವ್ನಿ.

ಮುತ್ತಿನ ಸೆಟ್ಟಿ : ಸಂಕ್ಟಾನ್ನಾದು ಯಾವಾಗ್ಲೂ ಸತ್ತಂತ್ರುಗೆ ಬರಾದು ಕಾಣ್ರವ್ವ. ಇರ್ಲಿ ಆ ದ್ಯಾವ್ರಾಟ ಯಂಗ್ ನಡಿತದೋ ನಡೀಲಿ. ನಾ ಬತ್ತೀನಿ ಕಾಣ್ರವ್ವ. ನಿಮ್ಮಿಷ್ಟದಂಗೆ ಎಣ್ಣ ಉಡುಕ ತತ್ತೀನಿ. (ನಿರ್ಗಮಿಸುವನು.)

ಮೇಳ : ಮೂಡ್ಲಾಗೆ ಮುತ್ತಿನ ಸೆಟ್ಟಿ
ಪಡುವ್ಲಾಗೆ ಪಂಡರಿರಾಯ
ತೆಂಕಣಕೆ ತಿಪ್ಪಣಸ್ವಾಮಿ
ಕೊಂಕಣಕೆ ಕ್ವಾರ್‌ಮೀಸೆ ನವಣ
ದಿಕ್ಕಿಗೊಬ್ರಂತೆ ಹೊರಟಾರೋ
ರೂಪುಕ್ ಮಿಗ್ಲಾದೆಣ್ಣು ತರ್ಲಾಕೋ.....॥

## ದೃಶ್ಯ - ನಾಲ್ಕು

ಮುತ್ತಿನ ಸೆಟ್ಟಿ : (ಊರಿನ ದೃಶ್ಯ) ರಾಣಿ ರಾಮವ್ವ ದೇವ್ರಂತ ಹೆಂಗ್ಸು. ಪುಣ್ಯಾತ್ಗಿತ್ತಿ. ತನ್ ಸುಖಾನೆ ಬಲಿಕೊಟ್ಟು ರಾಜುನ್ಗೆ ಒಂದಲ್ಲ ಎರ್ಡಲ್ಲ ಅಂತ ಮೂರ್ಮದ್ವೆ ಮಾಡ್ಸುದ್ರು ಅವ್ರಲ್ಲಿ ಯಾರೂ ಕಂದುನ್ನೆರ್ಲಿಲ್ಲ. ಕೈಬೀಸ್ ನಡೀಲಿಲ್ಲ.

ಹೆಂಡತಿ : ಸೆಟ್ರೆ ಎಲ್ಲಾದ್ಕು ಎಂಗ್ಸುರ್ನೆ ಅಂದ್ಬುಡ್ತೀರಿ ಕಾಣ್ರೆ. ಗಂಡುಸ್ರು ದೋಸ ಗೊತ್ತಾಗದೇ ಇಲ್ಲ. ನೋಡ್ರಿ ಮಣ್ಣಯ್ ದೊರೆ ರಾಮವ್ವನ್ ಮ್ಯಾಲೆ ಮೂರೆಣ್ ತಂದಿ ಮಾಡ್ಕಂಡ, ಏನಾಯ್ತು? ನಾನವತ್ತೆ ಯೋಳ್ಳಿಲ್ವ ನಮ್ ದೊರ್ಯಾಗೆ ಏನೋ ಐಬೈತೆ ಅಂತಾವ.

ಗಂಡ : ಏ... ಜೋರಾಗ್ ಮಾತಾಡ್‌ಬ್ಯಾಡ್ವೇ. ಸುತ್‌ಮುತ್ತ ಯಾರನ ಕೇಳಿಸ್ಕಂಡು ರಾಜುನ್ಗೇಳಾರು.

ಹೆಂಡತಿ : ಅಯ್ಯೋ ಇದ್ದುದ್ದಿದ್ದಂಗೇಳುದ್ರೆ ಎದ್ದಂದೆದ್ದೊಗ್ರಂತೆ. ಯೋಳುದ್ರೆ ಏಳ್ಕಳ್ಳಿ ತಕ. ನಾಸಂದಿದ್ರಾಗೆ ತಪ್ಪೇಸ್ಯೆತೆ? ಈ ಗಂಡುಸ್ರು ಯಲ್ಲ ತಪ್ಪು ಎಂಗುಸ್ರು ಮ್ಯಾಲೆ ಆಕ್‌ಬುಡ್ತಾರೆ. ತಮ್ಮುದ್ ಮಾತ್ರ ಯಲ್ಲ ಸರ್ಯಾಗಿದೆ ಅನ್ನಬುಡ್ತಾರೆ. ಯೋಳ್ಳಿ ತಕ ಆ ಗೂಡ್‌ರಾಜುಸ್ಗೆ. ಮಾನ-ಮರ್ಯಾದೆ ಇಲ್ದೋನು. (ಜೋಯಿಸನೊಬ್ಬನ ಪ್ರವೇಶ)

ಮುತ್ತಿನ ಶೆಟ್ಟಿ : ಬನ್ನಿ ಬನ್ನಿ ಜೋಯಿಸ್ರೆ.

ಜೋಯಿಸ : ಏನ್ರಯ್ಯ ಬಾಳ ಚರ್ಚೆ ಮಾಡ್ತಿದ್ದೀರಿ.

ಮುತ್ತಿನ ಶೆಟ್ಟಿ : ಏ ಇಂಗೆ ಬುದ್ಧಿ ಅದೂ ಇದೂ ಮಾತಾಡ್ತಿದ್ದೊ. ಅಂಗೆ ನಮ್ ದೊರೆ ಮಣ್ಣಯ್ನೋರ್ ಮಾತ್ಬತ್ತು.

ಜೋಯಿಸ : ಓ... ಅದಾ ವಿಷ್ಯಾ, ಮಕ್ಕಿಲ್ಲುದ್ ಮನೆ ರೊಕ್ಕ ಇಲ್ಲುದ್ ಬಾಳು. ಆ ಮನ್ಗೆ ಮಕ್ಳು ಭಾಗ್ಯ ಇಲ್ಲ. ನಾನು ಗುಣಾಕಾರ ಭಾಗಾಕಾರ ಯಲ್ಲ ಮಾಡ್ನೋಡ್ದೆ. ಪಂಚಾಂಗುದ್ ಕಟ್ನೆಲ್ಲ ತಿರ್ವಾಕ್ದೆ ಕಾಣಯ್ಯ. ಹ್ಲೂ ಹ್ಲೂ ದೊರೆ ಮಣ್ಣಯ್ಯುನ್ಗೆ ಮಕ್ಳು ಫಲ ಇಲ್ವೇ ಇಲ್ಲ.

ಮುತ್ತಿನ ಶೆಟ್ಟಿ : ದೋಸ ಏನರ ಇದ್ರೆ ಸಾಂತಿ-ಗೀಂತಿ ಮಾಡ್ಬೋದಲ್ಲ ಸಾಸ್ತ್ರಿಗಳೇ.

ಜೋಯಿಸ : ಮಂತ್ರುದಿಂದ ಮಾವುನ್ ಕಾಯುದ್ರುತ್ತೇನಯ್ಯಾ? ಕೈಲಾಗ್ದೋನು ಮೈ ಪರುಚ್ಕೊಂಡ ಅಂದಂಗೆ ಒಂದಲ್ಲ ಮೂರೆಣ್ತಾಂದ್ ಮಾಡ್ಕಂಡ! ಮಕ್ಳಾದ್ವೆ? ಮೂರಲ್ಲ; ಮೂವತ್ ಕಟ್ಟುದ್ರು ಅವ್ನುಗ್ ಮಕ್ಳು ಭಾಗ್ಯ ಇಲ್ಲ.

ಮುತ್ತಿನ ಶೆಟ್ಟಿ : ಅಂಗಂತೀರಾ! ನಮ್ ದೊರ್ಗೆ ಮಕ್ಳು ಭಾಗ್ಯಾನೆ ಇಲ್ಲ ಅಂತೀರಾ?

ಜೋಯಿಸ : ಬೆಳ್ಗ್ಗ ರಾಮಾಯ್ಣ ಕೇಳಿ ರಾಮುನ್ಗು ಸೀತ್ಗು ಏನಾಗ್ ಬೇಕು ಅಂದ್ರಂತೆ. ನಾನಿಲ್ಲಿಗಂಟ ಒಡ್ಕೊಂಡಿದ್ದು ಅದೇ ಕಾಣಯ್ಯ. ರಾಜುನ್ಗೆ ಮಕ್ಳಾಗದು-ಅಜ್ಜಿಗಲ್ಬರಾದು ಎರ್ಡೂ ಒಂದೇ ಕಾಣಯ್ಯ. ನನ್ನಂಥೋನಾಗಿದ್ರೆ ತಲೆ ಮ್ಯಾಲ್ ಬಟ್ಟೆ ಹಾಕ್ಕಂಡು ದೇಶಾಂತ್ರ ಹೋಗ್ಬುಡ್ತಿದ್ದೆ.

ಗಂಡ : ಹೋಗ್ನಿ ಬುಡಿ ಬುದ್ಧಿ ದೊಡ್ಡೋರಿಸ್ಯಾ ನಮುಗ್ಯಾಕೆ? ಬಡ್ಡಾ, ಮಡುಗ್ದಂಗಿ ರಂತ, ಲೇ ನಡ್ಯೆ ಕ್ಯಾಮೆ ನೋಡಸ.

ಹೆಂಡತಿ : ಆ ಹಾ ಹಾ.. ಆಡೋದೆಲ್ಲ ಆಡ್ಬುಟ್ಟು ಕೊನೇಲಿ ವಗ್ರಾಣೆ ಹಾಕ್ಬುಡು. ಸ್ವಾಮಿ ಸಾಸ್ತ್ರಿಗೊಳ ಹೋಗಿ ನಿಮ್ ಪಾಡುಗ್ ನೀವು. (ಒಬ್ಬೊಬ್ಬರಾಗಿ ಹೋಗುವರು. ಎಲ್ಲವನ್ನೂ ಕೇಳಿಸಿಕೊಂಡು ನಿಂತಿದ್ದ ದೊರೆ)

ಮಣ್ಣಯ್ಯ : ಇರ್ಲಿ. ಇದ್ಕೊಂದ್ ದಾರಿ ಹುಡುಕ್ತೀನಿ (ನಿರ್ಗಮಿಸುವನು)

ಮೇಳ : ಮುದುಡಿದ ಮನದ ಮಣ್ಣಯ್ಯ ದೊರೆಯು

ಮಧ್ಯರಾತ್ರಿಯಲ್ಲಿ ಬುದ್ಧನೆದ್ದು ನಡೆದಂತೆ
ಬುದ್ಧಿ ಭ್ರಮಣೆಯಲಿ ಎದ್ದು ತಾನೋಡಿದ
ಕತ್ತಲ ರಾತ್ರಿಯೊಂದೇ ಅವುನ ಜತೆಯಂತೆ॥

## ದೃಶ್ಯ - ಐದು

ಸೂರಜ್ಜ : (ಸ್ವಗತ) ಬೆಳ್ಳಂಬೆಳಗಾಯ್ತು. ಅರಮನ್ಯಾಗೆ ರಾಜುನ್ ಸುಳ್ವಿಲ್ಲ. ರಾಜ ಇಲ್ದರ್ಮನ್ಗೆ ಸೂತ್ಕ ತುಂಬ್ಕಂಡದಲ್ಲ. ಓ.. ರಾಮವ್ವ ಇತ್ಲೇ ಬತ್ತಾ ಅವ್ಳೆ!

ರಾಮವ್ವ : (ಸಂತೋಷದಿಂದ) ಏನ್ ಸೂರಜ್ಜ ಯಾಕಪ್ಪೋವ್ ಒಬ್ನೆ ನಿಂತ್ಕಂಡೆ? ನಮ್ಮರಾಜ್ರು ಬಂದ್ರಾ ಈ ಕಡೆಲ್ಲಾನ?

ಸೂರಜ್ಜ : (ಪೆಚ್ಚು ಮೋರೆ ಹಾಕಿಕೊಂಡು) ಏ... ಇಲ್ಲ ತಾಯಿ ನಾನ್ ನೋಡ್ದಂಗಿಲ್ಲ... ಈ ಕಡೆ ಬಂದಂಗಾಗ್ನಿಲ್ಲ......

ರಾಮವ್ವ : ಯಾಕಜ್ಜ ಹ್ಯಾಪ್ ಮೋರೆ ಹಾಕ್ಕಂಡ್ ನಿಂತ್ಕಂಡೆ? ಏನಾಯ್ತಂತ ಯೋಳು ಮಾರಾಯ.

ಸೂರಜ್ಜ : ಏನ್ ತಾಯಿ ಬಾಳ ಆನಂದ್‌ದೆಲಿದ್ದೀರಿ?

ರಾಮವ್ವ : ನಾನು ಮಾರಾಜ್ರುಗ್ ಮಾತ್ರ ಯೋಳಾದು. ಯಾರ್ಗೂ ಏಳಕ್ಕಿಲ್ಲ. ಅವುರ್ಗೆ ಆನಂದದ್ ಸಮಾಚಾರ ತಂದಿವ್ನಿ. ತಕ ಸೀ ತಂದಿವ್ನಿ, ನಿನ್ ಬಾಯ್ಗ್ಗೆ ತುಸ ಹಾಕ್ತೀನಿ.

ಸೂರಜ್ಜ : ಏನವ್ವ ಅದು ಆನಂದುದ್ ಸಮಾಚಾರ, ನಾ ತಿಳ್ಕಬಾರ್ದಾ?

ರಾಮವ್ವ : ಈ ರಾಜ್ಯುಕ್ಕೆ ಉತ್ರಾಧಿಕಾರಿ ಬತ್ತಾ ಅವ್ನೆ.

ಸೂರಜ್ಜ : ಅಯ್ಯೋ! ತಡವಾಗೋಯ್ತಲ್ಲ ತಾಯಿ! ಇನ್ನೊಂದೇ ಒಂದಿನ ಮುಂಚಿತ್ವಾಗ್ಯೋಳಿದ್ರೆ...

ರಾಮವ್ವ : ಏನಾಗ್ತಿತ್ತಪ್ಪ....?

ಸೂರಜ್ಜ : ಆಗೋ ಅನಾಹುತ ತಪ್ತಿತ್ತು ತಾಯಿ

ರಾಮವ್ವ : ಏನಾಗೈತಪ್ಪ ಅಂತೆ ಅನಾಹುತ?

ಸೂರಜ್ಜ : ಏನು ಅಂತ ಯೋಳ್ಲಿ ತಾಯಿ! ಸಣ್ಣೂರ್ ಪಟ್ಣುಕ್ಕೆ ಸೂತ್ಕ ಬಡ್ಕಂಬುಟ್ಟಿದೆ.

ರಾಮವ್ವ : ಯಾರಾದ್ರೂ ಸತ್‌ಗಿತ್ತೋದ್ರೇನೋ ಯಪ್ಪ?

ಸೂರಜ್ಜ : ಸತ್ ಸುದ್ಗಿಂತ ಕಠೋರ್ವಾಗದೆ ತಾಯಿ, ನಿಮುಗ್ ಗೊತ್ತಿಲ್ಲುದ್ ಸತ್ಯ.

ರಾಮವ್ವ : ಅದೇನಾಯ್ತು ಅಂತ ಹೇಳೋ ಮಾರಾಯ. ನನ್ ತಾಳ್ಮೆ ಪರೀಕ್ಷೆ

ಮಾಡ್‌ಬ್ಯಾಡ!

ಸೂತ್ರಧಾರ : ಯೋಳ್ತೀನಿ, ಮನ್ಸ ಗಟ್ಟಿ ಮಾಡ್ಕಂಡ್ ಕ್ಯೋಳ್‌ಬೇಕು.

ರಾಮಯ್ಯ : ಅದೇನು ಅಂತ ಏಳೋ...

ಸೂತ್ರಧಾರ : ಏನಿಲ್ಲ ತಾಯಿ, ದೊರೆ ಮಣ್ಣಯ್ನೋರು, ಜನ್ರು ಮಾತ್ ಕೇಳ್ನಾರ್ದೆ ದೇಸಾಂತ್ರ ಹೋಗ್‌ಬುಟ್ಟವ್ರೆ.

ರಾಮವ್ವ : ಅಯ್ಯಾ ಸೂತ್ರಧಾರ ತಮಾಸೆಗೆ ಮಿತಿಯಿರ್ಬೇಕು. ಏನೇನೋ ಮಾತಾಡ್ ಬ್ಯಾಡ. ನಮ್ ದೊರೆಗೆ ದೇಸಾಂತ್ರ ಹೋಗೋ ಅಂತಾದ್ದೇನಾಗೈತೆ?

ಸೂತ್ರಧಾರ : ಏನಿಲ್ಲ ತಾಯಿ, ಗೊಡ್ರಾಜ ಅಂತ ಜನ ಅನ್ನೋದ್ನ ಕ್ಯೋಳ್ನಾರ್ದೆ ಹೊಂಟ್ಬುಟ್ಟವ್ರೆ ಮಾರಾಜ್ರು. ಸಣ್ಣೂರ್ ಪಟ್ಣಾನೆ ದುಃಖ ಮಾಡ್ತಾ ಅದೆ ಕಾಣ್ರವ್ವ.

ರಾಮವ್ವ : ಅಯ್ಯೋ... (ತಲೆಮೇಲೆ ಕೈ ಹೊತ್ತು ಕೂರುವಳು.)

ಮೇಳ : ಪತಿಯಿಲ್ದ ಪರುದೇಸಿ ಮಾಡ್ದಾ ಶಿವ್ನೇ
ನನ್ನ ಶೋಕ ಕೇಳೋರು ಯಾರೊ ಶಿವ್ನೆ
ನಂಬಿದ ದೈವವೇ ಕೈಕೊಟ್ವೆಯಾ ನೀನು
ಸಾಕು ಮಾಡಪ್ಪ ನಿನ್ನ ನಾಟಕವಾ!

## ದೃಶ್ಯ - ಆರು

ಮೇಳ : ಬಂದನು ಬಂದಾನು ಮಣ್ಣಯ್ಯ ಬಂದಾನು
ಸಣ್ಣೂರ ದೊರೆಯು ಬಂದಾನು
ಧಾವಿಸಿ ಬಂದಾನು! ತಾನೋಡಿ ಬಂದಾನು
ಕಾತರ ತುಂಬಿದ ಕನಸುಗಳೊತ್ತೂ
ಆತುರದಿಂದಲಿ ಬಂದಾನು!

ಸೂರಜ್ಜ : (ಕಟ್ಟೆ ಮೇಲೆ ಕುಳಿತು ಕೆಲವರೊಡನೆ ಹರಟುತ್ತಿದ್ದಾನೆ.) ಲೇ... ಲೇ... ನೋಡ್ರೋ ಅಲ್ಲಿ... ನಮ್ ದೊರೆ ಮಣ್ಣಯ್ಯ ಕಂಡಂಗ್ ಕಾಣ್ತೆಲ್ವಾ ಆ ಯಪ್ಪ?

ವ್ಯಕ್ತಿ ೧ : ಕಂಡಂಗ್ ಕಾಣಾದೇನಜ್ಜ... ನಮ್ ದೊರ್‍ಗೊಳೆ..

ಸೂರಜ್ಜ : ಈಟ್‌ದಿನ ಎಲ್ಲೋಗಿದ್ನೋ ಏನೋ ಈಗ್ ಬತ್ತಾವ್ನೆ ನೋಡು.

ವ್ಯಕ್ತಿ ೨ : ಇಂಗೇ ಊರೂರ್ ತಿರಿಕ್ಕೊಂಡು ಬ್ಯಾಸ್ರ ಕಳ್ಕ ಬಂದಿರ್ಬೇಕು. (ಅಷ್ಟರಲ್ಲಿ ಮಂತ್ರಿಯ ಆಗಮನ)

ಸೂರಜ್ಜ : ಮಂತ್ರಪ್ಪಾ ಅಗಾ ನೋಡು ಮಾರಾಜ್ರು ಬಂದವ್ರೆ. ಕರ್ಕಂಡು ಅರ್‍ಮನೆಗೋಗು.

ಮಂತ್ರಿ : ಹ್ಲಾ... ನಮ್ ದೊರ್‍ಗೊಳೆ.. (ಹತ್ತಿರ ಓಡಿ ಹೋಗಿ) ಯತ್ತೋಗ್ಬುಟ್ಟಿದ್ರಿ ಬುದ್ದಿ?

ಮಣ್ಣಯ್ಯ : ಮಂತ್ರಿ ಜನ ಆಡೋ ಮಾತು ಮನಸ್ ಕೆಡಿಸ್ಬುಟ್ಟಿತ್ತು. ಹಿಮಾಲಯದ್ ಮೂಲ್ಕೆ ಪಸ್ಗಾಗೆ ಎಂತದೋ ಬೇರ್ ಹುಡಿಕಂಡ್ ತಿಂದ್ರೆ ಮಕ್ಕು ಫಲವುಂಟು ಅಂದ್ರು. ಬೇಕಾದ್ದಾಗ್ಲಿ ಅಂತ ರಾತ್ರೋ ರಾತ್ರಿ ಯಾರ್ಗು ಯೋಳ್ದೆ ಹೋಗ್ ಬುಟ್ಟೆ.

ಮಂತ್ರಿ : ಸಣ್ಣೋರ್ ಪಟ್ಣಾನ ಕಣ್ಣೀರ್ ಕಡ್ಲಾಗ್ ತಳ್ಬುಟ್ಟು ಯೋಳ್ದೆ ಕ್ಯೋಳ್ದೆ ಹೋಗ್ ಬುಡಾದಾ?

ಮಣ್ಣಯ್ಯ : ಈಗ ಹಿಂದಿರುಗ್ ಬಂದ್ನಲ್ಲ ಮಂತ್ರಿ, ಎಲ್ಲಾ ಸರಿ ಆಯ್ತುದೆ ಬುಡು. ನಡಿ ಮನೆಗೋಗನ. (ಹೊರಡುವರು. ಆ ಭಾಗ ಕತ್ತಲಾಗುವುದು.)

ದಾಮಿನಿ : ಅಕ್ಕಾ ಅಕ್ಕಾ. ಬನ್ರೇ ಮಾರಾಜ್ರು ಬಂದವ್ರೆ.

ಕಾಮಿನಿ : ಆರ್ತಿ ತಕಂಬನ್ನಿ ಬ್ಯಾಗ್ ಬ್ಯಾಗ.

ಭಾಮಿನಿ : ಏಟ್ ದಿನ ಆಗ್‌ಬುತ್ತು ಸ್ವಾಮಿ, ನಮ್ಮುನ್ನೆಲ್ಲ ಬುಟ್ಬುಟ್ಟು ಹೋಗ್ಬುಟ್ರೆ ನಮ್‌ಗತಿ ಏನಾಗ್ಬೇಕು?

ದಾಮಿನಿ : ಅದೆಲ್ಲ ಹಳೀ ಕತೆ ಯಾಕೀಗ? ದೊರ್ಗೋಳ್ ಬಂದ್ರಲ್ಲ ಅಷ್ಟೇ ಸಾಕು, ಯಾಕಂಗ್ ನಿಂತೆ? ಎತ್ತು ಆರ್ತೀಯಾ

ಕಾಮಿನಿ : ಅಯ್ಯೊ ಮಾರಾಜ್ರುನ್ ನೋಡುದ್ ಸಂಭ್ರಮ್‌ದಾಗೆ ಆರ್ತಿ ಬೆಳ್ಗದೆ ಮರ್ತೋದೆ. ಬನ್ನಿ ಯಲ್ಲಾ ಸೇರಿ ಆರ್ತಿ ಬೆಳ್ಗನ...

ಮಣ್ಣಯ್ಯ : ನಿಲ್ಸಿ ಆರ್ತೀನಾ... ಎಲ್ಲಿ ರಾಮವ್ವ ಕಾಣ್ತಿಲ್ವಲ್ಲಾ....

ದಾಮಿನಿ : ಸ್ವಾಮಿ ರಾಜ್ರೆ ಏನಂತ ಯೋಳಾದು, ಅವುಳ್ ಕಥ್ಯಾ?

ಕಾಮಿನಿ : ಏ ಸುಮ್ನಿರಕ್ಕ ಮಾರಾಜ್ರುಗೆ ಮೊದ್ಲೇ ಬೇಜಾರಾಗದೆ, ತಂದಾಕ್ ತಮಾಸೆ ನೋಡ್ಡಂಗೆ ಏನೇನೋ ಯೋಳಿ ಬ್ಯಾಸ್ರ ಮಾಡಿಸ್‌ಬ್ಯಾಡ.

ಬಾಮಿನಿ : ಅಯ್ಯೊ ಒಡ್ಲಾಗಿನ್ ಸತ್ಯಾನ ಏಟ್‌ದಿನ ಅಂತ ಬಚ್ಚಿಟ್ಕಳುಕ್ಕಾದಾತು. ಇವತ್ತಲ್ಲ ನಾಳೆ ತಿಳ್ದೇ ತಿಳಿತದೆ. ಅದೀಗ್ಲೆ ಗೊತ್ತಾಗ್ಲಿ ಬುಡಕ್ಯೋವ್.

ಮಣ್ಣಯ್ಯ : (ತಬ್ಬಿಬ್ಬಾಗಿ) ಏಯ್ ನಿಮ್ಮೊಗ್ಗಿನ್ ಮಾತ್ ಸಾಕು, ಏನಾಯ್ತುಂತ ಸರ್ಯಾಗ್ಯೋಳಿ.

ಕಾಮಿನಿ : ಊರ್ಗೆಲ್ಲ ಗೊತ್ತಿರೋದ್ನ ಕಿವಿಲೇಳುದ್ರಂತೆ, ನಿಮ್ ಪಟ್ಟುದ್‌ರಾಣಿ ರಾಮವ್ವ ನೀವ್ ದೇಸಾಂತ್ರ ಹೋದ್ ಮ್ಯಾಲೆ ಯಾರ್ ಜೊತೆ ಕೂಡುದ್ಲೋ! ಬಸ್ರಾಗವ್ಳೆ!

ಮಣ್ಣಯ್ಯ : ಕಾಕು ಮಾತಾಡ್‌ಬ್ಯಾಡ, ಪೋಕ ಪಿದ್ಯೆಗೆ ಹೋಗ್‌ಬ್ಯಾಡ ಅಂದಂಗೆ ನಿಮ್

ನಾಲ್ಗೆ ಸಿಗ್ದು ರಣದ್ಹಾಗ್ ಬುಡ್ತೀನಿ. ನನ್ ರಾಣಿ ರಾಮವ್ವ ಅಂಥ ಕೀಳೆಂಗ್ಸಲ್ಲ! ನನ್‌ತಲೆ ಕೆಡಿಸ್‌ಬ್ಯಾಡ್ರಿ. ಏನಾಯ್ತು ಅಂತ ಸರಿಯಾಗ್ಯೋಳಿ!

ದಾಮಿನಿ : ಏಳು ಮೆಳೆ ಸೊಪ್ಪು ಮೇದೋಳು ಯಾತ್ಕೇಸಾಳು? ಅಂದಂಗೆ ಅದ್ಯಾಕ್ ಅಷ್ಟು ಸಿಟ್ಟಾಯ್ತೀರಿ ಸ್ವಾಮಿ. ಅಕ್ಕ ಯೋಳ್ತಿರಾದು ನಿಜಾನೆ, ನಾವೆಲ್ಲ ಸೇರಿ ಅವುಳ್ನ ಮಾಡಿ ಮನೇಲ್ ಕೂಡಾಕಿದ್ದೀವಿ ಹೋಗ್ ನೋಡಿ.

ಮಣ್ಣಯ್ಯ : ಇಲ್ಲ, ನಾ ನಂಬಲ್ಲ. ನನ್ ರಾಮವ್ವ ಅಂತೋಳಲ್ಲ. ನೀವೆಲ್ಲ ಸೇರಿ ಚಾಡಿ ಯೋಳ್ತಿದ್ದೀರಿ.

ಕಾಮಿನಿ : ನೀವವುಳ್ ಮ್ಯಾಲ್ಮಡ್ಗಿರೋ ನಂಬ್ಕೇನೆ ಇಂಗ್ ಮಾತಾಡಿಸ್ತಾ ಅದೆ. ನೆಚ್ದೆಮ್ಮೆ ಕ್ವಾಣುನ್ನೀದಂಗಾಗದೆ.

ಮಣ್ಣಯ್ಯ : ಇಲ್ಲ. ಇಲ್ಲ. ಇದ್ರಾಗೇನೋ ಮೋಸ ಅದೆ. ನೀವೆಲ್ಲ ಸುಳ್ಳೇಳ್ತಾಯಿದ್ದೀರಿ. ನಾ ನಂಬಕ್ಕಿಲ್ಲ..

ಬಾಮಿನಿ : ಅಷ್ಟ್ ಮಾತ್ಯಾಕೆ ಹೋಗ್ ನೋಡುದ್ರೆ ಸತ್ಯ ತಿಳ್ಯಕಿಲ್ವ?

ಮಣ್ಣಯ್ಯ : ಆಗ್ಲಿ ಸತ್ಯ ಏನಂತ ನಾನೆ ತಿಳ್ಕತೀನಿ. ನನ್ ರಾಮವ್ವ ಅಂತಾ ಹೆಂಗ್ಸಲ್ಲ. ನಿಮ್ ಮಾತ್ನ ನಂಬಂಗಿಲ್ಲ. ನಡೀ ಮಂತ್ರಿ ಇವುರ್ಮಾತ್ನೇನ್ ಕೇಳಾದು?

ಮೇಳ : ಏನು ಕಾಲ ಬಂತು
ಯಾಕೋ ಕೇಡುಗಾಲ ಇಂದು!
ಮಣ್ಣಯ್ಯ ಮನದಲ್ಲೆ
ನೊಂದೂ ತಾನುಡಕೊಂಡು
ರಾಣಿ ರಾಮವ್ನ
ಕಾಣಲು ಹೊರಟಾನು!

## ದೃಶ್ಯ – ಏಳು

(ಮಣ್ಣಯ್ಯ, ಮಂತ್ರಿ ಹೋಗುವಾಗ, ನೀರಿಗೆ ಹೊರಟ ಹೆಂಗಸರ ಗುಸು ಗುಸು.)

ಒಬ್ಬಾಕೆ : ಅಲ್ಲಾ. ದೊರೆ ಪಾಪ ತಲ್ಕೆಟ್ಟು ಎಲ್ಲೋ ಹೋದ ಅಂತಾವ ಈ ಎಂಗ್ಸು ಎಂಥ ಕೆಲ್ಸ ಮಾಡ್ಕಂಡವ್ಳೆ

ಇನ್ನೊಬ್ಬಾಕೆ : ಕನುಸ್ನಾಗ್ ಚೇಳ್ ಕಡುದ್ರೆ ನನಸ್ನಾಗ್ ಬಿಕ್ಕಿಸ್ದಂಗೆ ಯಾರಿಷ್ಟ ಮಾತಾಡ್ತಿದ್ದಿ ಕಾಣಕ್ಕ?

ಒಬ್ಬಾಕೆ : ಅದೇ, ಅಪ್ಪವ್ವಿಲ್ಲ ಬಿತ್ರಿ ರಾಮಿ, ಅವುಳ್ ಇಸ್ಯಾ ಮಾತಾಡ್ತಿದ್ದೀನಿ.

ಇನ್ನೊಬ್ಬಾಕೆ : ಅದೇನಾಯ್ತು ಯೋಳೇಕ್ಕ ಸರ್ಯಾಗಿ

ಒಬ್ಬಾಕೆ : ಅದೇ ಕನಮ್ಮ.. ರಾಣಿ ರಾಮವ್ವನ್ ಕತೆ ಯೋಳ್ತಾಯಿದ್ದೀನಿ.ರಾಜ ಅದೆಲ್ಲೋ ಯೋದ್ನಲ್ಲಾ. ಬರಾದ್ರಾಗ ಆದ್ಯಾರ್ ಜೊತೆನೋ ಕೂಡಿ ಗರ್ಬಿಣಿ ಆಗವ್ಳಂತೆ.

ಒಬ್ಬಾಕೆ : ಜ್ಯಾರ್ಯ್ಯಾರ್ ಮ್ಯಾಲೆ ಅಂಗಲ್ಲ ಯೋಳ್‌ಬಾರ್ದು ಕಾಣಕ್ಕ. ರಾಮವ್ವ ಅಂತೆ ಏಂಗ್ನಲ್ಲ. ನೀವೇನ ಯೋಳಿ ನಂಗ್ನಂಬ್ಕೆ ಬತ್ತಿಲ್ಲ.

ಇನ್ನೊಬ್ಬಾಕೆ : ನೀ ನಂಬ್ಕ ಅಂತ ಎಲ್ಲೇಳ್ಳಿ ನಾನು? ಅವುಳ್ ಗಂಡ್ನೆ ಎಲ್ಲ ಗೊತ್ತಿದ್ರೂ ಜೋ ಪತಿವ್ರತೆ ಅನ್ಕಂಡ್ ಸುಮ್ಕವ್ನೆ. ನಮ್ಗೇನಾಗ್‌ಬೇಕು ಬುಡು ಅತ್ಲಾಗೆ.

ಒಬ್ಬಾಕೆ : ನಡ್ಯವ್ವ. ಊಟ ತಕಂಡೋಗ್‌ಬೇಕು ಹೊಲ್ದತ್ರುಕ್ಕೆ. ಬಿರ್‌ಬಿರ್ನೋಗನ.

ಮಣ್ಣಯ್ಯ : (ಎಲ್ಲವನ್ನೂ ಕೇಳಿಸಿಕೊಂಡು ಸಿಟ್ಟಿನಿಂದ) ಥೂ ಪಾಪಿಷ್ಟೆ. ಎಷ್ಟ್ ನಂಬಿದ್ದೆ ಅವುಳ್ನ. ಮಗಾ ಮಾಡಾದು ಅಂಗೆ: ಜನ ಆಡಾದು ಅಂಗೆ ಅನ್ನಂಗೆ ಎಂಥೆ ಕೆಲ್ಸ ಮಾಡವ್ಳೆ? ಅವುಳ್ ಮುಖದರ್ಶನ ಮಾಡೊದೇ ಬ್ಯಾಡ. ಮಂತ್ರಿ ಈ ಕೂಡ್ಲೆ ಆ ಚಾಂಡಾಲಿ ಕಣ್ಗೆ ಎಣ್ಣೆ ಬಟ್ಟೆ ಬಿಗ್ದಿ, ಹಿಂಗೈ ಕಟ್ಟಿ ಯಾರ್ಗೂ ಕಾಣ್ದಂಗೆ ದೂರದ ಕಾಡ್ ಮಧ್ಯದಲಿ ಶಿರಸಾಗ್ಣ ಮಾಡಿಸ್ಬುಡು.

ಮಂತ್ರಿ : ಸ್ವಾಮಿ ಮಡ್ಕು ಬಲೇ ಕೆಡ್ಕು, ಕಡುಕೋಪ ಬಂದಾಗ ತಡ್ಕೊಂಡೋನೆ ಜಾಣಾಂತ ಇನ್ನೊಂದ್ ಕಿತ ಯೋಚ್ಸಿ.

ಮಣ್ಣಯ್ಯ : ಯೋಚ್ನೆ ಮಾಡುಕ್ಕೇನು ಉಳ್ದಿಲ್ಲ ಮಂತ್ರಿ. ಅವ್ಳು ನಟ್ತೆ ಕೆಟ್ಟೋಳು ಅಂತ ಗೊತ್ತಾಗೋಯ್ತು. ನನ್ ಮಾನ ಮರ್ಯಾದೆಯೆಲ್ಲ ಹಾಳ್‌ಮಾಡ್ಬುಟ್ಳು. ನೀ ಇನ್ನೇನು ಯೋಳಾದ್‌ಬ್ಯಾಡ, ನನ್ನಾಜ್ಞೆ ಪಾಲ್ಸಷ್ಟೆ.

ಮಂತ್ರಿ : ತಮ್ಮಾಜ್ಞೆಯಂಗೇ ಆಗ್ಲಿ ಸ್ವಾಮಿ.

ಮೇಳ : ರಾಜಾಜ್ಞೆಯನು ಶಿರಸಾವಹಿಸಿ
ಕೂಡಲೆ ಮಂತ್ರಿಯು ದೂತರ ಕರೆಸಿ
ಎಣ್ಣೆಯ ಬಟ್ಟೆಯ ಕಣ್ಣಿಗೆ ಬಿಗಿಸಿ
ರಾಣಿ ರಾಮವ್ನ ಕಾಡಿಗಟ್ಟಿದ!

## ದೃಶ್ಯ - ಎಂಟು

ರಾಮವ್ವ : (ಒಬ್ಬಳೇ ಕಾಡಿನ ಮಧ್ಯ ಕುಳಿತು ದುಃಖಿತಳಾಗಿ) ಶಿವ್ನೆ ಯಾಕಪ್ಪ ನಂಗಿಂತೆ ಕಷ್ಟಕೊಟ್ಟೆ? ಕತ್ಲೆ-ಬೆಳ್ಕಿನ್ ಗುರ್ತೂ ತಿಳಿವೊಲ್ದು. ಅಯ್ಯೋ ಕಟುಕ್ರುಗಿರೋ ದಯ ದೊರ್ಗಿಲ್ದೆ ಯೋಯ್ತಲ್ಲ. ಏನ್ ಮಾಡ್ಲಪ್ಪ ನಾನೀವಾಗ?

ರಾಕ್ಷಸ : (ದೂರದಿಂದಲೇ) ಆಹಾ. ಯಾವ್ದೊ ನರ್ಮನ್ಸನ್ ಗಮ್ಲು ಬತ್ತಾ ಅದೆ! ಈಟ್ ಗಮ್ಗಮ ಅನ್ನೊ ನರ್ಮಾಂಸಾನ ತಿಂದಿಲ್ಲ. (ಓಡೋಡಿ ಬಂದು ನೋಡುವನು...)

ರಾಮವ್ವ : ಯಾರು? ಯಾರಪ್ಪ ಅದು? ಯಾರ್ ಸ್ವಾಮಿ ನೀವು?

ರಾಕ್ಷಸ : ಹ್ಹ್ಲಾ...ನನ್ನುನ್ನೇ ಯಾರಂತ ಕೇಳ್ತೀಯಾ? ನಿಂಗಷ್ಟ್ ಧೈರ್ಯ? ನಾ ಬರಾದ್ ಗೊತ್ತಾದ್ರೆ ಈ ಕಾಡಿನ್ ಗಾಳೀನೆ ಬ್ಯಾರ ದಿಕ್ಕುಗ್ ಬೀಸ್ತುದೆ; ಅಂತದ್ರೇಲಿ ನನ್ನೇ ಯಾರಂತ ಕೇಳ್ತೀಯಾ?

ರಾಮವ್ವ : ಯಾರಪ್ಪ ನೀನು? ನಂಗ್ತಿಳಿವೊಲ್ದು ಸ್ವಾಮಿ, ಕಣ್ಣಿಂದ ನೋಡುವ ಅಂದ್ರೆ ಎಣ್ಣೆ ಬಟ್ಟೆಯಿಂದ ಕಟ್‌ಬುಟ್ಟವ್ರೆ. ನೀ ಯಾರು ಅಂತ ನಂಗ್ಯಂಗಪ್ಪ ಗೊತ್ತಾಗ್ಬೇಕು?

ರಾಕ್ಷಸ : ನಾನು ನಿನ್ನ ತಿನ್ನುಕ್ ಬಂದಿರೋ ರಾಕ್ಷಸ ಗೊತ್ತಾ?

ರಾಮವ್ವ : ಹ್ಹಾ... ತಿನ್ನುಕ್ ಬಂದಿದ್ದೀಯಾಪ್ಪ? ನಾನು ಊರಿಗ್ ಕುಳ ಅಲ್ಲ: ಮಸಾಣಕ್ಕೆಣ ಅಲ್ಲ. ಬಾ ತಂದೆ ಬಾ. ನಿಂಗೋಸ್ಕರ್ವೆ ಕಾಯ್ತಿದ್ದೆ. ಬಾರಪ್ಪ ತಿಂದಾಕು ಈ ಪಾಪಿ ದೇಹಾನ

ರಾಕ್ಷಸ : ತಂದೇ!.. ನನ್ನುನ್ನ ಯಾರೂ ತಂದೆ, ಅಪ್ಪಾ ಅಂತ ಕರ್ದಿರ್ಲಿಲ್ಲ. ಈ ಯಮ್ಮ ಕರುಮ್ಬುಟ್ಲು; ಇವುಳ್ನ ಯಂಗಪ್ಪ ಊಟ ಮಾಡಾದು? ಅಯ್ಯಯ್ಯೋ ಕಣ್ಗೆಣ್ಣೆ ಬಟ್ಟೆ ಬಿಗ್ದಿ ಹಿಂಗೈಮುರಿ ಕಟ್ಟಿ ಕಾಡ್ನಾಗ್ ಬುಟ್ಬೋಗವ್ರಲ್ಲಾ: ಇಲ್ಲಾ ಈಕೇನಾ ಕಾಪಾಡ್ಬೇಕು.

ರಾಮವ್ವ : ಯಾಕ್ತಡ ಮಾಡ್ತಿದ್ದಿಯ? ಬಾಪ್ಪ ಸಾಕಾಗದೆ ಈ ಬದ್ಕು.

ರಾಕ್ಷಸ : ಅವ್ವಾ ತಿನ್‌ಬೇಕಂತ ಬಂದ್ ನಂಗೆ ಮಗ್ನಂಗ್ ಕಂಡೆ. ಯಾವ್ ಸತ್‌ವಂತೆ ಹೆತ್ ಮಗ್ಳವ್ವ ನೀನು? ನಿನ್ ಕಷ್ಟ ನೋಡ್ಲಾರೆ ತಾಯಿ. ಬಾವ್ವ ಎಲ್ಲಾ ಸವುಕರಣೆ ಮಾಡಿ ಕಾಪಾಡ್ತೀನಿ. ನನ್ ಗವಿಗೋಗನ ಬಾ. (ಹಿಂಗೈ ಕಟ್ಟು, ಕಣ್ಣಿನ ಬಟ್ಟೆ ಬಿಚ್ಚುವನು)

ರಾಮವ್ವ : ಸ್ವಾಮಿ ನೀವ್ ನರ್ಮಾಂಸ ಊಟ ಮಾಡೋರು. ನಂಗೆ ಈ ಲೋಕ್ದವಾರ ಸಾಕಾಗದೆ. ಪತೀನೆ ನನ್ ನಂಬುದ್ ಮ್ಯಾಲೆ ನಾ ಯಾಕ್ ಬದ್ಕಿರ್‌ಬೇಕು. ನನ್ನ ಊಟ ಮಾಡ್ಕಂಡು ಸಂತೋಷ್‌ವಾಗಿರಿ.

ರಾಕ್ಷಸ : ಇಲ್ಲ ಮಗ್ಗೆ ನಿನ್‌ಕಷ್ಟ ಸುಖ್ದೆಲಿ ಬಾಗಸ್ಥ ಆಯ್ತಿನಿ. ಬಾಳ್ಲಾರ್ದೋನು ಬಾವಿಗ್ ಬಿದ್ದಂಗಾಗ್‌ಬಾರ್ದು. ನಿನ್ನ ಜ್ವಾಪಾನ ಮಾಡಿ ಲೋಕುಕ್ಕೆ ನೀ ಪತುವ್ರತೆ ಅನ್ನೋದ್ನ ತೋರುಸ್‌ಬೇಕು. ಈಸ್‌ಬೇಕು ಇದ್ ಜೈಸ್‌ಬೇಕು. ಬಾ ಮಗ್ಗೆ.

ರಾಮವ್ವ : ಅನ್ಯಾಯ ಬೆನ್ ಬುಡೋದಿಲ್ಲ ಅಂದಂಗೆ ಯಾವ ಜನುಮ್ದೆಲೇನ್ ಕರ್ಮ ಮಾಡಿದ್ನೊ? ಈ ಜನುಮ್ದಾಗ್ ಕಳಿತಿದ್ದೀನಿ. ನಾ ಬದ್ಕೇನಾಗ್‌ಬೇಕು, ದಾರಿಲೋಗನ್ ಸತ್ರೆ ದಸ ಕಾಯೋನತ್ತಂಗೆ ನೀ ಊಟ ಮಾಡ್ಕಂಡು

ಹೋಗ್ಬುಡು ಸ್ವಾಮಿ.

ರಾಕ್ಷಸ : ಮತ್ತದೇ ಮಾತಾಡ್‌ಬ್ಯಾಡ. ನಿನ್ ಕಷ್ಟಯಲ್ಲ ಸಂಗರಿವಾಗೋಯ್ತು. ನಿಂಗೆ ಎಲ್ಲ ಸಪ್ಕರ್ಣನೂ ಮಾಡಿ ಕಾಪಾಡ್ತೀನಿ.

ರಾಮವ್ವ : ಅಯ್ಯಾ ನೀ ಇಷ್ಟೇಳುದ್ ಮ್ಯಾಲೆ ಇವತ್ನಿಂದ ನೀನೇ ನನ್ನಪ್ಪ, ನಾನು ನಿನ್ಮಗ್ಳು. ನೀ ಯೋಳ್ದಂಗ್ ಕೇಳ್ಕಂಡು ನಿನ್ ಸ್ಯಾವೆ ಮಾಡ್ಕಂಡಿರ್ತೀನಿ.

ರಾಕ್ಷಸ : ಅವ್ವಾ ನನ್ ಗವ್ಯಾಗ ಬೇಕಾದಂಗವ. ಗವಿ ಇಕ್ಕೆಲದಾಗೆ ನೀರಿನ್ ಸೊಣ್ಣಳವೆ. ಉಸಾರಾಗ್ ನೀರ್ ತಕಂಡು ಬೇಕಾದಂಗಡ್ಗೆ ಮಾಡ್ಕಂಡು ಸುಖ್ವಾಗಿರು ವಂತೆ ಬಾರವ್ವ

ರಾಮವ್ವ : ಹ್ಞಾ... ನಿನ್ನಿಷ್ಟದಂಗೇ ಆಗ್ಲಿ ನಡಿಯಪ್ಪ. (ಇಬ್ಬರೂ ಹೋಗುವರು)

ಮೇಳ : ದಿನಗಳು ಕಳೆದವು! ತಿಂಗಳು ಸರಿದವು
ನವಮಾಸಗಳು ತುಂಬಿದವು
ಹೊಳೆಯುವ ಸೂರ್ಯ ಹೊರಬಂದಂತೆ
ರಾಮವ್ವನೊಡಲಿಂದೊರಬಂದಾ
ಅಯ್ಯಾ ರಾಕ್ಷಸಗಾಯಿತು ಆನಂದಾ!
ದಿನಕೆ ಬೆಳೆಯಂದಾರೆ ಜಾವಾಕ ಬೆಳುದಾನೋ
ಒಳ್ಳೆ ಗುರುಸ್ಥಾನ ನೋಡಿ ಶಾಲೇಗ ಕಳಿಸವರೋ
ಅಲ್ಲಿ ಒಂದ ಬರಿಯಂದಾರ ಒಂಬತ್ತು ಬರುದಾನೋ
ಸುಂದರ ಸುಕುಮಾರ ಅಂದಾವ ಬಾಲಕ ಆ...!!

## ದೃಶ್ಯ – ಒಂಬತ್ತು

(ಶಾಲಾ ಆವರಣ ಮಕ್ಕಳೆಲ್ಲಾ ಆಟವಾಡುತ್ತಿದ್ದಾರೆ.
ಮಣ್ಣಯ್ಯನ ಕಿರಿ ಹೆಂಡತಿಯರ ಮಕ್ಕಳು ಮತ್ತು ರಾಮವ್ವನ ಮಗ ಆಟವಾಡುತ್ತಿದ್ದಾರೆ)

ವೀರು : ಏಯ್ ಬರ್‍ರೊ ಗುರ್‍ಗೋಳ್ ಬರೊಗಂಟ ಆಟ ಆಡನ.

ಗೊಪ್ಪ : ಉಹ್ಞು, ಬ್ಯಾಡಪ್ಪ ಎಲ್ಲಾದ್ರಾಗು ಗೆದ್ದು ಕೂಸ್ಮರಿ ಮಾಡು ಅಂತೀ. ನಿನ್ನ ನಾನೊಬ್ನೆ ಹೊರಕ್ಯಾಗಕಿಲ್ಲ ಮಾರಾಯಾ.

ಸಿದ್ದ : ಊಹ್ಞೂ ಎಲ್ಲಾ ಸಲಾನು ಅವ್ನೆ ಗಲ್ತಾನೆ. ಯಂಗಾಡ್ತಾನೊ ಒಂದು ಗೊತ್ತಾಗಕಿಲ್ಲ.

ಬಿದ್ದ : ಇವತ್ತೂಕೂಸ್ಮರಿ ಬ್ಯಾಡ ಪರವರ ಮಾಡಾದು. ಯಂಗಿದ್ರು ನಾಕಾಳಿದ್ದೀವಿ. ಇಬ್ಬಿಬ್ರು ಜೋಡಿ ಮಾಡ್ಕಳಾದು.

ವೀರು : ಆಯ್ತು ಅಂಗೇ ಮಾಡನ. ಸಿದ್ದು ನೀ ನನ್ನೊತ್ತೆ ಸೇರ್‍ಕ.

ಸಿದ್ಧ : ಆಯ್ತಾಯ್ತು... ನಿನ್ನೊತ್ತೆ ಆದ್ರೆ ನಾನಾಟುಕ್ ಬತ್ತೀನಿ.

ವೀರು : ನೋಡ್ರಪ್ಪಾ... ನಾವಿಬ್ರು... ನೀವಿಬ್ರು. ಯಾರ್ ಗೆದ್ರು ಇಬ್ರುನು ಒಂದೊಂದ್ ಸುತ್ತು ವರವರ ಮಾಡ್ಬೇಕು.

ಬಿದ್ದ : ಹ್ನಾ... ಆಗ್ಲಿ ಆಗ್ಲಿ ಆಟ ನಾವೇ ಸುರು ಮಾಡ್ತೀವಿ.

ವೀರು : ಸಿದ್ದು ನೀ ನಿಂತ್ಕಂಡ್ ನೋಡ್ತಾಯಿರು. ನಿಮ್ಕಡೆ ಆಟ ಆಡಾರು ಸುರು ಮಾಡ್ರಿ.

ಗೊದ್ದ : ಬಿದ್ದ ನೀನೇ ಸುರುಮಾಡ್ಕ ನಾ ನೋಡ್ತಾ ನಿಂತ್ಕತೀನಿ.

ಬಿದ್ದ : ಆಯ್ತು. ವೀರು ನೀ ಗುಡ್ಡೆ ಮಾಡು ಕಡ್ಡೀನಾ ಅದ್ರಾಗ್ ಸೇರುಸ್ತೀನಿ. ನೀ ಹುಡ್ಕುವಂತೆ.

ವೀರು : (ಮಣ್ಣನ್ನು ಉದ್ದುದ್ದಕೆ ಗುಡ್ಡೆ ಮಾಡಿ) ಹ್ನೂ... ಆಡಪ್ಪ

ಬಿದ್ದ : (ಮಣ್ಣಿನ ಗುಡ್ಡೆಯಲ್ಲಿ ಕಡ್ಡಿಯನ್ನು ಅಡಗಿಸಿ) ಉಪ್ಪುಪ್ಪು ಕಡ್ಡಿ! ಉಪ್ನೇರ್ಲು ಕಡ್ಡಿ! ಅಡಗಿಸಿ ಬುಡುವೆ! ಹುಡುಕಿ ನೀ ಕೊಡುವೆ!... ಹ್ನೂ ಹುಡ್ಕಪ್ಪ ಈಗ.

ವೀರು : ಅಡ್ಡಂ ಮಡ್ಡಂ ಅಡಿಕೆ ಕಾಯಿ! ತಟ್ಟ ತುಟ್ಟಂ ತೊಂಡೇ ಕಾಯಿ! ಗೂಸಂ ಬೀಸಂ ವರವರ ವಡಕೆ! ಆಟದಲೀಗ ಕಡ್ಡಿಯ ಹುಡುಕೆ! (ಎರಡೂ ಕೈಗಳನ್ನು ಒಂದಕ್ಕೊಂದು ಹೆಣೆದು ಮರಳ ದಿಬ್ಬದ ಮೇಲೆ ಪಟ್ಟೆಂದು ಬಡಿಯುತ್ತಾನೆ.)

ಬಿದ್ದ : ಅಲ್ಲದೆ ಇಲ್ಲದೆ! ಎಲೆಲ್ಲಿ ಹುಡುಕಿದೆ! ಸತ್ತೆ ಕೆಟ್ಟೆ ಕಡ್ಡಿ ಸಿಕ್ಕದೆ! ನೋಡಲೆ ನೋಡಲೇ ಕೈ ಕೆಳಗಡಗಿದೆ! ಬಣ್ಣದ ಕಡ್ಡಿ! ಎತ್ತಿ ನೋಡೋ ಎಡವಟ್ಟೇಸ!

ವೀರು : ಈಗಲೆ ಎತ್ತುವೆ ಇಡಿಬಾರಣ್ಣ! ನೋಡಿರೋ ನೋಡಿರಿ ಕಡ್ಡಿಯಿದಣ್ಣ! ಮುಚ್ಚುವೆನೀಗಲೆ ನಾ ನಿನ್ನ ಕಣ್ಣ! ಬಾ ಬಾ ತುಂಬಿಕೊ ಬೊಗಸೆಲಿ ಮಣ್ಣ! (ಬಿದ್ದನ ಬೊಗಸೆಗೆ ಮಣ್ತುಂಬಿ ಕಣ್ಣುಗಳನ್ನು ಮುಚ್ಚಿ, ಗರಗರ ತಿರುಗಿಸಿ, ಕರಕೊಂಡು ಹೋಗುವನು.)

ಬಿದ್ದ : ಏ ಏಟೊಂದ್ ಗಟ್ಟಾಗ್ ಮುಚ್ಕಬುಟ್ಟೆ ಕಣ್ಣ? ಮಂಜ್ ಕವ್ದಂಗಾಗ್ಬುಡ್ತು ಕಣ್ಗೆಯಾ. (ಕಣ್ಣುಗಳನ್ನು ಉಜ್ಜಿಕೊಳ್ಳುವ)

ವೀರು : ಈಗ ಕಡ್ಡಿ ಎಲ್ಲದೆ ಉಡಿಕ ಬಾ ಹೋಗು.

ಸಿದ್ದ : ನಾ ತೋರುಸ್ತೀನಿ ಬಾರ್ಲ.

ವೀರು : ಏಯ್ ಅಂಗೆಲ್ಲ ತೋರ್ಸ್ಬಂಗಿಲ್ಲ. ಅಂಡಬಂಡ ಆಯ್ತುದೆ. ಬಿದ್ದ ನೀ ಹೋಗಿ ಹುಡಿಕಂಬಾ.

ಬಿದ್ದ : ಹೋಗ್ಲಿ ಬುಡ್ಲ ನೀನೇನ್ ತೋರುಕ್ ಬರಾದ್ ಬ್ಯಾಡ. ನಾನೆ

ಉಡುಕಂಬತ್ತೀನಿ. ಅದೆಂಗೆಂಗೋ ತಿರ್ಗಿಸ್ ಬುಟ್ನಪ್ಪ. ಯಾಕಡೆ ಹೋದೆ ಅಂತಾನೆ ಗೊತ್ತಾಯ್ತಿಲ್ಲ. ಅಯ್ಯೋ... ಹ್ಹಾ... ಈ ಕಡೇನೆ (ವಿರುದ್ಧ ದಿಕ್ಕಿನಲ್ಲಿ ಒಂದು ಸುತ್ತು ಹೋಗಿ ಬಂದು) ಇಲ್ಲಪ್ಪ ನನ್ಕೈಲಿ ಉಡ್ಕುಕ್ಕಾಗಿಲ್ಲ. ವರ-ವರ ಮಾಡ್ತೀವಿ ಕಡ್ಡಿ ಎಲ್ಲದೆ ಅಂತ ತೋರು?

ವೀರು : ಬನ್ನಿ ಬನ್ನಿ ನಾ ತೋರುಸ್ತೀನಿ... (ಒಳ ಹೋಗಿ ವರ ವರ ಮಾಡಿಕೊಂಡು ಬರುವನು. ಸಿದ್ದ-ಬಿದ್ದ ಇಬ್ಬರೂ ವೀರುವನ್ನು ಹೊತ್ತು ಬರುವರು...)

ಗೊದ್ದ : ಲೇ..ಲೇ... ಲೇ.. ಗುರ್ಗೊಳ್ ಬತ್ತಾ ಅವ್ರೆ ಕಾಣ್ರುಲಾ. (ಎಲ್ಲರೂ ಸುಮ್ಮನಾಗುವುರು. ಇಲ್ಲಿ ಇನ್ನಷ್ಟು ಆಟಗಳು ಅಥವಾ ಒಗಟು ಬಿಡಿಸುವುದು ಇಲ್ಲವೇ ಗುರುಗಳು-ತರಗತಿ ದೃಶ್ಯಗಳನ್ನು ತರಬಹುದು.)

ಮೇಳ : ರಾಮಪ್ಪನಾ ಕುವರಾ
ಒಳ್ಳೆಯ ಸರುದಾರಾ
ಆಟ್ಗಳಲಿ ಅತಿ ಶೂರಾ
ಗುರುಗಳೂ ಒಂದೇಳಿಕೊಟ್ಟರೆ
ಒಂಬತ್ತ ಕಲಿಯುವನು!

## ದೃಶ್ಯ - ಹತ್ತು

(ಮಣ್ಣಯ್ಯನ ಮೂರು ಮಕ್ಕಳು ಕಚ್ಚಾಡುತ್ತಿರುವರು)

ಸಿದ್ದ : ಲೇಯ್ ಕೊಡ್ಲ ಆ ಚಂಡ್ನ, ನಾನಾಡ್‌ಬೇಕು.

ಗೊದ್ದ : ಇಲ್ಲ. ನಾನ್ ಚಿಕ್ಕೋನು ನಾನಾಡ್ತೀನಿ. ಹೋಗಲೇ

ಸಿದ್ದ : ಚಿಕ್ಕೋನಂತೆ ಚಿಕ್ಕೋನು.. ಓ ಹೋಹೋ. ಹೋಗಲೇ ಕೊಡಕ್ಕಿಲ್ಲ ನಾನಾಡ್‌ಬೇಕು.

ಬಿದ್ದ : ಹೋಗ್ಲಿ ಕೊಟ್ಬುಡ್ಲ. ನಾನು-ನೀನು ಬ್ಯಾರೆ ಆಟ ಆಡನ.

ಗೊದ್ದ : ಇಲ್ಲಪ್ಪ, ಕೊಡಕ್ಕಿಲ್ಲ ಚಂಡ್ನ. ನಾನೇ ಆಡ್ಬೇಕು.

ಸಿದ್ದ : ಬಾರ್ಲ ಅವುನ್ನೇನ್ ಕರ್ಲೀಯೆ. ಒಬ್ನೆ ಆಡ್ಕಳ್ಳಿ. ನಾನು ನೀನು ಆಡನ. (ಇಬ್ಬರೂ ಗಿರಗಿಟ್ಲೆ ಆಡುವರು...)

ಗೊದ್ದ : ನಾನು ನಿಮ್ಜೊತೆ ಆಟುಕ್ ಬತ್ತೀನಿ ಕಾಣ್ರುಲಾ...

ಸಿದ್ದ : ಹೋಗಲೇಯ್ ಆಟುಕ್ ಬತ್ತಾನಂತೆ ಆಟುಕ್ಕೆ...ಒದ್ದ ಅಂದ್ರೆ ಅಂಗೇಯಾ...

ಗೊದ್ದ : ಹ್ಹೂ.. ಹ್ಹೂ.. ಅಪ್ಪ ಬಳ್ಳಿ ಯೇತಿನೀ.. (ಮಣ್ಣಯ್ಯನ ಆಗಮನ.)

ಮಣ್ಣಯ್ಯ : ಲೋವ್ ಯಾಕ್ರೊ ಅವ್ನಳ್ತಾ ಅವ್ನೆ?

ಬಿದ್ದ : ಅವುನ್ಗಳಾದ್ ಬುಟ್ರೆ ಇನ್ನೇನ್ ಬಂದಾತು?

ಮಣ್ಣಯ್ಯ : ಆ.. ಹಾ.. ಹಾ... ಕಾಗೆ ತನ್ನಂಮಕ್ಕೆ ಕೋಗ್ಲೆನ ಆಡ್ಕೊತಂತೆ. ಸುಮ್ಕಿರ್ಲ.. ನೀ ಬೋ ಸಾಜಾ ಆಡ್ದಂಗಾಡ್ ಬ್ಯಾಡ. ಏನ್ ಮಕ್ಳುಟ್ಟುದ್ರಪ್ಪ ಒಳ್ಳೆ ಹುಲಿ ಹೊಟ್ಟೇಲಿ ನರಿ ಹುಟ್ದಂಗೆ. ಅಪ್ಪಾ ಮುದ್ದಿನ್ ಮಕ್ಳಾ, ನಂಗೆ ವಯ್ಸಾಯ್ತು ಕಾಣ್ರಯ್ಯ. ನಾ ದುಡ್ದಾಕೋ ಕಾಲ ಮುಗಿತು.

ಗೊದ್ದ : ಅಪ್ಪಾ ಅಪ್ಪಾ ನೀ ಯಾವಾಗ್ ಸಾಯ್ತಿಯಾ?

ಸಿದ್ದ : ಲೇ ಅಪ್ಪ ಸಾಯೋದ್ ಬ್ಯಾಡ ಕಣ್ಲ. ಅಪ್ಪ ಸತ್ರೆ ನಮ್ಗೆಲ್ಲ ದುಡ್ದಾಕೋರ್‍ಯಾರ್ಲ?

ಬಿದ್ದ : ಅಪ್ಪಾ ನೀ ಸಾಯಾದೆ ದಿಟ ಆದ್ರೆ ನಮ್ಗೆಲ್ಲಾ ಏನೇನ್ ಬೇಕೋ ಅದ್ನೆಲ್ಲ ಕೊಡಿಸ್ಬುಟ್ಟು, ಮಂತೆ ನಮ್ಗೆಲ್ಲ ಮದ್ವೆ ಮಾಡಿಸ್ಬುಟ್ಟು ಸಾಯಿ. ಆಗ್‌ಬೈದಾ?

ಮಣ್ಣಯ್ಯ : ಶಿವ್ನೆ ಎಂಥ ಮಕ್ಳುನ್ ಕೊಟ್ಟ್ಯಪ್ಪ? ಈ ಮುಂಡೇವು ಜಗಲಿ ಹಾರ್‍ಲಾರ್‍ದೋವು; ಗಗನ ಹಾರ್‍ಯಾವೆ?

ಸಿದ್ದ : ಯಾಕಪ್ಪ ವೇಚ್ನೆ ಮಾಡ್ತಿ. ಇವ್ರಿಗ್ ಬುದ್ದಿ ಯೋಳ್ತೀನಿ ಸುಮ್ಕಿರು. ಲೇ ಬರ್‍ರಲಾ ಅಪ್ಪುನ್ ಗೋಳುಯ್ಕ ಬ್ಯಾಡ್ರಿ. ನಿ ಬದ್ಕಿರೋಗಂಟ ಬದ್ಕೇ ಬುಡಪ್ಪ.

ಗೊದ್ದ : ಲೇ ಇದೇನ್ಲಾ ಇಂಗ್ಯೋಳ್ತಾವ್ನೆ ಇವ್ನು. ನಂಗೆ ಮದ್ವೆ ಆಗ್‌ಬೇಕು ಅಂತ ಆಸೆ. ಅಪ್ಪ ಮಾಡ್ದಯಿದ್ರೆ ನೀನ್ ಮಾಡ್ತೀಯಾ?

ಬಿದ್ದ : ಲೇ..... ಲೇ.... ಲೇ..... ನಿಂಗ್ ಮದ್ವೆ ತಾನೆ, ಎಲ್ಲ ಸೇರಿ ಮಾಡನ್ ಬುಡ್ಲ. ಗುರುಗೋಳ್ಯೋಳಿದ್ರಲ್ಲ ಅದ್ಯಾರೊ ಪಾಂಡುವ್ರು ಐದ್ ಜನ ಒಬ್ಳುನೆ ಮದ್ವಾದ್ರು ಅಂತ. ಅಂಗೆಯಾ ನಾವ್‌ಮೂರಾಳು ಒಂದೇ ಎಣ್ ತಂದು ಮಾಡ್ಕಳುವ, ಇಬ್ರುಗೆ ಇಟ್ಟಾಕೋದೆ ತೆಪ್ಪುದೆ.

ಮಣ್ಣಯ್ಯ : ಆಯಿತ್ರಪ್ಪ ಅಂಗೇ ಮಾಡಿ, ಲೋಕ ಉದ್ಧಾರಾಯ್ತುದೆ. ಎಣ್‌ಕುಲ ಪಾವ್ನ ಆಗ್‌ಬುಡ್ತುದೆ. (ಸ್ವಲ್ಪ ಯೋಚಿಸಿ) ಲೇ ಗೊದ್ದ ನಿಂಗ್ ಮದ್ವೆ ಆಗ್ಬೇಕು ಅಲ್ವೇನೊ...

ಗೊದ್ದ : ಊಂಕನಪ್ಪ. ನಂಗೆ ಮದ್ವಾಗ್‌ಬೇಕಂತ ಬೋ ಆಸೆ ಅಗ್ಬುಟ್ಬೈತೆ.

ಮಣ್ಣಯ್ಯ : ಮಾಡನ ಬುಡು. ಲೇ ಸಿದ್ದ ನಿಂಗೇನ್ ಬೇಕು ಅಂತ ಯೋಳ್ಳ.

ಸಿದ್ದ : ಮಂತೆ ನಂಗೆ... ನಂಗೇ... ಒಳ್ಳೆದೊಂದ್ ಮಾಡಿ ಕಟ್ಸಿ, ಅದ್ರಾಗೆ ತಿನ್ನುಕ್ಕೇನೇನ್ ಬೇಕೋ ಅದ್ನೆಲ್ಲ ತುಂಬ್ಸುದ್ರೆ, ಅದ್ರಾಗೊಬ್ನೆ ಇರುಕ್ಕಾಸೆ, ಮಾಡಿಸ್ತಿಯಾ?

ಮಣ್ಣಯ್ಯ : ಒಳ್ಳೇ ಆಸೆ ಕಾಣಪ್ಪ ನಿಂದು. ಅಪ್ಪಾ ಗಿಣಿಮರಿ ನಿಂಗೇನ್ ಬೇಕಪ್ಪಾ?

ಬಿದ್ದ : ನಂಗೆ... ನಂಗೆ.. ಏನಾಸೆ? ಹ್ಞಾ.... ಊರೆಲ್ಲ ಓಡಾಡ್ ಕೊಂಡು, ಕಡ್ಲೆಪುರಿ ತಿನ್ಕಂಡು, ಚಂಡಾಟ ಆಡ್ಕಂಡು ಇರಾದಂದ್ರೆ ಚನ್ನಾಗಿರ್ತದೆ.

ಮಣ್ಣಯ್ಯ : ಒಬ್ಬೊಬ್ರಾಗಿನು ಕೇಳ್ತಿದ್ರೆ... ನೋಡ್ರೊ ದಪ್ ಮುಂಡೇವ ನಿಮ್ಯೋಗ್ಯತೆಗ್ ಸರ್ಯಾಗ್ ಕೇಳ್ಕಂಡಿದ್ದೀರಿ. ನಿಮುಗ್ ಬೇಕಾದ್ದೆಲ್ಲ ನೀವ್ ಕೇಳ್ಕಂಡ್ರಿ. ಅವೆಲ್ಲ ಸಿಗ್‌ಬೇಕು ಅಂದ್ರೆ ನಾನೇನೊ ಕ್ಯೋಳ್ತೀನಿ. ಅವುನ್ ತಂದ್‌ಕೊಟ್ರೆ ನೀವ್ ಕೇಳುದ್ದೆಲ್ಲಾ ಮಾಡ್ ಕೊಡ್ತೀನಿ. ಇಲ್ಲ ಅಂದ್ರೆ...

ಸಿದ್ದ : ಅಯ್ಯೊ ಯಾಕನ್ನನ್ನು? ಯೋಳಪ್ಪೋವ್ ಈಗ್ಲೆ ತಂದ್ ಬುಡ್ತೀವಿ. ರಾಜುನ್ ಮಕ್ಳು ನಾವ್ ಕ್ಯೋಳುದ್ರೆ ಇಲ್ಲ ಅಂತಾರ? ಯೋಳಪ್ಪೋವ್ ಅದೇನ್ಬೇಕು ಅಂತಾವ!

ಬಿದ್ದ : ಆಪ್ರೇಸನ ಕೊಡ್ಲಿಲ್ಲ ಅಂದ್ರೆ ನಮ್ ಛಟ್ರುನೆಲ್ಲ ಬುಟ್ಟು ಒದ್ ಕಿತ್ಕಂಬತ್ತೀವಿ. ನೀ ಏನು ಅಂತ ಯೋಳಪ್ಪ.

ಮಣ್ಣಯ್ಯ : ಅಂಗಲ್ಲ ಒದ್ದು-ಗಿದ್ದು ಕಿತ್ಕಂಬರದಲ್ಲ ಕಾಣ್ರೋ.. ನೀವೆ ಸಾಸ ಮಾಡ್‌ಗೆದ್ದು ತಕಂಬರಾದು.

ಗೊದ್ದ : ನೀ ಯೋಳಪ್ಪ ಅದೇನು ಅಂತಾವ. ತರುಕಾದಾತೋ ಇಲ್ವೋ ಅಂತ ಆಮ್ಯಾಕ್ ಯೋಚ್ನೆ ಮಾಡ್ತೀವಿ.

ಮಣ್ಣಯ್ಯ : ನೋಡ್ರೋ ನಂಗ "ಬುಡ್ವಳ್ಳಿ, ನಡ್ರುಚ್ಚಿ, ಗೊಸ್ಮತ್ತು" ಅಂತ ಮೂರ್ ಪದಾರ್ಥ ಬೇಕು. ಯಂಗನ ಸರಿ ತರುಕ್ಯಾಯ್ತದ ನಿಮ್ಗ? ತರುಕಾಗ್ದಿದ್ರೆ ದೇಶಾಂತ್ರ ಹಾಳಾಗೋಗಿ. ನನ್ ಕಣ್‌ಮುಂದೆ ನಿಲ್ ಬ್ಯಾಡಿ. ಹೋಗಿ ತಲೆ ಮ್ಯಾಲೆ ಬಟ್ಟೆ ಹಾಕ್ಕಂಡು.

ಬಿದ್ದ : ಲೇಯ್ ಏನ್ರುಲಾ ಅಪ್ಪ ಇಂಗೇಳ್ಬುಟ್ಟ? ಎಲ್ಲಿಂದಾನ್ಲ ತರಾದು? ಅದೇನ್ಯೋಳ್ದ ಅಂತಾನೆ ಗೊತ್ತಾಗ್ನಿಲ್ಲ.

ಸಿದ್ದ : ಅಕ್ರ ಇಲ್ದವ್ರಿಗಿಂತ ಅಕ್ರ ಇರೋ ಚಿಕ್ಕಸೆ ಲೇಸಂದಂಗೆ ಬರ್ರುಲಾ ಎಲ್ಲಾನ ಹುಡ್ಕಿ ತರಾನ. (ಹೊರಡುವರು)

ಮೇಳ : ಹ್ಯಾಪುಮೋರೆ ಹಾಕಿಕೊಂಡು
ಚಿಂತೆ ನೂರ ಹೊತ್ತು ಕೊಂಡು
ಕುಲದ ಕುದುರೆಗಳನಿಡಕೊಂಡು
ಹೊರಟರು ಮೂವರು ನಡಕೊಂಡು!

## ದೃಶ್ಯ - ಹನ್ನೊಂದು

(ಮಣ್ಣಯ್ಯನ ಮಕ್ಕಳು ಕಪ್ಪೆಯೊಂದನ್ನು ಅಟ್ಟಿಸಿಕೊಂಡು, ಆಟವಾಡಿಸುತ್ತಾ ನಡೆದಿದ್ದಾರೆ)

ಸಿದ್ದ : ಲೇಯ್ ಅಲ್ನೋಡ್ರೊ. ಯಂಗ್ ಕುಪ್ಪಿಸ್ತಾ ಅದೆ ಕಪ್ಪೆ?

ಗೊದ್ದ : ಕಪ್ಪೆ ಕುಪ್ಪಿಸ್ದೆ ಕುಣ್ದಾದ್ತೇನ್ಲಾ? ಲೇಯ್ ಚನ್ನಾಗ್ ಕುಪ್ಪಿಸ್ತಾ ಅದೆ. ನಾನೂ ಅಂಗೆ ಕುಪ್ಪಿಸಿತೀನಿ ಇರು.

ಬಿದ್ದ : ನಾನೇನ್ ಕಮ್ಮಿ ನಾನು ಅಂಗೆ ಮಾಡ್ತೀನಪ್ಪ...

ಸಿದ್ದ : ಲೋವ್ ಅಲ್ನೋಡ್ರೊ ಎಗುರ್ಕಂಡೆಗ್ರುಕೊಂಡು ಯಂಗೋಯ್ತಾ ಅದೆ. ಒಬ್ಬೊಬ್ಬ ಒಂದೊಂದ್ ಕಾಲಿಡ್ಕಳ್ರೋ ಅದೇ ನಿಮ್ಮುನ್ ಕುಪ್ಪಿಸ್ತುದೆ.

ಗೊದ್ದ : ಉಹ್ಞು ಅಪ್ಪಾ ನಾನಿಡ್ಕಳಲ್ಲೆ, ಭಯ ಆಯ್ತುದೆ.

ಬಿದ್ದ : ಆಗ ನೋಡೋ ಹಾವ್ ಬತ್ತಾ ಅದೆ. ಎಷ್ಟುದ್ದ ಅದೆ ನೋಡ್ಲಾ! (ಭಯಗೊಂಡು ಒಬ್ಬರನ್ನೊಬ್ಬರು ಅಪ್ಪಿಕೊಳ್ಳುವರು)

ವೀರು : (ಪ್ರವೇಶಿಸಿ) ಅರರೆ ಏನ್ರಪ್ಪ ನೀವೆಲ್ಲ ಇಲ್ಲಿ! ಇದೇನ್ ನಿಮ್ ಪಜೀತಿ?

ಗೊದ್ದ : ಅಲ್ಲಿ... ಹಾವು... ಕಪ್ಪೆ... (ತೊದಲುವನು)

ವೀರು : ಅಯ್ಯಯ್ಯೋ ಕಪ್ಪೆನ ನುಂಗ್ಬುಡ್ತುದಲ್ಲಪ್ಪ ಹಾವೂ....

ಸಿದ್ದ : ಅದ್ ಮಾಮೂಲಿ ಅಲ್ವೆ? ಹಾವು ಕಪ್ಪೆ ನುಂಗ್ದೆ ಎಮ್ಮೇನ್ ನುಂಗಾತೇ? (ಎಲ್ಲರೂ ನಗುವರು)

ವೀರು : ನಿಜಾ ಮಂಟುಪ್ಪೆದ್ಲ್ ಕುಂತ್ರೂ ಕಂಟ್ಕ ಬಿಡ್ಲಿಲ್ಲ ಅನ್ನಂಗೆ ಹಾವ್ಕಪ್ಪೆನ್ ತಿನ್ನೋದ್ನಿಜ. ಆದ್ರೆ ಎಲ್ರೂಕ ಬದುಕ್ಬೇಕು ಅಂತ ಆಸೆ ಇರ್ತುದೆ ನೋಡು. ಆ ಹಾವ್ನಿಂದ ಕಪ್ಪೆನ್ ಕಾಪಾಡ್ರಯ್ಯ..

ಸಿದ್ದ : ತಿನ್ಲಿ ಅಂತ ಬುಟ್ಬುಡೋದಪ್ಪ ಅದ್ರು ಪಾಡ್‌ಗದ್ನ. ಉಣ್ಣೋರ್ ಬಾಯಿಗ್ ಮಣ್ಣಾಕ್ದಂಗೆ ನಾವ್ಯಾಕಡ್ಡ ಮಾಡ್ಬೇಕು?

ಗೊದ್ದ : ಇಲ್ಲಾ ಕಾಣ್ಲೇ ಇವುನ್ ತಿನ್‌ಬ್ಯಾಡ ಅಂತ್ಯೋಳುದ್ರೆ ಹಾವು ಬುಟ್‌ಬುಡ್ತುದೆ.

ವೀರು : ಕಡಿ ಅಂದ್ರೆ ಕಪ್ಪೆಗ್ ಕ್ವಾಪ; ಬುಡು ಅಂದ್ರೆ ಹಾವಿಗ್ ಕ್ವಾಪ. ಎರ್ಡುಕ್ಕೂ ತೊಂದ್ರೆ ಆಗ್‌ಬಾರ್ದು ಇರಿ ನನ್ ಕಾಲ್ನಾಗೆ ಒಂದ್ ಬೆಳ್ಳಿಚ್ಚಾಗದೆ. ಕುಯ್ಕೊಟ್ ಬುಡ್ತೀನಿ. ಕಪ್ಪೇನು ಉಳ್ಕತುದೆ, ಹಾವ್ಗೆ ಊಟಾನು ಆಯ್ತುದೆ. (ತನ್ನ ಕಾಲ್ಬೆರಳನ್ನು ಕತ್ತರಿಸಿ ಕೊಡುವನು.)

ಸಿದ್ದ : ಅಯ್ಯಯ್ಯೋ ಇವುನ್ಗೇನ್ ಬತ್ತಪ್ಪಾ ಬರ್‌ಬಾರದ್ದು!

ಗೊದ್ದ : ಏನ್ ಕೆಲ್ಸ ಮಾಡ್ಬುಟ್ರೋ ಮಾರಾಯ? ಅಲ್ಲಾ ಕಪ್ಪೆ ಉಳುಸ್ತೀನಿ ಅಂತ ಕಾಲ್ಬೆಟ್ನೆ ಕುಯ್ಕೊಟ್ ಬುಡೋದೆ?

ಕಪ್ಪ : ಅಣ್ಣಾ. ಇವ್ರೆಲ್ಲಾ ಸಂಗಿಂಸ ಕೊಡ್ತಿದ್ರು. ನೀ ಬರ್ದಿದ್ರೆ ಹಾವ್ನೊಟ್ಟೆವೊಳುಗ್. ಸೇರ್ಕತಿದ್ದೆ! ನಿನ್ನಷ್ಟ್ ಕಾಲ್ದಲಿ 'ಮಂಡೋದ್ರಿ ಮಾತಾಡ್ಕಂಡ್ ಬಾ' ಅನ್ನು. ಬಂದು ನನ್ ಕೈಲಾದ್ ಸಾಯ ಮಾಡ್ತೀನಿ.

ವೀರು : ಅಂಗೇ ಆಗ್ಲಿ ಸಂತೋಷ್‌ವಾಗ್ ಬದ್ಕು!

ಹಾವು : ಅಪ್ಪಾ ನಿನ್ ನೋಡಿ ಬೋ ಸಂತೋಸ ಅಗ್ಬುಟ್ಟದೆ. ಒಂದ್ ಜೀವ ಉಳ್ಸುಕ್ಕ ನಿನ್ ಕಾಲ್ವೆಳ್ಗೆ ಕೊಟ್ಟೆ. ಪುಣ್ಯಾತ್ಮ ಕಾಣಪ್ಪ ನೀನು ನಿಂಗೊಳ್ಳೆದಾಗ್ಲಿ.

ವೀರು : ಏನೋ ನನ್ ಕೈಲಾದ್ ಸಹಾಯ ಮಾಡ್ದೆ ಅಷ್ಟೆ. ನೋಡಿದ್ರೇನಯ್ಯಾ. ಯಾರ್ಗನ ಸಹಾಯ ಮಾಡುದ್ರೆ ಎಷ್ಟ್ ಸಂತೋಷ ಪಡ್ತವೆ?

ಗೊದ್ದ : ಅವೆಲ್ಲ ನಮುಗ್ ಗೊತ್ತಾಗಕಿಲ್ಲ ಬುಡಪ್ಪ. ತನು ಇದ್ ಕಡೆ ತಾವ್ರೆ; ಮನ ಇದ್‌ಕಡೆ ದೇವ್ರು. ನಮ್ಗ ನಮ್ದೆ ಹಾಸ್ಕಂಡು ಹೊದ್ಕಂಡ್ ಮನಿಕವಂಗೈತೆ.

ವೀರು : ಅದ್ಸರಿ, ನೀವೆಲ್ಲ ಯಾಕಿಲ್ಲಿಗ್ ಬಂದ್ರಿ?

ಬಿದ್ದ : ಏನಿಲ್ಲಪ್ಪ, ನಮ್ಮಪ್ಪದೇನೊ ತಕಬನ್ನಿ. ತರುಕಾಗ್ನಿಲ್ಲ ಅಂದ್ರೆ ದೇಸಾಂತ್ರ ಹೋಗ್‌ಬುಡಿ ಅಂದವ್ನೆ.

ವೀರು : ಏನ್ ತರುಕ್ಕೇಳಿದ್ದಾರು ನಿಮ್ ತಂದೆ.

ಸಿದ್ದ : ಅದೇ ಅದೇನೋ ಬುದ್ವೆಳ್ಳಿ, ನಡ್ವಚ್ಚೆ ಆಮ್ಯಾಲೆ ಗೊನ್ಮುತ್ತಂತೆ. ಅವುನ್ನ ನಾವ್ ತರಬೇಕಂತೆ.

ವೀರು : ಹಾಂ. ಬುಡಬೆಳ್ಳಿ, ನಡುಪಚ್ಚೆ, ಗೊನೆ ಮುತ್ತು! ಎಷ್ಟು ಚೆನ್ನಾಗದೆ. ಫ್ಲಾ ಬರ್ರೀ ತೀರಾ ಹಸ್ಕಿರ್ವಂಗ್ ಕಾಣ್ತದೆ. ಇಲ್ಲೇ ನಮ್ಮನೆ ಐತೆ. ಊಟ ಮಾಡ್ಕಂಡೋಗಿ ಬಂದು.

ಗೊಪ್ಪ : ಉಂಕಾಣಪ್ಪ, ಬೋ ಹಸಿವಾಗೈತೆ. ಉಣ್ಕಂಡೋಗುನ ನಡೀರೋ. (ಎಲ್ಲರೂ ಹೋಗುವರು.)

## ದೃಶ್ಯ – ಹನ್ನೆರಡು

ವೀರು : (ಜೊತೆಯಲ್ಲಿ ಮೂವರೂ ಪ್ರವೇಶ) ಅವ್ವಾ, ಇಲ್‌ನೋಡು ಯಾರ್ ಬಂದಾವ್ರೆ ಅಂತಾವ.

ರಾಮವ್ವ : ಯಾರ್ಮಗ ಇವ್ರೆಲ್ಲ?

ವೀರು : ನಾನು-ಇವ್ರೆಲ್ಲ ಒಂದೇ ಗುರುಮಠದಾಗ ಓದ್ತಾ ಇದ್ದೊ ಕಾಣವ್ವ. ಇದ್ಕಿದ್ದಂಗೆ ದಾರಿಲ್ ಸಿಕ್ಕಿದ್ರು. ಕರ್ಕಂಬಂದ್ಬುಟ್ಟೆ.

ರಾಮವ್ವ : ಬಂದ್ರಪ್ಪ.. ಕುಂತ್ಕಳ್ಳಿ, ನೀರ್‌ಕೊಡ್ಲೆ?

ಎಲ್ಲರೂ : ಉಸ್ಸಾ......ಉಸ್ಸಾ.... ನೀರ್‌ಬೇಕು. (ನೀರು ಕೊಡುವಳು)

ರಾಮವ್ವ : ಅಡ್ಗೆ ಆಗೈತೆ ಬನ್ನಿ ಉಣ್ಣೂರಂತೆ. (ಎಲ್ಲರೂ ಕೂರುವರು. ರಾಮವ್ವ ಬಡಿಸುವಳು, ಗಬಗಬ ತಿನ್ನುತ್ತಿರುವರು) ಎಲ್ಲಿಂದ ಬಂದ್ರಪ್ಪ, ಯಾವೂರ್ ದೊರೆ ಮಕ್ಳಪ್ಪ ನೀವು? (ತಿನ್ನುವ ಭರದಲ್ಲಿ ಯಾರಿಗೂ ಕೇಳಿಸುವುದಿಲ್ಲ.) ನಿದಾನುಕ್ ತಿನ್ನಿ. ಬೇಕಾದಷ್ಟದೆ ಹಾಕ್ಕೊಟ್ಟೋನು. ಇನ್ನೊಸಿ ಅನ್ನ ಹಾಕ್ಲ?

ಗೊದ್ದ : ಹ್ಞೂ ಹ್ಞೂ... ಇನ್ನೊಸಿ ಹಾಕವ್ವ, ದೂರಿಂದ ನಡ್ಕ ಬಂದ್ವಲ್ಲ; ಬಲೇ ಹೊಟ್ಟಸಿತಿತ್ತು.

ಸಿದ್ದ : ಇರವ್ವಾ ತಟ್ಟೆ ಚಿಕ್ದು ವೊಸೊಸಿ ಹಾಕುಸ್ಕಂಡ್ತಿಂತಿನಿ..

ಬಿದ್ದ : ಅದೇ ನಿದಾನುಕ್ ತಿನ್ ಬೇಕು. ತಟ್ಟೆಲಿರೋದೆಲ್ಲೂ ಹಾರೋಗಲ್ಲು. ಇಲ್ಲಾ ಕವ್ವಾ....

ಗೊದ್ದ : ಅಬ್ಬಾ ಸಾಕಾಯ್ತಪ್ಪ ನಂಗೆ, ಹೊಟ್ಟೆ ತುಂಬೋಯ್ತು. (ಹೊಟ್ಟೆ ನೀವಿಕೊಳ್ಳುವನು ತೇಗು.)

ಸಿದ್ದ : ಆನಂದ ಆಯ್ತು ನೋಡಪ್ಪ.... ಒಳ್ಳೆ ತಡ್ಡೆಮ್ಮೆನಾ ತಕ್ಲುಗ್ ಬುಟ್ಟಂಗಾಯ್ತು.

ಬಿದ್ದ : ಉಂಡ್ ಬಾಯಿಗ್ ತಾಂಬೂಲ ಚಂದ; ದುಂಡ್ ತೋಳುಗ್ ರವ್ಕೆ ಚಂದ ಅನ್ನಂಗೆ ವೊಸಿ ಎಲಡ್ಕೆ ಹಾಕ್ಕಬುಟ್ರೆ ಈಗುಂಡುದ್ದೆಲ್ಲ ಅರಾಗ್ಣೆ ಆಯ್ತುದೆ.

ರಾಮವ್ವ : ಹಾಂ. ತಕಳ್ರಪ್ಪ ಹಾಕ್ಕಳಿ, ಆದ್ಸರಿ ನೀವೆಲ್ಲ ಯಾವ್ ದೊರೆ ಮಕ್ಳು ಅಂತ ಯೋಳ್ಳೇಯಿಲ್ಲ?

ಸಿದ್ದ : ನಾವು ಸಣ್ಣೂರ್ ಪಟ್ಣುದ್ ದೊರೆ ಮಣ್ಣಯ್ಯನ್ ಮಕ್ಳು ಕಾಣವ್ವ!

ರಾಮವ್ವ : ಹ್ಞಾ... ಏನಂದ್ರಪ್ಪ ನೀವು... ಯಾವೂರಂದ್ರಿ?

ಬಿದ್ದ : ಅದೇ ಕಾಣವ್ವ ನಾವೆಲ್ಲ ಸಣ್ಣೂರ್ ಪಟ್ಣುದ್ ಮಣ್ಣಯ್ ದೊರೆ ಮಕ್ಳು.

ರಾಮವ್ವ : ಯಂಗಿದ್ದಾರಪ್ಪಾ... ನಿಮ್ಮಪ್ಪ ಅವ್ವಾ ಯಲ್ಲಾ?

ಬಿದ್ದ : ಅಯ್ಯೋ ಅವುರ್ಗೇನ್ ಬುಡವ್ವ.... ಸಂದಾಕವ್ರೆ!

ರಾಮವ್ವ : (ಸ್ವಗತ) ಶಿವ್ನೇ ಎಂತಾ ದೊರೆಗೆಂತಾ ಮಕ್ಳು ಕೊಟ್ಟಪ್ಪ? ಸಣ್ಣೂರ್ ಪಟ್ಣುದ್ ಕತೆ ಏನಾಯ್ತಪ್ಪ?

ವೀರು : ಏನವ್ವಾ ಅದು? ಒಬ್ಳೆ ಮಾತಾಡ್ಕತಿದ್ದಿ....?

ರಾಮವ್ವ : ಏನಿಲ್ಲಪ್ಪ, ಏನೋ ನೆಪ್ಪಾಯ್ತು! (ಕಣ್ಣೊರೆಸಿಕೊಳ್ಳುವಳು)

ವೀರು : ಅವ್ವಾ ನಂತಾವ ಏನೋ ಮುಚ್ಚಿಡ್ತಿದ್ದೀಯೆ...

ರಾಮವ್ವ : ಕಾಲ ಬಂದಾಗ ಯೋಳ್ಕೊಟ್ಟೋನು ಬುಡಪ್ಪ. ಅದ್ಸರಿ ಇವ್ರೆಲ್ಲ ಎಲ್ಲೊಂಟವ್ರೆ?

ವೀರು : ಅದೇನೋ ಅಪ್ರಪ್ಪ ಬುಡ್ಬೆಳ್ಳಿ, ನಪ್ಪಜ್ಜಿ, ಗೊಮ್ಮತ್ತು ಅಂತ ತರುಕೇಳಿದ್ವಾನಂತೆ, ಅದ್ಕೆ ಹೊಂಟವ್ರೆ.

ರಾಮವ್ವ : ಹ್ಞಾ... ಬುಡ್ಬೆಳ್ಳಿ, ನಪ್ಪಜ್ಜಿ, ಗೊಮ್ಮತ್ತು... ಏಟ್ ಚೆನ್ನಾಗದೆ ಕೇಳುಕ್ಕೆ! ಮಗಾ ಇವ್ರುನ್ ನೋಡುದ್ರೆ ಅವ್ರುನ್ನೆಲ್ಲ ತತ್ತಾರೆ ಅನ್ನಿಸ್ತದ ನಿಂಗೆ!

ವೀರು : ನೋಡನ ಬುಡವ್ವ... ಯಾರ್ಯಾರಂಗಂಗಿರ್ತಾರೋ ಗೊತ್ತಾಗಲ್ಲ. ಇವ್ರು ತರ್‌ಬೋದು ನೋಡನ.

ರಾಮವ್ವ : ಮಗ ಇವ್ರುನ್ ನೋಡುದ್ರೆ, ಅವ್ರೇಳುದ್ನೆಲ್ಲ ತರ್ವಂಗ್ ಕಾಣಲ್ಲು. ನೀನು ಅವರ್ ಜೊತೆ ಹೋಗ್ಬುಡಪ್ಪ.

ವೀರು : ಅಯ್ಯೋ ಅವ್ರುಗ್ ನನ್ ಕರ್ಕಂಡೋಗುಕ್ಕೆ ಮನ್ಸಯ್ತೊ ಇಲ್ವೊ?

ರಾಮವ್ವ : ನಾನೇ ಕ್ಯೋಳ್ತೀನಿ ಇರಪ್ಪ! ನೋಡ್ರಪ್ಪ... ಅವ್ರುನ್ನೆಲ್ಲ ನೀವೀಟೇ ಜನ ತರಾದು ಸಾದ್ವಿಲ್ಲುದ್ ಮಾತು, ನಮ್ ವೀರೂನು ಜೊತೆ ಕರ್ಕಂಡೋಗಿ, ಏನನ ಸಹಾಯ ಆಗ್ಬೋದು.

ಗೊಪ್ಪ : ಒಬ್ಬುನ್ಗಿಂತ ಇಬ್ರು ಲೇಸು; ಹಷ್ಕಿಂತ ಮದ್ವೆ ಲೇಸು ಅಂದಂಗೆ ಬರ್ಲಿ ಬುಡವ್ವ. ನಾವೊತ್ತ ಹೋಗ್‌ಬೇಕೆ?

ರಾಮವ್ವ : ಹೋಗ್ಬಾ ಕಂದ. ಯಂಗಿದ್ರು ನಿಂಗೆ ಅಷ್ಟೊ ಇಷ್ಟೋ ನಿಮ್ ಸಾಕ್ ತಂದೆ ಅವ್ರುನ್ ಇದ್ಯಾನೆಲ್ಲ ಕಲಿಸ್ಕೊಟ್ಟವ್ನೆ. ಅದೂ ಈಗ್ ಕೆಲ್ಸುಕ್ ಬರ್‌ಬೈದು.

ವೀರು : ಸರಿ ಕಾಣವ್ವ ಹೋಯ್ತಿನಿ, ಒಂದಿಷ್ಟ್ ಬುತ್ತಿ-ಗಿತ್ತಿ ಕಟ್ಬುಡವ್ವ. ಏಟ್ದೂರ ನಡಿಬೇಕೋ ಏನೋ?

ರಾಮವ್ವ : (ಬುತ್ತಿ ಕಟ್ಟಿಕೊಟ್ಟು) ದೇಶಾಂತ್ರ ಹೋದ್ಮ್ರ ಸ್ವತಂತ್ರವಾಗಿ ಹೋಗ್‌ಬೇಕಂತೆ. ನಾಕಾಳೊಂಟಿದ್ದೀರಿ. ನಿತ್ಯಪಯ್ಣ ಬುತ್ಗೇಡು. ಬುತ್ತಿ ಖಾಲಿ ಆದ್ಮ್ಯಾಲಿರ್ಲಿ. ಒಂದಿಟ್ ದಪ್ನ, ಕಾಳು-ಕಡಿಯಲ್ಲ ತಕಂಡ್ಹೋಗ್ರಿ.

ವೀರು : ಕಾಪ್‌ದಾರಿ, ಪರಸ್ಥಳ್ವೋ? ಪರ್ದಾಟ್ವೋ ಅನ್ನಂಗಾದ್ರೆ ಕಷ್ಟ. ಆಗ್ಲಿ ಕಾಣ್ವ ಯಲ್ಲ ತಕಂಡೋಯ್ತೀವಿ. ಹೊರ್ಡನ ನಡೀರಪ್ಪ... (ಎಲ್ಲರೂ ಹೊರಡುವರು.)

ಮೇಳ : ನಡೆದೂ ನಡೆದೂ ಸುಸ್ತಾಗಿ
ನಿಂತರು ಮರದಡಿ ತಾವಾಗಿ
ಕತ್ತೆತ್ತಿ ನೋಡೆ ಆಲದ ಮರವದು
ಮಲಗಲು ಅದರಡಿ ಬಲೆ ಬಲೆ ಕಾತರ!

ಬಿದ್ದ : ಲೋ ವೀರಣ್ಣ ಏಟ್ ದೂರನಪ್ಪ ನಡ್ಯಾದು?

ಗೊಪ್ಪ : ಹ್ಞೂಕ್ಕಾಣೊ ಮಾರಾಯ, ನಡ್ಡು ನಡ್ಡು ಕಾಲೆಲ್ಲ ಒಪ್ಪೆ ಬಂದ್ ಬುಟ್ಟವೆ. ಎಲ್ಲನ ಒಸಿ ಸುಧಾರಿಸ್ಕಂಡೋಗನ.

ಸಿದ್ದ : ಲೇಯ್ ಗಲಾಟೆ ಮಾಡ್‌ಬ್ಯಾಡ್ರಿ, ಸುಮ್ಮುನ್ ನಡೀರ್ಲ. ನಮ್ಮುನ್ನೆಲ್ಲ ಒಳ್ಳೆ ಜಾಗುಕ್...... (ಎನ್ನುತ್ತಿದ್ದಂತ ಏನೋ ಶಬ್ದ ಬರುವುದು, ಒಬ್ಬರನ್ನೊಬ್ಬರು ಅಪ್ಪಿಕೊಳ್ಳುವರು.)

ವೀರು : (ನಗು) ಅಲ್ಲಯ್ಯ, ನಿಮ್ಮಪ್ಪುನ್ಗೆ ಮಾತ್ಕೊಟ್ ಬಂದಿದ್ದೀರಿ. ಇಷ್ಟೆದ್ರುಕೊಂಡ್ರೆ ಅವುನ್ನೆಲ್ಲ ತರುಕ್ಕಾಯ್ತದ ನಿಮ್ಗೆ?

ಗೊದ್ದ : ಅಯ್ಯೊಂಜ್ಬುರ್‍ಕುನ್ ಮ್ಯಾಲ್ ಕಪ್ಪೆ ಎಸ್ದಂಗಾಗೋಯ್ತು. ಮೊದ್ಲೆ ಈ ಕಾಡ್ನಾಗೆ ನಡ್ಯುಕ್ ಭಯ ಆಯ್ತುದೆ. ಅಂತದ್ರಾಗೆ ಇದೇನೊ ಒಳ್ಳೆ ದೆವ್ವ ಬಿದ್ ಸದ್ದಾದ್ರೆ...

ವೀರು : ಏನಾಗಕ್ಕಿಲ್ಲ; ನಾನಿದ್ದೀನಿ ಧೈರ್ಯವಾಗ್ ನಡೀರಿ. ವೊಸಿ ದೂರ ಹೋದ್ ಮ್ಯಾಲೆ ಸುಧಾರಿಸ್ಕಳೋರಂತೆ.

ಸಿದ್ದ : ಇನ್ನ ಏಟ್ ದೂರ ಆಯ್ತುದೆ ವೀರಣ್ಣ?

ವೀರು : ಏ ಇನ್ನೊಸಿ ದೂರ್‍ದಾಗೆ ಸಿಕ್ತದೆ.

ಗೊದ್ದ : ಯಂಗನ ಆಗ್ಲಿ ವೊಸಿ ಮಲಿಕಬುಡ್ಬೇಕಪ್ಪ!

ವೀರು : ಮಲಿಕಳೊರಂತೆ, ವೊಸಿ ಬೀಸಾಕಿ ಕಾಲ್ನ. (ವೀರು ಮುಂದೆ, ಹಿಂದೆ ಮೂವರೂ ನಡೆಯುವರು. ದೀಪ ಆರುವುದು)

ಮರಿಹಕ್ಕಿ ೧ : (ಬೆಳಕು ಬಂದಾಗ) ಏಯ್ ಅವ್ವ ಯೋಳಿಲ್ವ, ಗೂಡ್ನಿಂದ ಆಚೆ ಬರ್ ಬ್ಯಾಡಿ ಅಂತಾವ.

ಮರಿಹಕ್ಕಿ ೨ : ಅಯ್ಯೋ ಏಟೊತ್ತಂತ ಗೂಡೊಳ್ಗೆ ಇರಾದು. ಬೀದಿ ಮಕ್ಳು ಬೆಳ್ದೊ; ಕ್ವಾಣೆ ಮಕ್ಳು ಕೊಳ್ತೊ ಅಂದಂಗೆ, ಒಳ್ಗೆ ಇರುಕ್ಕೆ ಬೇಜಾರು, ಏಸನ ಆಟ ಆಡನ ಬಾ.

ಮರಿಹಕ್ಕಿ ೧ : ಆಟಾಡದು ಸಂಗು ಇಷ್ಟಾನೆ. ಆದ್ರೂ, ನವ್ಲೊಂದ್ಗಾಡಿ ಕೆಂಬೂತ ಪುಕ್ಕ ತರ್‍ಕಂಡಂಗಾಗ್ಬಾರ್‍ದು ನೋಡು.

ವೀರು : (ಮರಿಗಳನ್ನು ನೋಡಿ) ಈ ಗಂಡ್ಬೇರುಂಡುದ್ ಮರಿಗೋಳು ಏಟ್ಚನ್ನಾಗವೆ? ನೋಡ್ತಿದ್ರೆ ನೊಡ್ತಾನೆ ಇರ್‍ಬೇಕನ್ನಿಸ್ತುವೆ. ಅಯ್ಯಯ್ಯೋ ಇದೆಲ್ಲಿಂದ ಬತ್ತಪ್ಪ ಹಾವು? ಆ ಮರಿಗೊಳ್ಗೆ ಗೊತ್ತಾಯ್ತಿಲ್ವಲ್ಲ... ಓ.... ಮರಿಗೊಳ್ನ ತಿನುಕ್ಕೆ ಹೋಗ್ತಂಗ್ ಕಾಣ್ತುದೆ.

ಮರಿಹಕ್ಕಿ ೧ : ಅಣ್ಣಯ್ಯ ಅಲ್ ನೋಡು ಹಾವು, ಏಟುದ್ದ ಐತೆ. ಅದ್ರು ಜೊತ್ಯಾಗೆ ಆಟ ಆಡನ ಬಾ....

ಮರಿಹಕ್ಕಿ ೨ : ಏ ತಮ್ಮಯ್ಯ, ಆದ್ರತ್ರ ಹೋಗ್ ಬ್ಯಾಡ, ನಮ್ಮುನ್ನ ತಿಂದಾಕುಕ್ ಬಂದಿರಾದು.

ಮರಿಹಕ್ಕಿ ೧ : ಏ ಅಂಗೇನಿಲ್ಲ. ನಾನಪ್ನು ಜೊತ್ಯಾಗಾ ಆಟ ಆಡ್ತೀನಿ. ಅಪ್ಪು ಜೊತೆ ಯಾರು ಇಲ್ಲ ಅನ್ನಿಸ್ತದೆ. (ಹಾವು ಹೊಂಚ್ತಾಕ್ತದೆ; ಮರಿಹಕ್ಕಿ ಹತ್ತಿರ-ಹತ್ತಿರ ಹೋಗ್ತಿದೆ. ಇನ್ನೇನು ಬಾಯಿ ಹಾಕಬೇಕು. ವೀರು ಕತ್ತಿಯಿಂದ ಹಾವನ್ನು ಕೊಲ್ಲುತ್ತಾನೆ.)

ಮರಿಹಕ್ಕಿ ೨ : ಅಣ್ಣಯ್ಯ ಅಪತ್ ಕಾಲ್ದಲಿ ಅನಾಥ್‌ರಕ್ಷಕ್ನಂಗ್ ಬಂದೆ. (ಎನ್ನುತ್ತಿದ್ದಂತೆ ಗಂಡಭೇರುಂಡ ಪಕ್ಷಿಗಳು ಬರುತ್ತವೆ)

ತಾಯಿಹಕ್ಕಿ : ಅಪ್ಪಾ, ನಮ್ ಬಾಗುದ್ ದೇವ್ರುರ್ ಬಂದಂಗ್ ಬಂದು ದೊಡ್ಡಪಾಯ್ದಿಂದ ಪಾರ್ ಮಾಡ್ದೆ ಕಾಣಪ್ಪ.

ತಂದೆಹಕ್ಕಿ : ಯಾಪ್ ಜನ್ಮುದ್ ಋಣಾನ್‌ಬಂಧಾನೋ ಏನೋ, ನಮ್ ಮಕ್ಕುನ ಉಳಿಸ್ದೆ ಕಾಣಪ್ಪ, ನಿನ್ನ ಋಣಾನ ಯಂಗ್ ತೀರ್ಸಾದು?

ವೀರು : ಅಯ್ಯೊ ಋಣುದ್ ಮಾತೆಲ್ಲ ಯಾಕಾಡ್ತೀರಿ ಬುಡಿ. ಕಷ್ಟ್ ಕಾಲ್ದಲಿ ಒಬ್ರುಗೊಬ್ರು ಸಹಾಯ ಮಾಡ್ಬೇಕಷ್ಟೆ.

ತಂದೆಹಕ್ಕಿ : ಅದ್ಸರಿ ಈ ಕಾಡ್ನಾಗ ಒಬ್ನೆ ಯಾಕಪ್ಪ ಬಂದಿದ್ದಿ?

ವೀರು : ಅದೊಂದೊಡ್ ಕತೆ, ಸಣ್ಣೂರ್ ಪಟ್ಣದ್ ದೊರೆಗೆ ಬುಡ್ಡೆಳ್ಳಿ, ನಡ್ಡಚ್ಚೆ, ಗೊನ್ನುತ್ತು ಬೇಕಂತೆ.

ಹೆಣ್ಣುಹಕ್ಕಿ : ನೀನೊಬ್ನೆ ಬಂದಿದ್ದೀಯಾ?

ಗಂಡುಹಕ್ಕಿ : ನೀನೊಬ್ನೆ ಬಂದಿದ್ದೀಯೋ ಯಾರನ ಜೊತ್ಗಿದ್ದಾರೊ?

ವೀರು : ಮಣ್ಣಯ್ ದೊರೆ ಮಕ್ಳು ಬಂದವ್ರೆ. ಅವ್ರೆಲ್ಲ ಸುಧಾರಿಸ್ಕೊ ಬೇಕಂತ ಅಲ್ ನೆಳ್ಳಾಗ್ ಮಲಿಕಂಡವ್ರೆ.

ಗಂಡುಹಕ್ಕಿ : ನೀ ತರ್ಬೇಕಂತಿರೋ ಪದಾರ್ಥಗಳಿರೋ ಜಾಗ ನಂಗೊತ್ತು. ಯಾರ್ಗೇಳಾದು ಅಂತ ನಾವು ಕಾಯ್ತಿದ್ದೊ.

ವೀರು : ಆಹಾ.. ನಾನೆಷ್ಟ್ ಪುಣ್ವಂತ?

ಗಂಡುಹಕ್ಕಿ : ಹೊಸ್ಮನೆಗ್ ಕಾಗೆ ಸುಗ್ಗಂಗೆ ನಮ್ಮೊಂಸ ನಿರೊಂಸ ಮಾಡ್ತಿದ್ದಾವ್ನಿಂದ ನನ್ ಮಕ್ಕುನ್ ಕಾಪಾಡಿದ್ದಿ.ನಿಂಗಿಷ್ಟಾನ ಸಹಾಯ ಮಾಡ್ದಿದ್ರೆ ಸಿವ ಮೆಚ್ಚಾನೆ?

ವೀರು : ನಾ ಕೇಳುದ್ ಪದಾರ್ಥ್‌ಗಳ್ನ ತರುಕ್ಕೆ ಎಲ್ಲೋಗ್ ಬೇಕಂತ ಯೋಳ್ಕೊಡ್ತೀರಾ.

ತಾಯಿಹಕ್ಕಿ : ಇದೇ ದಾರಿಲಿ ಒಂದ್ ಸೇದೆ ಬಾವಿ, ರಾಟ್ಯಾಗೆ ಹಗ್ಗ ಇರ್ತದೆ. ಮೂರ್ಜನ್ರುಗು ಬಲ್ವಾಗಿ ಹಗ್ಗ ಜಗ್ಗಿಡ್ಕಳುಕ್ಕೇಳು. ಇಳಿವಾಗ 'ಜೈ ಜಗದೀಶ, ಪಾತಾಳುಕ್ ದಾರಿ ತೋರ್ಸು' ಅಂತ ಇಳುದ್ಬುಡು. ಬರ್ವಾಗುನೂ ಅದೇ ದಾರಿ.

ವೀರು : ತುಂಬಾ ಉಪ್ಕಾರ ಆಯ್ತು, ನಾ ಬರ್ಲೇ...

ತಂದೆ ಹಕ್ಕಿ : ಹ್ಞಾ, ಸಿಲ್ಲಪ್ಪ, ಬಾಯಿಲ್ಲಿ. ಬಾವಿಗಿಳಿವಾಗ (ಕಿವಿಯಲ್ಲಿ ಏನೋ ಹೇಳುವುದು) ಈ ಮಂತ್ರ ಹೇಳು ಮರಿದಂಗೆ. ನಮ್ ಸಾಯ ಬೇಕಂದ್ರೆ 'ಗಾವುದ್ ಗಂಡ್‌ಭೇರುಂಡ ಹಾರ್ ಬಂದ್ ದೂರ್‌ಕೋಗು' ಅಂತ ಮನುಸ್ನಾಗೆ ನೆನುಸ್ಕೊ. ಎಲ್ಲಿದ್ರು ಬಂದು ನಿಂಜೊತ್ತಿರ್‍ತೀವಿ.

ವೀರು : ಅಂಗೇ ಆಗ್ಲಿ. ನಾವು ಹೋಗ್‌ಬತ್ತೀವಿ. (ತೆರೆ)

ಮೇಳ : ಗಂಡಭೇರುಂಡಕೆ ವಂದಿಸಿ ನಡೆದ
ಸೇದೋಬಾವಿಯನರಸುತ್ತಾ!!

## ದೃಶ್ಯ - ಹದಿಮೂರು

ವೀರು : ನೋಡಿ... ಈ ಸೇದೋ ಬಾವಿಗೆ ನಾ ಹಗ್ಗ ಬುಟ್ಟು ಇಳಿತೀನಿ. ನೀವು ಗಟ್ಟಿಯಾಗಿಡ್ಕಂಡ್ ಕೂತಿರ್‌ಬೇಕು.

ಸಿದ್ದ : ಏ.... ಅದೇನ್ ಕಷ್ಟ ಅಲ್ಲ ಬುಡಣ್ಣೋವ್, ನಾವೆಲ್ಲ ಸೇರಿ ಇಡ್ಕಂಡ್ ಕೂತ್ಕತಿವಿ.

ಗೊದ್ದ : ಎಲ್ಲಿಗೋಯ್ತಿ ಹಗ್ಗ ಇಡ್ಕಂಡಿಳ್ದೂ?

ವೀರು : ನೀವ್ಕೇಳಿರೋ ವಸ್ತುಗಳನ್ನ ತರುಕ್ಕೆ ಪಾತಾಳ್ಕೋಯ್ತೀನಿ.

ಸಿದ್ದ : ನಾನು ಬತ್ತೀನಿ ಕಾಣಣ್ಣೋವ್.

ವೀರು : ಇಲ್ಲ ಅಂಗೆಲ್ಲ ಯಾರ್‍ಯಾರೋ ಬರುಕ್ಕಾಗಲ್ದು, ಇಳ್ಯುಕ್ಕೊಂದ್ ಮಂತ್ರ ಅದೆ.

ಸಿದ್ದ : ನಂಗು ಆ ಮಂತ್ರ ಕಲಿಸ್ಬುಟ್ರಾಯ್ತಪ್ಪ!

ವೀರು : ನೋಡಪ್ಪ ಆ ಮಂತ್ರಾನ ಇಬ್ಬಿಬ್ರು ಕಲುತ್ರೆ ಸಕ್ತಿ ಕಳ್ಕ ಬುಡ್ತುದೆ.

ಬಿದ್ದ : ಮಂತ್ರ ಅದಲ್ಲ. ಹಗ್ಗ ಇಡ್ಕಂಡ್ಯಾಕಪ್ಪ ಕುಂತ್ಕಬೇಕು?

ಗೊದ್ದ : ಉಂಡೆಲೆ ಎತ್ತೊ ಗುಂಡ ಅಂದ್ರೆ: ಉಂಡೋರೇಟ್ ಜನ ಅನ್ನದ್ ಬ್ಯಾಡ! ಬಾವಿ ತಾವ ಹಗ್ಗ ಇಡ್ಕೊಳ್ದೆ ಜುಟ್ಟ ಇಡ್ಕೊತಾರೆ?

ಸಿದ್ದ : ಈ ಹಗ್ಗಾವ ಯಾಕಿಡ್ಕಬೇಕು ಅಂತ ಕ್ಯೋಳಿದ್ದು?

ವೀರು : ನಾ ಹೇಳ್ತೀನಿ.... ಇದು ಸಾಮಾನ್ಯದ್ ಬಾವಿ ಅಲ್ಲ. ಒಳ್ಗೆ ಏನೋನೋ ಇರ್‍ತುದೆ. ರಾಕ್ಷಸ್ರಿರ್‍ತಾರೆ. ದೊಡ್ ದೊಡ್ ಪ್ರಾಣಿಗೊಳಿರ್‍ತವೆ. ಅವುದ್ರು ಜೊತೆ ಕಾದಾಡಿ ಗೆದ್ಕಂಡೋಗ್ಬೇಕು. ನೆಲೆಯಿಲ್ಲದ ಮಾತು ಹೊಲೆಗಿಂತ ಹೆಚ್ಚು. ಬರಿ ಮಾತ್‌ಬ್ಯಾಡಿ! ಈ ಹಗ್ಗಾವ ಗಟ್ಯಾಗಿಡ್ದು ನೀವಿಲ್ಲೆ ಕುಂತ್ಕಳಿ, ನಾ ಹೋಗ್ ಬತ್ತೀನಿ.

ಬಿದ್ದ : ಅಣ್ಣಯ್ಯ ಅಣ್ಣಯ್ಯಾ ಅಂಗಾರೆ ಈ ಬಾವಿಗಿಳ್ದೀ ಪಾತಾಳುಕ್ಕೋಯ್ತಿ ಅನ್ನು? ಎಷ್ಟು ದೂರ ಅದೆ? ಅಲ್ಲೇನೇನಿರ್‍ತುದೆ?

ವೀರು : ಗುಟ್ಟಿನ್ ಮಾತ್ ಗುಟ್ಟಾಗಿರ್‍ಲಿ; ಗುಡಿಸ್ಲಲಿಷ್ಟ್ ತಾಪಿರ್‍ಲಿ ಅನ್ನಂಗೆ ಅಲ್ಲೇನದೆ

ಅಂತ ಹೇಳಕ್ಕಾಗಲ್ಲ. ಅದೆಲ್ಲ ಗುಟ್ಟಿನ್ ವಿಚಾರ. ನಾ ಹೋಗ್ ನೋಡ್ತೀನಿ. ಗುಂಡ್ಗೆ ಗಟ್ಟಿಯಿರ್ಬೇಕು.

ಗೊದ್ದ : ಇಲ್ಲ ಕಾಣಣ್ಣಯ್ಯಾ ನೀನೆ ಹೋಗ್ ಬಾ. ನಾವೇನ್ ಮಾಡ್ಬೇಕು ಇಲ್ ಕುಂತ್ಕಂಡು ಅಂತ ಹೇಳೋಗಪ್ಪ!

ವೀರು : ನೀವಿಲ್ಲೆ ಅದ್ಗ ಮಾಡುಣ್ಕಂಡ್ ಕುಂತಿರಿ! ಮ್ಯಾಲ್ ಬರ್ವಾಗ ಹಗ್ಗನ ಅಲ್ಲಾಡಿಸ್ತೀನಿ. ನನ್ನ ಮ್ಯಾಕ್ ಸೇದ್ಕಳಿ.

ಸಿದ್ದ : ಅಂಗೇ ಆಗ್ಲಿ ಕಾಣಹ್ಣೋವ್. ನೀ ಹೋಗ್ ಬಾಪ್ಪ! ಲೇ ಬರ್ರುಲ ಗಟ್ಯಾಗಿಡ್ಕೋವ. ಇಳಿಸ್ಬುಟ್ಟು ಅದ್ಗೆ ಮಾಡ್ಕಂಡು ಉಣ್ಣುವ!

ವೀರು : ಸರಿ ನಾ ಇಳಿತೀನಿ ಬಿಗ್ಯಾಗಿಡ್ಕಳಿ (ಕಣ್ಣು ಮುಚ್ಚಿ ಮಂತ್ರ ಪಠಿಸುವನು.) ಬೆಲ್ಲದ ಬೆಡಗು-ಇಲ್ಲದ ಗುಡುಗು! ನೀರಂಬೋಲಾ-ನೀ ಬಾರಣ್ಣ! ನಿಂತೂರಾಟ-ನಿಲ್ಲದ ನೋಟ! ನಿಡಗಲ್‌ದಾರ-ನೀ ಸರದಾರ! ಮೆಲ್ಲನೆ ಜಾರುವೆ ಬುಡ್-ಬುಡಿರಣ್ಣ! ಗಟ್ಯಾಗಿಡ್ಡು-ಘಂಟೆ ಹೊಡ್ಡು! ಪಟ್ಟಂತೆಳುದ್ರೆ-ಪಣಕ್ಕೊಳ್ಳಿಗ್ಳು! (ಧುಮುಕುವನು)

ಸಿದ್ದ : ಲೇ ಅವ್ನೇನೋ ಯೋಳುದ್ನಲ್ಲ ನೆಪ್ಪಿಟ್ಕಳ್ರುಲ ಮಂತ್ರಾ. ನಾವು ಇಳಿಬೋದು.

ಗೊದ್ದ : ಅಣ್ಣಾ ಅದ್ಗೆ ಮಾಡ್ತೀನಿ ಉಣ್ಕಂಡು ಸುಮ್ಕಿರು.

ಸಿದ್ದ : ಇಲ್ಲ ನಾ ಇಳಿಬೇಕು. ಅದೇನದೋ ನೋಡ್‌ಬೇಕು.

ಬಿದ್ದ : ಸುಮ್ನಿರ್ತಿಯೋ ಇಲ್ಲ ನಾವೇ ತಳ್‌ಬುಡ್ಲೊ.....

ಸಿದ್ದ : ನೀರಂಬೋಲಾ... ಜಾರುಬಂಡಿ... ಥೂ ಅದೇನೊ ಮರ್ತೆ ಹೋಯ್ತು ಕಾಣ್ಣ.

ಗೊದ್ದ : ಲೋ ನಡೀಲಾ ನಾವದ್ಗೆ ಮಾಡ್ಕಂಡುಣ್ಣನ ಇಷ್ಟಿಳುದ್ರೆ ಇಳೀಲಿ, ಇಲ್ಲೆ ಬಿದ್ ಸಾಯ್ಲಿ.

ಸಿದ್ದ : ನಡೀರಪ್ಪ ಅತ್ತ, ಹೊಟ್ಟಸಿತಾ ಅದೆ. (ಆ ಭಾಗ ಕತ್ತಲು. ಮೇಳದ ಮೇಲೆ ಬೆಳಕು.)

ಮೇಳ : ತಾಯಿಯ ನೆನೆದೂ, ತಂದೆ ನೆನೆದೂ
ಸೂರ್ಯ ಚಂದ್ರರನು ತಾ ನೆನೆದೂ!
ಹಿರಿಯರ ನೆನೆದೂ ಗುರುಗಳ ನೆನೆದೂ
ಹಗ್ಗವನಿಡಿದು ಜಗ್ಗಿಸಿ ಇಳಿದ
ತುಂಬಿದ ಬಾವಿಲಿ ನೋಡಾಗ
ಪಾತಾಳ ಲೋಕ ಕಂಡನು ತಾನು
ಪುಣ್ಯವಂತನು ಆ ಬಾಲ!!
ಬುಡಬೆಳ್ಳಿ ಕಂಕುಳಲಿ
ಬಂಗಾರದ ಕೊಡವಿಡಿದು
ಮೆಲ್ಲಮೆಲ್ಲನೆ ಬಂದಾಳು
ಅಲ್ಲಿ ರವಿತೇಜನ ಕಂಡಾಳೂ!!

ಬೆಳ್ಳಿ : (ಕೊಡಹಿಡಿದು ಬರುತ್ತಾಳೆ. ಎದುರು ದಂಡೆಯಲ್ಲಿ ನೀರಾಟ ಆಡುತ್ತಿದ್ದ ರಾಜಕುಮಾರನ್ನ ಕಂಡು ಬೆರಗಾಗಿ) ಮನುಷ್ಯರು ಇಲ್ ಬರುಕ್ ಸಾಧ್ವಿಲ್ಲ, ಇವ ಬಂದವ್ನಂದ್ರೆ, ಸಾಮಾನ್ಯನಲ್ಲ. ಮಹಾಪರಾಕ್ರಮಿ, ಬುದ್ದಿವಂತಾನೆ. ಎಲ್ಲಿಂದ್ ಬಂದಾತ? ತಿಳ್ಕಬೇಕು. (ರಾಜಕುಮಾರನೆಡೆ ನೋಡಿ) ಸ್ವಾಮಿ ಅಷ್ಟ್‌ದೂರ್ದಾಗ್ಯಾಕ್ ಕುಂತ್ರಿ? ಇಂಗ್ ಬರಬಾರ್ದೆ?

ವೀರು : ಹೆಣ್ಣೆ ನಾವ್ ಮೂಢಾತ್ಮರು. ನದಿ ದಾಟ್ ಬರಾದು ಸಂಗ್ ಸಾಧ್ಯುವೇ?

ಬೆಳ್ಳಿ : ಸ್ವಾಮಿ ದೆಸ್ಗಾಲ ಒಂದಿದ್ರೆ ದಶದಿಕ್ಕು ನಡುಗ್ತಾವಂತೆ. ನಮ್ಗೆ ದೆಸ್ಗಾಲ ಬಂದದೆ. (ತನ್ನ ಬಳಿಯಿದ್ದ ಮಂತ್ರ ದಂಡದಿಂದ ಗಂಗೆಗೆ ಮೂರೇಟು ಹಾಕುತ್ತಾಳೆ. ನದಿ ಭಾಗ ಆಗುತ್ತೆ. ರಾಜಕುಮಾರ ಬುಡಬೆಳ್ಳಿಯ ಹತ್ತಿರ ಬರುತ್ತಾನೆ.) ಯಾವ್ ದೇಸ್ದೋರು? ನಿಮ್ಮುನ್ ನೋಡಿ ಬಾಳಾ ಸಂತೋಷ್ವಾಯ್ತು.

ವೀರು : ನೀವ್ಯಾರೋ ಏನೋ? ದಕ್ಕಾತು ಅಂತ ತಕ್ದಲ್ಲುದ್ದ ಮಾಡ್‌ಬಾರ್ದು. ನಾ ನಿಮ್ಮನುಗ್ ಬಂದಿದ್ದು ತರ ಅಲ್ವೇನೋ ಅನ್ನಿಸ್ತಿದೆ.

ಬೆಳ್ಳಿ : ಸ್ವಾಮಿ, ತೋಡಿದ್ ಬಾವಿಗೆ ಜಲ ಸಾಕ್ಷಿ! ಮಾಡಿದ್ ಕರ್ಮಕ್ಕೆ ಮನ ಸಾಕ್ಷಿ. ಅದ್ಯಾಕೋ ನಿಮ್ನ ನೋಡ್ತಿದ್ರೆ ಮನುಸ್ಗೆ ಹಿತ ಅನ್ನಿಸ್ತಿದೆ. ದಯ್‌ವಿಟ್ಟು ಏನೇನೋ ಮಾತಾಡ್‌ಬ್ಯಾಡ್ರಿ.

ವೀರು : ಅದ್ಸರಿ, ನೀವ್ಯಾರು? ಯಾಕಿಲ್ಲಿದ್ದೀರಿ? ಸಂಪತ್ತು, ಅಂದ್ವಾದರ್ಮನೆಯಲ್ಲಾ ಅದೆ. ಆದ್ರೂ ಏನೋ ಚಿಂತೆ ಕಾಡ್ತಾಯಿದ್ಯಲ್ಲ ನಿಮ್ಮುನ್ನ.

ಬೆಳ್ಳಿ : ಸ್ವಾಮೀ, ದಂಡ್ಕೈತೆ, ದೋಷುಕ್ಕೈತೆ, ಹಿರೇಮಗುನ್ ಮದುವ್ಗಿಲ್ಲ ಅಂದಂಗೆ ಎಲ್ಲ ಸಂಪತ್ತೂ ಅದೆ. ಆದ್ರೆ ನೆಮ್ದಿ ಅನ್ನೋದೇ ಇಲ್ಲ.

ವೀರು : ನಂಗರ್ಥ ಆಗ್ಲಿಲ್ಲ. ಚಾತುರ್ಯ ಬಲ್ಲೋನ್ಗೆ ಚಾಚೂ ಚಿಂತಿಲ್ಲ ಅಂದಂಗೆ ನೀವು ಬಾಳ ಬುದ್ಧಿವಂತೇರ್ ತರ ಕಾಣ್ತಿದ್ದೀರಿ. ನಿಮಗ್ಯಾವ್ ಚಿಂತೇ ಅಂತ?

ಬೆಳ್ಳಿ : ತುರ್ಬಿಡ್ದು ತುಪ್ಪ ಕುಡ್ಸಿದ್ರೂ ಅತ್ತೆ ಅತ್ತೇನೆ, ಸೊಸೆ ಸೊಸೇನೆ. ಎಲ್ಲಾ ಇದ್ದೂ ಒಂಟಿ ಬದ್ಕು ಸಾಕಾಗಿದೆ.

ವೀರು : ಮತ್ತದೇ. ಸಂಗರ್ಥ ಆಗ್ಲಿಲ್ಲ. ನಿಮ್ ಕಷ್ಟ ಏನು ಅಂತ ಕೇಳ್‌ಬೋದೇ?

ಬೆಳ್ಳಿ : ಘಟ್ಟ ಮೇರ್‍ವಲ್ಲ; ಅಟ್ಟ ಸ್ವರ್ಗ ಅಲ್ಲ ಅಂತಾರಲ್ಲ! ಈ ಸಂಪತ್ತು, ಸೌಕರ್ಯ ಎಲ್ಲ ಒಬ್ ರಾಕ್ಷಸುನ್ ಸೊತ್ತು. ಇದ್ರಿಂದ ಯಾವ್ ಸುಖ, ನೆಮ್ದಿನೂ ಇಲ್ಲ.

ವೀರು : ಸರಿ ನೀವ್ಯಾರು, ನಿಮ್ಕತೆ ಏನು, ನಿಮ್ಮಪ್ಪ, ನಿಮ್ಮೂರು?

ಬೆಳ್ಳಿ : ರತ್ನಾವತಿ ಪಟ್ನುದರ್ಸುನ್ ಮಕ್ಳು ನಾವು. ಇಲ್ಲಿರೊ ಮೂರರ್ಮನೆಗೊಳೆಲಿ ಒಂದೊಂದ್ರಲ್ಲಿ ಒಬ್ಬೊಬ್ರಂಗೆ ನಾವಕ್ಕ ತಂಗೇರು ಮೂವರಿದ್ದೀವಿ. ನಮ್ಮಪ್ಪನ್ನ ಕೊಂದು ನಮ್ಮುನ್ನ ತಂದಿಟ್ಕಂಡವ್ನೆ ಈ ರಾಕ್ಷಸ. ನಾವು ಒಬ್ಬರ್ನೊಬ್ರು

ನೋಪ್ಪಂಗಿಲ್ಲ. ಸಮುದ್ರದ ನಂಟಸ್ತನ; ಉಪ್ಪಿಗೆ ಬಡ್ತನ. ಒಳ್ಳೇದ್ಕೆ ಕೆಟ್ಟುದ್ಕೆ ಒಬ್ರಿಗೊಬ್ರಿಲ್ಲುದ್ ಒಂಟಿತನ ಕಾಡ್ತಿದೆ.

ವೀರು : ಅಕ್ಕಂತಗೇರ್‍ಯಾಕೆ ಒಬ್ಬುನ್ನೊಬ್ರು ನೋಡ್‌ಬಾರ್‍ದು?

ಬೆಳ್ಳಿ : ಆನೆ ಹಲ್ಲು ತೋರ್‍ಸಾದೊಂದು; ತಿನ್ನುಕ್ಕೆ ಇನ್ನೊಂದು. ನಾವು ಐಭೋಗ್ದೆಲ್ ಮೆರ್‍ದಂಗ್ ಕಾಣ್ತದ್ದೀವಿ. ಆದ್ರೆ ನರಲೋಕುದ್ ಸಂಪರ್ಕಿಲ್ದೆ. ಕಡೇ ಪಕ್ಷ ಹತ್ರುದೆಲಿರೊ ತಂಗೀರ್‍ನ್ನೂ ನೋಡುಕಾಗ್ದೆ ಬಾಳಾಟ ಆದ್ರೂ ಯಂಗೆ? ಹ್ಞಾ ಅಪ್ಪರಿ ನಮ್ ಕಥೇನೇ ಕೇಳ್ತಿದ್ದೀರಿ; ನಿಮ್ ಕಥೆ ಏನೂ ಅಂತ ಯೋಳ್ನೇ ಇಲ್ಲ.

ವೀರು : ನನ್ ಕಷ್ಟ ಹೇಳ್ಕಂಡ್ರೆ ಮುಗಿಯೋ ಅಂತೆದಲ್ಲ ಬುಡು.

ಬೆಳ್ಳಿ : ಕಾಯ್ಲೆ ಏನಂತ ತಿಳಿದ್ರೆ ತಾನೆ ಮದ್ ಕೊಡೋದು. ನಿಮ್ ಕಷ್ಟ ಏನಂತ ಹೇಳುದ್ರೆ ಪರಿಹಾರ ಹುಡುಕ್‌ಬೋದಲ್ವೇ?

ವೀರು : ನಿಂತಾವ ಏನ್ ಮುಚ್ಚುಮರೆ? ನಾನು ಬುದ್ಬೆಳ್ಳಿ, ನಷ್ಟಪಚ್ಚೆ, ಗೊನ್ಮುತ್ತು ಅಂತ ಮೂರ್ ಪದಾರ್ಥ ಹುಡಿಕ್ಕೊಂಡ್ ಬಂದಿಪ್ನಿ.

ಬೆಳ್ಳಿ : (ಕಿಲ-ಕಿಲ ನಗುತ್ತಾಳೆ)

ವೀರು : ಬಡ್ವೇವುರ್‍ನ ಕಂಡು ಬಿಲ್ಪತ್ರೇನೂ ಪುಸ್ಲಂತಂತೆ. ನನ್ ಕಷ್ಟ ಕೇಳಿ ನಿಂಗ್ ನಗ ಬತ್ತಲ್ವಾ?

ಬೆಳ್ಳಿ : ಪುನ್ಗುನ್ ಬೆಕ್ಕು ತನ್ ವಾಸ್ನೆ ಅರೀದೆ ಕಾಡೆಲ್ಲ ತಿರ್‍ಗಿ ಸಾಯ್ತಂತೆ. ಸ್ವಾಮಿ ನೀವುಡುಕ್ತಿರೊ ವಸ್ತುಗೊಳು ಎಲ್ಲವೆ ಅನ್ಕೊಂಡಿದ್ದೀರಿ? ನಾವ್ ಮೂರ್‌ಜನ ಅಕ್ಕ ತಂಗೀರೇ ಬುದ್ಬೆಳ್ಳಿ.... ನಷ್ಟಪಚ್ಚೆ..... ಗೊನ್ಮುತ್‌ಗೊಳು....

ವೀರು : (ತಬ್ಬಿಬ್ಬಾಗಿ) ಊಂ. ಹ್ಞು... ನನಗರ್ಥ ಆಗ್ಲಿಲ್ಲ.

ಬೆಳ್ಳಿ : ಸ್ವಾಮಿ ನಾವ್ ಮೂರ್ ಜನ ಅಕ್ತಂಗೆರ್‍ನ್ನು ಒಟ್ಟೊಗ್ಗಿಸಿ ಮಂತ್ರ ಪಠ್ಸಿದ್ರೆ ಮರ್‍ವಾಗ್ತೀವಿ. ಅದ್ರು ಬುಡ ಬೆಳ್ಳಿ. ನಷ್ಟೆ ಪಚ್ಚೆ ಹರಳುದುರ್‍ತವೆ. ಮೇಲಿನ್ ಗೊನೆಗಳಲ್ಲಿ ಮುತ್ ಸುರಿತವೆ. ಅವುನ್ನೆಲ್ಲ ವಶ ಮಾಡ್ಕಳುಕ್ಕೆ ಅಂತಾನೆ ರಾಕ್ಷಸ ನಮ್ಮುನ್ನ ಕೂಲ್ಪೆ ಇಟ್ಕೊಂಡವ್ನೆ.

ವೀರು : ಟೊಳ್ಮಾತು ಸುಳ್ಗಿಂತ ಕಡೆ ಅಂತೆ. ನನ್ನ ಮೂರ್ಖನ್ ಮಾಡುಕ್ಕಾಡ್ತಿರೋ ನಾಟ್ಕ ಇದು.

ಬೆಳ್ಳಿ : ಮನಮೆಚ್ಕೊಳ್ದೆ ಸುಲ್ಬ : ಜನ ಮೆಚ್ಕೊಳ್ದೆ ಕಷ್ಟ. ನಿಮಗ್ಯಂಗ್ ನಂಬ್ಕೆ ತರ್‍ಲಿ. ಮೂರ್ ಜನುನ್ನು ಒಂದ್ಕಡೆ ಸೇರ್‍ಸಿ ಒಂದ್ಮಂತ್ರ ಜಪ್ಸಿದ್ರೇನೇ ಮರ ಆಗೋದು. ನಮ್ ಬಾಯಿಂದ ಮಂತ್ರ ಕಲಿಕ್ಕೆ ರಾಕ್ಷಸ ಯತ್ನಿಸ್ತಾ ಇಲ್ಲಿ ತನ್ಕ ನಮ್ಮುನ್ಳಿಸಿದ್ದಾನೆ...!

ವೀರು : ಇಷ್ಟು ದಿನ ಜೊತೇಲಿ ಇದ್ದೀರಿ, ಇಲ್ಲಿಗಂಟ ಮಂತ್ರಾನ್ ಕಲಿಕಾಗ್ಲಿಲ್ವೆ ಆ ರಾಕ್ಷಸುನ್ಗೆ?

ಬೆಳ್ಳಿ : ಅಷ್ಟು ಸುಲುಭ್ವಾಗಿ ಆ ಮಂತ್ರ ಕಲ್ಯಕ್ಕಾಗಕ್ಕಿಲ್ಲ. ಸತ್ವಂತೆ ಹೊಟ್ಟೆಲುಟ್ಟೆ, ಅನ್ನಾಯ ಮೆಟ್ ನಿಲ್ಲೋ ಅಂತ ವೀರಾಧಿ ವೀರುನುಗ್ ಮಾತ್ರ ಆ ಮಂತ್ರ ಸಿದ್ದೂಽದು. ನಿಮ್ಮನ್ ನೋಡ್ತಿದ್ರೆ ಆ ಗುಣ್ಗಳ್ ಕಾಣ್ತಾ ಅವೆ.

ವೀರು : ಇಲ್ಲಾ.. ನಾ ನಂಬೋದಿಲ್ಲ ಇದ್ನೆಲ್ಲ...!

ಬೆಳ್ಳಿ : ನಂಬ್ಕೆ ಬರ್ತಿಲ್ಲ ಅಲ್ವೇ? ಇದೋ ಈ ಕೊಲಿಡ್ಕಳಿ. ಹತ್ರ ಬನ್ನಿ (ಕಿವಿಯಲ್ಲಿ ಹೇಳುವಳು) ಸರ್ಯಾಗ್ ನೆಪ್ಪಿಟ್ಕಳಿ. ನಾ ಬೆಳ್ಳಿ ಬುಡ ಆಯ್ತೀನಿ. ಆಮ್ಯಾಲೆ ಮಂತ್ರ ಏಳಿ. ಕೋಲ್ನಾಗೆ ಮೂರೇಟಾಕಿ, ಮೊದುಲ್ನಂಗೆ ಹುಡ್ಗಿ ಆಯ್ತೀನಿ (ಮಂತ್ರದ ಕೋಲು ಕೊಟ್ಟು ಪದ್ಮಾಸನದಲ್ಲಿ ಕುಳಿತು ಮನಸ್ಸಿನಲ್ಲೆ ಜಪಿಸಲು ಬೆಳ್ಳಿ ಬುಡವಾಗುತ್ತದೆ.)

ವೀರು : (ಅಚ್ಚರಿಯಿಂದ) ಹ್ಞಾ...! ಇದ್ಕಿದ್ದಂಗೆ ಬೆಳ್ಳಿ ಬುಡ್ಡಾಯ್ತಲ್ಲ. ಇರು ಮಂತ್ರ ಹೇಳ್ತೀನಿ. ರಂಬೆರಾಜಕ ಮುಂಗಾರಿ! ಮೆಲ್ಲನೆ ಕುಂತಳು ಸಿಂಗಾರಿ! ಗಲ್ಲದ ಕೆಳ್ಗ ಬೆಲ್ದಚ್ಚಿಟ್ಟು ಲಕ-ಲಾವಣ್ಯದ ಲಾವಂಚ! ಬೆಳ್ಳೀಬುಡದ ಈ ಗುಚ್ಚ!! (ಮತ್ತೆ ಹೆಣ್ಣಾಗುವಳು)

ಬೆಳ್ಳಿ : ಈಗ್ಲಾದ್ರು ನಂಬ್ತೀರಾ ನನ್ ಮಾತ್ನ.

ವೀರು : ಉಳ್ದಿರ್ದ್ ಭಾಗ ನಿನ್ ತಂಗೀರಂತ ನಂಬ್ಕೆ ಬಂತು. ಈಗ್ಲೆ ಅವ್ರುನ್ನೋಡ್ಬೇಕು. ನಿಮ್ನ ನನ್ ಪಟ್ಟುಣ್ಕ್ ಕರ್ಕಂಡೋಗ್‌ಬೇಕು.

ಬೆಳ್ಳಿ : ಅಷ್ಟ್ ಸುಲ್ಬಲ್ಲ ನಮ್ಮುನ್ ಕರ್ಕಂಡೋಗೋದು. ರಾಕ್ಷಸ ಮಹಾಮಾಯಾವಿ. ಅವುನ್ ಸಾಯ್ದೆ ನಮ್ಮುನ್ ಕರ್ಕಂಡೋಗುಕಾಗ್ವಲ್ದು.

ವೀರು : ಅಯ್ಯೋ ಚಿನ್ನದರ್ಗಿಣಿ ಆದ್ರೂ ಗೋಡೆಗೇ ಪರಗ್ ಬೇಕಂದಂಗಾಯ್ತಲ್ಲ. ಇರ್ಲಿ ತಂತ್ರಗಾರನ್ನ ಕುತಂತ್ರಗಾರ ಗೆಲ್ವಂಗೆ ರಾಕ್ಷಸನ್ನ ಸಂಹಾರ ಮಾಡುಕ್ಕೆ ನನ್ನಿಂದ್ ಸಾಧ್ಯಾನೇ ನೋಡ್ತೀನಿ. ಅವನ್ಕತೆ ಹೇಳ್ತಿಯಾ?

ಬೆಳ್ಳಿ : ಏಳೇಳದ್ನಾಕ್ ಸಮುದ್ರದಾಚೆ ಹದ್ನಾಕ್ ಬೆಟ್ಟ ದಾಟುದ್ರೆ ಅಲ್ಲಿ ವಿಶಾಲವಾದ್ ದಿಬ್ಬದ್ ಮ್ಯಾಲೆ ದೀವಿಗೆಡ್ಡೆ ವನ. ಅಲ್ಲಿರೊ ಮುಳ್ ಪಂಜರ್ದಲಿ ಒಂದ್ಗಿಳಿ. ಆ ಗಿಳಿಲೈತೆ ರಾಕ್ಷಸುನ್ ಪ್ರಾಣ. ಪಂಜ್ರಾನ ಒಂದ ಸರ್ಪ ಕಾಯ್ತಿರ್ತುದೆ. ತಿನ್ನುಕ್ ಮೊಟ್ಟೆ ಹಾಕ್ಬುಟ್ರೆ ಸುಮ್ಕಿರ್ತುದೆ. ಅವಾಗ ಉಪಾಯ್ದಾಗೆ ಗಿಳಿನಿಡ್ಕಂಡು ರೆಕ್ಕೆ-ಪುಕ್ಕ-ಕುತ್ಗೆ ಮುರುದ್ರೆ ರಾಕ್ಷಸ ಸಾಯ್ತಾನೆ.

ವೀರು : ಆ ದಾರಿ ಸುಳ್ವೇನಾದ್ರು ತಿಳ್ದೈತೆ ನಿಂಗೆ?

ಬೆಳ್ಳಿ : ಹ್ಞಾ.... ಕಾವೇರಿ ನದಿಯಾಚೆ ಒಂದು ಸೇದೆ ಬಾವಿ. ಅದ್ರು ಮ್ಯಾಲೆ ಮುಚ್ಚಿರೊ ಕಲ್‌ಚಪ್ಡಿ ಮ್ಯಾಲ್ ಕಾಲಿಟ್ರೆ ತೆರ್ಕೊತುದೆ. ಹೋದ ದಾರಿಲೆ ಹಿಂದಿರುಗ್‌ಬೇಕು.

ವೀರು : ಕೆಲಸಾಯ್ತಂತ ತಿಳಿ. ರಾಕ್ಷಸುನ್ನ ಸಂಹಾರ ಮಾಡೊ ಜವಾಬ್ದಾರಿ ನಂದು. ಇನ್ನಾರೆ ವಾರ್ಗಳಲ್ಲಿ ನಿಮ್ಮುನ್ನ ಕರ್ಕಂಡೊಯ್ತೀನಿ. ಗುರ್ತಾಗಿ ಮಂತ್ರದಂಡ ಕೊಡು. ನಿನ್ ತಂಗಿರ್ಗು ವಿಷ್ಯ ತಿಳಿಸಿ ಹೋಯ್ತೀನಿ.

ಮೇಳ : ಗಂಡಭೇರುಂಡಗಳ

ಮನದಲ್ಲಿ ಸ್ಮರಿಸಲು
ಹಾರಿಬಂದಾವು ಕ್ಷಣದಲ್ಲೇ
ಏನಾಗಬೇಕು ನಿನಗೆಂದೂ!!
ಏಳು ಸಮುದ್ರದ ಎಡತಿಟ್ಟಿನಲ್ಲಿರುವ
ದೀವಿಗೆಡ್ಡೆ ವನವ ಕಣ್ತುಂಬ ಕಂಡಾಗ
ಗಂಡಭೇರುಂಡ ಮೆಲ್ಲನಿಳಿದಾವು
ಬಾಲನ ಅಲ್ಲಿಳಿಸಿ ನಡೆದಾವು!!

ವೀರು : ಈ ದೀವಿಗಡ್ಡೆ ವನ್ದಲಿ ಮುಳ್ ಪಂಜ್ರ ಎಲ್ಲದೆ? ಅದು...ಯೋ. ಬುಸ್ಗುಟ್ಕೊ ಸರ್ಪ ಕಾವ್ಲು ಕಾಯ್ತಾ ಅದೆ. ಅದುನ್ ನೋಡುದ್ರೆ ಬಾಳ ದಿನಗಳಿಂದ ಏನು ತಿಂದಿಲ್ಲ ಅನ್ನಿಸ್ತದೆ. ತಕ ಈ ಮೊಟ್ಟೆಗೊಳ್ ತಿನ್ನು. ತಡ್ದೆಮ್ಮೆನ ತಕ್ಲುಗ್ ಬುಟ್ಟಂಗೆ ಅದ್ರು ಪಾಡ್ಗದ್ ತಿನ್ಲಿ. ಉಪಾಯ್ವಾಗಿ ಮುಳ್‌ಪಂಜ್ರುದ್ ಗಿಣಿ ಇಡ್ಕತೀನಿ. (ಗಿಳಿಯನ್ನು ಕೈಲಿಡಿದುಕೊಳ್ಳುವನು. ರಂಗದ ಇನ್ನೊಂದು ಬದಿಯಲ್ಲಿ ರಾಕ್ಷಸ ನಿಂತಿರುತ್ತಾನೆ. ಹಾಡಿನ ಮೂಲಕ ಅಭಿನಯ ತೋರಿಸಬೇಕು.)

ಮೇಳ : ಅಯ್ಯಾ ಮುಳ್ಳುಪಂಜರದ
ಗಿಳಿಯ ಕೈಯೊಳಗಿಡಿದ
ಅಲ್ಲಿ ರಾಕ್ಷಸನ ಜೀವ
ಜಾಲಾಡಿ ನಡುಗೂತಿತ್ತು!
ಚಳಿ ಜ್ವರ ಬಂದಿತ್ತು
ಕೈಕಾಲುಗಳದುರಿತ್ತು
ಗಿಳಿಯ ಅಂಗಾಂಗಗಳ
ಒಂದೊಂದೆ ಮುರಿಯಲು
ರಕ್ಕಸ ಕಿರುಚುತ ಪ್ರಾಣವ ಬಿಟ್ಟ!!

(ಹಾಡು ಮುಗುಯುವಷ್ಟರಲ್ಲಿ ರಾಕ್ಷಸ ಕಿರುಚುತ್ತಾ ಪ್ರಾಣ ಬಿಡುತ್ತಾನೆ.)

ವೀರು : ಅಂತೂ ರಾಕ್ಷಸುನ್ ಕೊಂದಾಯ್ತು. ನಾಸೀಗ್ಲೆ ಹೋಗಿ ಮೂರ್ ಜನ್ರುನ್ನು ಬ್ಯಾಗ ಕರ್ಕಂಡೋಗ್‌ಬುಡ್ತೀನಿ. (ತೆರೆ.)

## ದೃಶ್ಯ - ಹದಿನಾಲ್ಕು

ಸಿದ್ದ : (ಬಾಪಿ ಬಳಿ ಶಬ್ದ ಬರುವುದು) ಲೋ ಬನ್ರೋ ಸದ್ ಬತ್ತಾ ಅದೆ. ವೀರಣ್ಣ ಬತ್ತಿರ್‌ಬೇಕು.

ಗೊಪ್ಪ : ಲೇ... ಲೇ... ಲೇ... ಅಷ್ಟೆಲ್ಲ ತಕಂಡೆ ಬತ್ತಿರ್‌ಬೇಕು ಕಾಣ್ರುಲಾ. ಕೇಳಿಸ್ಕಳಿ ಮಂತ್ರ ಯೋಳ್ತಾ ಅವ್ನೆ.

ವೀರು : (ಒಳಗಿನಿಂದಲೇ) ಬೆಲ್ಲದ ಬೆಡಗು-ಇಲ್ಲದ ಗುಡುಗು! ನೀರಂಬೋಲಾ-ನೀ ಬಾರಣ್ಣ! ನಿಂತೂರಾಟ-ನಿಲ್ಲದ ನೋಟ! ನಿಡಗಲ್‌ದಾರ-ನೀ ಸರದಾರ!

ಮೇಲಕೆ ಬರುವೆ-ಹಿಡಿದೆಳೆಯಿರಿ ಅಣ್ಣ! ಗಟ್ಯಾಗಿಡ್ದು-ಘಂಟೆ ಹೊಡ್ದು! ಪಟ್ಟಂತೆಳುದ್ರೆ-ಪಣಕ್ನೆ ಬರುವೆ!

ಬಿದ್ದ : ಹ್ಹಾ... ಮಂತ್ರ ಮುಗೀತು ಯಳೀರೊ ಜೋರಾಗಿ (ಎಳೆಯುವರು, ಹೆಣ್ಣೊಬ್ಬಳು ಬಂದದ್ದು ಕಂಡು ಗಾಬರಿಯಿಂದ)

ಗೊದ್ದ : (ಹಿಡಿದ ಹಗ್ಗ ಬಿಡುವಂತೆ ನಟಿಸಿ...) ಲೋವ್ ಬುಡ್ ಬ್ಯಾಡಿ ಹಗ್ಗಾವ... ಹಿಡ್ಕಳ್ರೋ... ಯಾರನ ಆಗ್ಲಿ ಮ್ಯಾಕ್ ಸೇದ್ಕಳಿ ನೋಡನ ಆಮಾಲೆ. (ಬೆಳ್ಳಿ ಹೊರಬಂದು ನಿಲ್ಲುವಳು. ಹೀಗೆ ಪಚ್ಚಿ, ಮುತ್ತು ಮೂರೂ ಜನ ಬರುವರು.)

ವೀರು : ನಾನ್ ಬತ್ತಾಯಿದ್ದೀನೀಗ, ಈ ಕಡೆ ಕೇಳಿಸ್ಕಳಿ. ಬೆಲ್ಲದ ಬೆಡಗು-ಇಲ್ಲದ ಗುಡುಗು! ನೀರಂಬೋಲಾ-ನೀ ಬಾರಣ್ಣ! ನಿಂತೂರಾಟ-ನಿಲ್ಲದ ನೋಟ! ನಿಡಗಲ್‌ದಾರ-ನೀ ಸರದಾರ! ಮೇಲಕೆ ಬರುವೆ-ಹಿಡಿದೆಳೆಯಿರಿ ಅಣ್ಣ! ಗಟ್ಯಾಗಿಡ್ದು-ಘಂಟೆ ಹೊಡ್ದು! ಪಟ್ಟಂತೆಳುದ್ರೆ-ಪಣಕ್ನೆ ಬರುವೆ! (ಸುಂದರಿಯರನ್ನು ನೋಡುವ ಭರದಲ್ಲಿ ಮಂತ್ರ ಯಾರಿಗೂ ಕೇಳಿಸುವುದಿಲ್ಲ.)

ಬಿದ್ದ : ಲೋ ಇವ್ರುನ್ ನೋಡ್ಕಂಡು ಹಗ್ಗ ಬುಟ್ ಬುಟ್ವಲ್ರೋ? ಏನ್ ಮಾಡಾದು ಈಗ.

ಗೊದ್ದ : ಇನ್ನೇನ್ ಮಾಡುಕ್ಕಾದಾತು, ಬನ್ರೋ, ಅವ್ನ ಪಾತಾಳ್ದಲೆ ಬಿಟ್ಟು ಈ ಮೂವರ್ನ ಕರ್ಕಂಡು ಸಣ್ಣೂರ ಪಟ್ಣುದ್ ದಾರಿ ಹಿಡಿವ.

ಬೆಳ್ಳಿ : ಅಯ್ಯಾ ಇದ್ಯಾವ್ ನ್ಯಾಯನ್ರಪ್ಪ? ನಿಮ್ಮುನ್ನೆಲ್ಲ ಕರ್ಕ ಬಂದೋನ್ನೆ ಬುಟ್ಹೋಗೋದ್ ನ್ಯಾಯ್ವೆ ನಿಮ್ಗೆ.

ಸಿದ್ದ : ಅಯ್ಯೋ ಇದ್ರಾಗ್ ನ್ಯಾಯ ಅನ್ಯಾಯ ಏನ್‌ಬತ್ತು? ನಾವೇನ್ ಬೇಕ್ ಬೇಕು ಅಂತ ಬುಟ್ವೆ? ಹಗ್ಗ ಜಾರ್ಕತು ನಾವೇನ್ ಮಾಡುಕ್ಕಾದಾತು. ನಡೀರಮ್ಮೀ... ನಡೀರಿ.

ಮುತ್ತು : (ಮೆಲುದನಿಯಲ್ಲಿ) ಅಕ್ಕ ಅಕ್ಕ ಕೆಲ್ಸ ಕೆಟ್ಹೋಯ್ತು. ನಮ್ ರಾಜ್‌ಕುಮಾರ ಯಂಗಾನ ಮ್ಯಾಲುಕ್ ಬತ್ತಾನೆ. ದಾರಿ ಉದ್ಕು ಮುತ್ ಚೆಲ್ಕಂಡೋಗನ.

ಗೊದ್ದ : ಏಯ್ ಅದೇನ್ ಪಿಸುಗ್ದುತ್ತಿರೋದು?

ಮುತ್ತು : ಏನಿಲ್ಲಾ... ನಾವು ಇವುರ್ ಜೊತೆನಾಗೆ ಹೋಗ್ ಬುಡಾನ ಬನ್ರಿ ಅಂದೆ ಅಷ್ಟೆಯಾ.

ಸಿದ್ದ : ಅದಪ್ಪ ಮಾತು ಅಂದ್ರೆ. ನಡೀರಿ ನಡೀರಿ ಬ್ಯಾಗ ಹೋಗನ. ನಡಿರಪ್ಪ ಕತ್ಲಾಗ್‌ಬುಡ್ತುದೆ. ಊರ್‌ಬುಟ್ಟು ಏಟ್ ದಿನ ಆಗ್ಬುಟ್ವದೆ?

ಗೊದ್ದ : ಅಲ್ಲಾ ಅಪ್ಪಯ್ಯ ಯೋಳಿದ್ದೂ...!

ಸಿದ್ದ : ಏನ್ಲಾ ಅದು ರಾಗ, ಅಪ್ಪಯ್ಯ ಯೋಳಿದ್ದೂ ಅಂತಾವ.

ಗೊದ್ದ : ಬುಡ್ಬೆಳ್ಳಿ, ನಡ್ಪಚ್ಚೆ, ಗೊನ್ಮುತ್ತು?

ಸಿದ್ದ : ಇವ್ರುನ್ ನೋಡುದ್ರೆ ಅಪ್ಪಯ್ಯ ಏನು ಬ್ಯಾಡ, ಇವುರ್ನ ಮದ್ವೆ ಮಾಡ್ತೀನಿ ಅಂತಾನೆ ಕಾಣ ನಡೀರ್ಲ. (ಎಲ್ಲರೂ ಹೊರಡುವರು.)

ಮೇಳ : ಸಿದ್ದ ಬಿದ್ದ ಗೊದ್ದ ಮೂರುಜನ

ಬೆಳ್ಳಿ-ಪಚ್ಚೆ-ಮುತ್ತುಗಳೊಡನ
ನಡೆವರು ನಡದರು ನೋಡಾಗ
ಅಕ್ಕ-ತಂಗಿಯರು ದಾರೀಗುಂಟ
ಗುರುತಿಗೆ ಮುತ್ತುಗಳುದುರಿಸುತಾ
ಸೇರಿದರಲ್ಲೋ ಸಣ್ಣೂರ!!

## ದೃಶ್ಯ - ಹದಿನೈದು

(ಮತ್ತೆ ಮೊದಲ ದೃಶ್ಯ. ಸೂರಜ್ಜನ ಜೊತೆ ವೀರು ಕಾಣಿಸಿಕೊಳ್ಳುವನು.)

ವೀರು : ಇಂಗೆ ತಾತ. ಆ ಹುಡ್ಗೀರ್ನುಡಿಕೊಂಡ್ ಬಂದಿವ್ನಿ. ಎಲ್ಲವ್ರೋ ಯಂಗವ್ರೋ ಪಾಪ. ಮದ್ವೆ ಮಾಡ್ಕಂಡೆ ಬುಟ್ರೋ ಏನೋ?

ಸೂರಜ್ಜ : ಓ ಓ ಓ .. ಇದಾ ಕತೆ. ಆ ಹೆಣ್ಮಕ್ಕಿಲ್ಲವ್ರೆ ಅಂತ ಆಮ್ಯಾಕೇಳ್ತೀನಿ. ಪಾತಾಳ್‌ಲೋಕ್‌ದಿಂದ ನೀ ಯಂಗ್ ಬಂದೆ?

ವೀರು : ಅಯ್ಯೊ ಅದೊಂದ್ ದೊಡ್ ಕತೆ ತಾತ. ಮಂಡೋದ್ರಿ ನೆನುಸ್ಕಂಡೆ, ಅದೆಲ್ಲಿಂದ ಬತ್ತೊ ಗೊತ್ತಿಲ್ಲ. ಹಿಂಡಿಂಡೆ ಬಂದ್ಬುಟ್ಬೊ... ಎಲ್ಲ ಒಂದ್ಕಡೆ ಕೂಡ್ಕಂಡು ಬಾವಿಯಿಂದ ಮ್ಯಾಕ್ ಬರುಕ್ ಸಹಾಯ ಮಾಡ್ದೊ.

ಸೂರಜ್ಜ : ಮಂತೆ ನಿಮ್ಮವ್ವನ್ ಕತೆ?

ವೀರು : ಹ್ಞಾ ಅದೇ ಪಾತಾಳ್ದಿಂದ ಬಂದು ನಮ್ಮ ವ್ಹತ್ರ ಇದ್ಲೆಲ್ಲ ಯೋಳ್ದ. ಆಮ್ಯಾಲ್ ಗೊತ್ತಾತು, ಈ ಊರ್ ದೊರೇನೆ ನಮ್ಮಪ್ಪ. ಬಂದಿದ್ವೋರು ನನ್ ತಮ್ಮೀರು ಅಂತಾವ.

ಸೂರಜ್ಜ : ನಿಮ್ಮಪ್ಪನ್ನ ಎಲ್ ಬುಟ್ಟಿದ್ದೀಯಪ್ಪ, ನಿಂಜೊತೆ ಕರ್ಕ ಬರ್ಲಿಲ್ವಾ?

ವೀರು : ಕರ್ಕಬಂದಿವ್ನಿ.... ಊರಾಚೆ ಪಾಳ್ ಮಂಟುಪ್ದಾಗೆ ಕುಂದ್ರಿಸ್ ಬಂದಿವ್ನಿ.

ಸೂರಜ್ಜ : ನೀ ಹುಡುಕ್ತಿರೋ ಆ ಹೆಣ್ ಮಕ್ಳು ಶಕ್ತಿಗಿಂತ ಯುಕ್ತಿ ಮೇಲು, ಕತ್ತಿಗ್ಗಿಂತ ಕುಪ್ರೆ ಮೇಲಂದಂಗೆ ವ್ರತದ ನೆಪಮಾಡಿ ಮದ್ವೇನ ಆರ್‌ತಿಂಗ್ಳು ಮುಂತ್ಕಾಕಿದ್ರು. ಸತ್ಯಕ್ ಸಾವಿಲ್ಲ; ಸುಳ್ಳಿಗ್ ಸುಖಯಿಲ್ಲಾಪ್ಪ. ಸರ್ಯಾದ್ ಸಮ್ಯುಕ್ ಬಂದಿದ್ದಿ. ಇದೆಲ್ಲ ಮದ್ವೆ ಸಂಭ್ರಮಾನೆ. ನೀನು ಕಿನ್ನುಡಿ ಬಾರಿಸ್ಕಂಡೋಗು. ಆ ಹೆಣ್ಮಕ್ಳು ನಿನ್ನೆ ಕಾಯ್ತಾ ಅವೆ. ನಿಮ್ಮವ್ವ ನಮ್ಮನ್ಯಾಗಿರ್ತಾಳೆ.

ವೀರು : ಬೋ ಉಪ್ಕಾರ ಆಯ್ತು ತಾತ. ನಾ ಬತ್ತೀನಿ. ಅವ್ವ ಉಸಾರು ತಾತ.

ಸೂರಜ್ಜ : ನೀ ಏನು ವೇಚ್ನೆ ಮಾಡ್‌ಬ್ಯಾಡ್ ಹೋಗ್ಮಗ. (ಸೂರಜ್ಜ ಹೋಗುವನು. ವೀರು ಕಿನ್ನುಡಿ ನುಡಿಸುತ್ತಾ ಹಾಡುತ್ತಾ ನಡೆಯುತ್ತಿರುತ್ತಾನೆ.)

ವೀರು : ತಿಪ್ಪ ಮ್ಯಾಗಳ ಸ್ವಾರೆ ಬುರುಡೆ
ಒಬ್ಬೆ ಮ್ಯಾಗಳ ಬಿದಿರು ಕೊನೆಯೆ

ಚನ್ನಾಗಿ ನುಡಿಸೆ ನನ್ನ ಕಿನ್ನಡಿಯೇ
ಹಾಹಾ ನುಡಿಯೇ ಕೋಲು ಕಿನ್ನಡಿಯೇ!!

ಬೆಳ್ಳಿ : ಸ್ವಾಮಿ ರಾಜ್‌ಕುಮಾರ್ರೆ... ನಿಂತ್ಕಳಿ... ನಿಂತ್ಕಳಿ... (ಹಿಂದಿನಿಂದ ಕೂಗುವಳು. ವೀರು ನಿಂತು ನೋಡವನು.)

ವೀರು : ಬೆಳ್ಳಿ... ಬಾ... ಬಾ... ಎಲ್ಲಿ ಪಚ್ಚೆ ಮುತ್ತು ಯಲ್ಲ?

ಪಚ್ಚೆ : ಇಲ್ಲೇ ಇದ್ದಿವಿ ಸ್ವಾಮಿ. ಕಿನ್ನುಡಿ ನುಡಿಸ್ಕಂಡು ಹಾಡ್ಕಂಡೊಯ್ತಿದ್ ನಿಮ್ಮುನ್ನೋಡಿ ಆನಂದ ಆಗ್ಬುಡ್ತು. ಕುಣ್ದು ಕುಪ್ಳಿಸ್ಕಂಡು ಓಡೋಡ್ ಬಂದಿವಿ. ತಾಳಿದವ್ರು ಬಾಳ್ಯಾರು! ತೂಗಿದ ನೀಗ್ಯಾರು ಅನ್ವಂಗೆ ನಮ್ ಉಪಾಯ ಫಲಿಸ್ತು.

ವೀರು : ನೋಡಿದ್ ಜನ ತೆಪ್ತಿಳ್ಕತಾರೆ. ನಡೀರಿ ಹೋಗನ

ಮುತ್ತು : ಜನ ಯಂಗಿದ್ರು ತೆಪ್ ತಿಳ್ಕತಾರೆ. ತಿಳ್ಕಳ್ಳಿ ನಡೀರಿ ಮನೆವೊಳ್ಗೋಗನ.

ಪಚ್ಚೆ : ನಾಳೆ ಯಂಗಿದ್ರು ಮದ್ವೆ ಸಂಭ್ರಮ್‌ದಾಗಿರ್ತಾರೆ.. ಆ ಸಭೆವೊಳ್ಗೆ ನಮ್ ಕತೆ ಯೋಳುದ್ರಾಯ್ತು ನಡ್ರಿ.

ಮುತ್ತು : ಹ್ಞಾ... ಅದೂ ಸರಿ, ಈಗೋಗನ ನಡೀರಿ. (ವೀರುವನ್ನ ಕರೆದುಕೊಂಡು ಹೋಗುವದನ್ನು ಜನ ನೋಡುತ್ತಿದ್ದಾರೆ. ಅವರು ಹೋದ ನಂತರ...)

ವ್ಯಕ್ತಿ ೧ : ಏನ್ಕಾಲನಪ್ಪ? ರಾಜುನ್ಮಕ್ಳು ಮದ್ವೆ ಸಂಭ್ರಮ್ದಾಗಿದ್ರೆ ಈಬಿತ್ರೀರು ಯಾವೋನೊ ಕಿನ್ನುಡಿ ನುಡ್ಸೋನ ಕರ್ಕಂಡೋಯ್ತಾ ಅವ್ರೆ...

ವ್ಯಕ್ತಿ ೨ : ಕೇಡ್ಗಾಲುಕ್ ನಾಯ್‌ಮೊಟ್ಟೆ ಇಕ್ದಂಗಾಯ್ತು ಇವ್ರ್ ಕೇಮೆ.

ವ್ಯಕ್ತಿ ೩ : ಒಳ್ಗೆ ಮೇದ ಗಳ್ಗೆ ಸಿದ್ದ ಅಂದಂಗೆ ಈ ಹುಡ್ಗೀರು ಅದೇನೊ ವ್ರತ ಮಾಡ್ತಾರಂತಪ್ಪ. ಮಾಡೋದನಾಚಾರ ಮನೆ ಮುಂದೆ ಬೃಂದಾವನ ಅಂದಂಗಾಯ್ತು ಇವುರ್ ಮಾಡ್ತಿರೋದು.

ವ್ಯಕ್ತಿ ೧ : ಮಾಡ ಕೆಲ್ಸ ಬುಟ್ಟು ಊರ್ ದನ ಮೇಸ್ದ ಅಂತ ಬ್ಯಾರೆಯೋರ್ ಸುದ್ದಿ ನಮ್ಗ್ಯಾಕೆ ಬತ್ತಿನಪ್ಪೋವ್ ಹೊಲ್ತಾವ್ ಕೆಲ್ಸದೆ.

ವ್ಯಕ್ತಿ ೨ : ನಾನು ಬತ್ತೀನಪ್ಪ, ಎಲ್ ಮತಾಡ್ಕೊಂಡ್ ನಿಂತಿದ್ದೆ ಅಂತಾವ ನನ್ನೆಡ್ತಿ ಬೈತಾಳೆ. (ಭಟರಿಬ್ಬರು ಬರುವರು)

ವ್ಯಕ್ತಿ ೩ : ಏನ್ರಣ್ಣ, ಏನೋ ಹುಡ್ಕಾಡ್ವಂಗದೆ?

ಭಟ ೧ : ಏನಿಲ್ಲ್ರಪ್ಪ, ನೀವೆಲ್ಲ ಮಾತಾಡ್ತಿದ್ರಲ್ಲ ಕೇಳಿಸ್ಕಂಡು ಇಲ್ಲೆ ಮರೆನಾಗ್ ನಿಂತಿದ್ವೊ.

ಭಟ ೨ : ದೊರೆ ತಾವನೀವೆಳುದ್ನೆಲ್ಲ ಯೋಳ್ತೀವಿ... ನಾಳೆ ಪಂಚಾಯ್ತಿ ಸೇರುಸ್ತಾರೆ. ಏನಾತದೋ ನೋಡನ.

ವ್ಯಕ್ತಿ ೩ : ನನ್ನುನ್ ತೋರಿಸ್ ಬ್ಯಾಡ್ರಪ್ಪೋ, ಮೊದ್ಲೆ ಗ್ರಾಚಾರ ಕೆಟ್ ಕುಂತದೆ ನಂದು.

ಭಟ ೧ : ಯಾರ್ಯಾರ್ ಗ್ರಾಚಾರ್ ಕೆಟ್ಟೈತೊ ಸಭೆನಾಗ್ ನೋಡ್ವ ಈಗ್ಬಾ ಹೋಗ್ಮ. (ಎಲ್ಲರೂ ಹೋಗುವರು, ಹಿಂಬದಿ ಹಾಡು)

ಮೇಳ : ವ್ರತವ ಮಾಡಿದರೇನು ಹಿತವಿಲ್ಲದವರು

ಪತಿತೆಯರು ತಾವಾದರೂ ಓ ಶಿವನೇ...
ಮತಿಗೆಟ್ಟು ಮಸುಕಾದರೂ ಓ ಹರನೇ....
ಕಿಸ್ನುಡಿಯವನ ಕೂಡಾಡಿ ತಾವ್ ಕೆಟ್ಟರೂ...!!

## ದೃಶ್ಯ - ಹದಿನಾರು

ಮೇಳ : ಸಣ್ಣೂರ ಪಟ್ಟಣದ
ಮಣ್ಣಯ್ಯ ಸಭೆಯೊಳಗೆ
ಮಂದಿ ಮಾಗದರೆಲ್ಲ
ಬಂದು ಸೇರಿದರಾಗಾ!! ತಂದನ್ನ..

ಬೆಳ್ಳಿ ಪಚ್ಚೆ ಮುತ್ತು ಬಂದರು
ಕಿಸ್ನುಡಿಗಾರನ ಹಿಡಿದು ತಂದರು
ದಡ್ಡ ಮಕ್ಕಳ ಕರೆಸಿಕೊಂಡರು
ರಾಣಿಯರಾಗ ಓಡೋಡಿ ಬಂದರು....
ತಂದನ್ನೋ ತಾನೋ ತಾನಂದನ್ನೊ....

ಮಣ್ಣಯ್ಯ : ಅಯ್ಯಾ ನೋಡುಕ್ಕೆ ಉತ್ಮ ಕಂಡುಂಕಾಣ್ತ, ನೀನಿಂತೆ ಕೆಲ್ಸ ಮಾಡ್‌ಬೋದೆ?

ವೀರು : ಸ್ವಾಮಿ ತಾವೇನೇಳ್ತಿದ್ದಿರೋ ತಿಳಿವೋಲ್ಲು.

ಮಣ್ಣಯ್ಯ : ನೀನು ಈ ಎಣ್ಮಕ್ಳು ಮನೆಗ್ಯಾಕ್ ಹೋದೆ? ಅಲ್ಲೇನ್ ಕೆಲ್ಸ ಇತ್ತು ನಿಂಗೆ? ಸರ್ಯಾದುತ್ರ ಕೊಡಪ್ಪ ನೋಡನ.

ವೀರು : ಸಭೆಗ್ ಕೈ ಮುಗ್ದು ಒಂದ್ ಮಾತ್ ಕೇಳ್ತೀನಿ. ನಾನೀಗ ಅಪರಾಧಿ ಸ್ಥಾನ್ದಲ್ಲಿದ್ದೀನಿ. ಮಹಾರಾಜ್ರೆ ನಿಮ್ಮ ಮೂರ್ ಮಕ್ಳುನ ಏನ್ ತರುಕ್ಕಂತ ಕಳ್ಸಿದ್ರಿ?

ಮಂತ್ರಿ : ಏಯ್ ಪ್ರಶ್ನೆ ಮಾಡ್‌ಬೇಕಾಗಿರೋರು ನಾವು. ನೀನೀಗ ಅಪ್ರಾಧಿ. ನಮ್ ರಾಜ್‌ಕುಮಾರ್ರು ತಂದಿರೊ ಈ ಮೂರ್ ಜನ ಹುಡ್ಗೀರು.. (ಎನ್ನುತ್ತಿದ್ದಂತೆ...)

ಪಚ್ಚೆ : ನಮ್ಮುನ್ನ ನಿಮ್ ರಾಜ್ಕುಮಾರ್ರು ತಂದ್‌ಬಗೆ ಗೊತ್ತೆ?

ಮಂತ್ರಿ : ಹೆಣ್ಮಕ್ಳು ಇಷ್ಟೊಂದ್ ಮಾತಾಡ್‌ಬ್ಯಾಡ್ದು?

ಮುತ್ತು : ಯಾಕ್ ಮಾತಾಡ್ಬಾರ್ದು? ನಮ್ಗೆ ನಮ್ತನ ಇಲ್ವೆ? ನಮ್ಗೆ ಆಸೆಗಳಿರಲ್ವೆ? ನಮ್ಗೆ ಮನುಸ್‌ಗಳಿರಲ್ವ? ಹೆಣ್ಮಕ್ಳು ಮಾತಾಡ್‌ಬಾರ್ದಂತ!

ಮಣ್ಣಯ್ಯ : ಮಂತ್ರಿ, ಮಾತು ಆಡ್‌ಕೆಡ್ತು; ಮುತ್ತೊಡುದ್ ಕೆಡ್ತು ಅಂತಾರೆ. ವಿಚಾರ ಮಾಡೋಣ. ಅಯ್ಯಾ ದಾರಿಹೋಕ ನಿನ್ ಪ್ರಶ್ನೆ ಏನು ಅಂತ ಇನ್ನೊಂದ್ಸಾರಿ ಕೇಳು.

ವೀರು : ಕ್ಷಮ್ಸಿ ಮಾಸ್ವಾಮಿ, ನಾಮಿಲ್ದರ್ರುನ್ಗೆ ನೇಮಿಲ್ಲುದ್ ಪ್ರಧಾನಿ ಅನ್ಕೊಂಡಿದ್ದೆ. ನಿಮ್ ವಿಚಾರ್ಣೆಗೆ ತಲೆ ಬಾಗಿದ್ದೀನೆ. ತಮ್ ಮಕ್ಳಿಗೆ ಏನಂತ ಅಪ್ಣೆ ಕೊಡ್ಸಿದ್ರಿ?

ಮಣ್ಣಯ್ಯ : ಬುದ್ದೆಳ್ಳಿ ನಡ್ಪಚ್ಚೆ, ಗೊನ್ಮುತ್ತಂತ ಮೂರ್ಪದಾರ್ಥ ತರ್ಬೇಕಂತ ನನ್ ಮಕ್ಳುಗೇಳ್ ಕಳ್ಸಿದ್ದೆ.

ಪಚ್ಚೆ : ತಂದರೇ ನಿಮ್ಮಕ್ಳು?
ಮಣ್ಣಯ್ಯ : ಹುಲಿ ಹೊಟ್ಟೆಲ್ ನರಿ ಹುಟ್ದಂಗೆ ಈ ಮಕ್ಳು. ಅವುರ್ಗಲ್ಲಿ ಆ ಯೋಗ್ಯತೆಯಿದೆ?
ಬೆಳ್ಳಿ : ಸ್ವಾಮಿ ಈ ಸಭೆಗ್ ಕೈ ಮುಗಿತೀನಿ. ದೊರೆ ಕೇಳಿದಂತ ಪದಾರ್ಥಗಳ್ನ ಸಾಮರ್ಥ್ಯ ಇದ್ರೆ ಈಗ್ಗು ಅವುರ್ ಮಕ್ಳು ತೋರಿಸ್ಲಿ.
ಮಣ್ಣಯ್ಯ : ಏನ್ರಪ್ಪ ಮಕ್ಕೆ, ಆ ಹುಡ್ಗಿ ಏಳಿದ್ದು ಕೇಳಿಸ್ತು ತಾನೆ. ಮಾಡ್ ತೋರುಸ್ರಯ್ಯ.
ಬಿದ್ದ : ಇಲ್ದೆ ಇರೋದ್ನ ಎಲ್ಲಿಂದ ತರುವ ನಾವು? ಅದೆಲ್ಲ ತಿಳ್ಯಕ್ಕಿಲ್ಲ ಬುಡು ನಮ್ಗೆ. (ಸಿದ್ದ ಗೊದ್ದನ ಕಡೆ ತಿರುಗಿ) ಲೇಯ್ ನಿಮ್ ಕೈಲಾದಾತೇನ್ರುಲಾ?
ಇಬ್ಬರು : ಉಹ್ಞು... (ತಲೆ ಆಡಿಸುವರು)
ಮಣ್ಣಯ್ಯ : ತಾಯಿ ಇದರ ರಹಸ್ಯ ಏನು ಅಂತ ಹೇಳ್ತಿಯಾವ್ವ?
ಮುತ್ತು : ನಾನೇಳ್ತೀನಿ ಕೇಳ್ರಿ. ಮೋಸ, ವಂಚನೆ, ಕಪಟ, ಕ್ರೋಧ, ದ್ವೇಷ, ಅಸೂಯೆ ಇಲ್ಲದ ಒಳ್ಳೆ ಮನ್ಸಿನ್ ಮಹಾ ತಾಯಿ ಮಗ್ನಿಂದ್ ಮಾತ್ರ ಈ ಕಾರ್ಯ ಆಗೋದು.
ಮಣ್ಣಯ್ಯ : ನಂಗರ್ಥ ಆಗ್ಲಿಲ್ಲ!
ಪಚ್ಚೆ : ಇದ್ರಾಗೆ ಅರ್ಥ ಆಗಕ್ಕೇನೈತೆ? ಒಂದ್ ಮಂತ್ರ ಅದೆ. ಮನ್ಸೋ ಇಚ್ಚೆ ಪತೀನೆ ಸರ್ವಸ್ವ ಅಂತ ನಂಬ್ಕಂಡು ಜೀವ್ನ ನಡ್ಸಿರೋಳ್ ಮಗ ಮಾತ್ರ ಆ ಮಂತ್ರ ಕಲ್ಯುಕ್ ಸಾಧ್ಯುವಾಗೋದು.
ಮಣ್ಣಯ್ಯ : ಅಂತೆ ಪುಣ್ಯಾತ್ಮ ಯಾರಿದ್ದಾನವ್ವ?
ಬೆಳ್ಳಿ : ಇಲ್ಲೆ ನಿಮ್ಮೆದ್ರಲ್ಲೇ ಇದ್ದಾರೆ ಮಾಸ್ವಾಮಿ.
ಮಣ್ಣಯ್ಯ : ಯಾರು?
ಮುತ್ತು : ಈ ಕಿನ್ನುಡ್ಗಾರ ನಾವೇಳುದ್ ಚಮತ್ಕಾರ ಮಾಡ್ ತೋರ್‌ಬಲ್ಲ. ನಿಮ್ಗೆ ಒಪ್ಗೇನಾ?
ಮಣ್ಣಯ್ಯ : ಏನ್ರಪ್ಪ ಸಬ್ಗೆಲ್ಲ ಒಪ್ಗೇನಾ?
ಸಭೆ : ಹ್ಞಾ ಹ್ಞಾ... ಆಗ್ಲಿ.... ಆಗ್ಲಿ....
ಪಚ್ಚೆ : (ಕಿನ್ನುಡಿ ರಾಜಕುಮಾರನಿಗೆ ನಮಸ್ಕರಿಸಿ) ಸ್ವಾಮಿ ನಿಮ್ ಕಾರ್ಯ ಮುಂದ್ವರ್ಸಿ
ವೀರು : (ರಂಗದ ಮಧ್ಯ ಬಣ್ಣದ ಬಟ್ಟೆ ಹಾಸಿ, ಬೆಳ್ಳಿಯನ್ನ ಪದ್ಮಾಸನದಲ್ಲಿ, ಅವಳ ಹಿಂದೆ ಎರಡು ಭುಜಗಳ ಮೇಲೆ ಕೈಯೂರಿ ಪಚ್ಚೆ, ಮತ್ತವಳ ಹಿಂದೆ ಮುತ್ತನ್ನು ನಿಲ್ಲಿಸಿ) ರಂಬೆರಾಜಕ ಮುಂಗಾರಿ! ಮೆಲ್ಲನೆ ಕುಂತಳು ಸಿಂಗಾರಿ! ಗಲ್ಲದ ಕೆಳ್ಗ ಬೆಲ್ದಚ್ಚಿಟ್ಟು ಲಕ-ಲಾವಣ್ಯದ ಲಾವಂಚ! ಬೆಳ್ಳೀಬುಡದ ಈ ಗುಚ್ಚ! ಹಸುರಿನ ಒಡಲು ನೋಡತ್ತ! ನೆತ್ತಿಯಲುದುರುವ ಕೆಂಪನೆ ಮುತ್ತ! (ಮಂತ್ರ ಹೇಳಿ ಕೋಲಿನಿಂದ ಮೂರು ಸಾರಿ ನವುರಾಗಿ ಹೊಡೆಯುವನು)
ಸಭೆ : ಹಾ... ಹಾ... ಹಾ... ಏನಾಶ್ಚರ್ಯ, ಎಂಥ ಸೋಜ್ಗ ಇದು, ಬಲೇ ಚಮತ್ಕಾರ ತೋರಿಸ್ದ ಬುಡಪ್ಪ. ಲೇಯ್ ಇವುನ್ ಮಾಟಗಾರ್ನೆ ಇರ್ಬೇಕು ಕಾಣ್ರುಲಾ! ಅಲ್ಲಾ ಹುಡ್ಗೀರು ಇಂತೆ ಮರ ಆಗ್‌ಬೇಕಾದ್ರೆ ಇವ್ನು ಬಾಳ ವಸ್ತಾದೀನೆ ಇರ್ಬೇಕು ಬುಡಪ್ಪ. ಹ್ಞೂ... ನಂಗು ಆಂಗೆ ಅನ್ನುಸ್ತು. ಅಲ್ಲಾ

ನಮ್ ದೊರೆ ಮಕ್ಳು ಕರ್ಕಬಂದದ್ನ ನಾವೆ ನೋಡಿವಿ. ಅವುರ್ ಬರ್ವಾಗ್ ಮಾತ್ರ ಹುಡ್ಗೀರೆ ಅಪ್ಪ. ಅದ್ರಾಗನ್ಮಾನಾನೆ ಇಲ್ಲ. (ಹೀಗೆ ಒಬ್ಬೊಬ್ಬರೂ ಒಂದೊಂದು ಮಾತನಾಡುತ್ತಿರುತ್ತಾರೆ. ಗಜಿಬಿಜಿ.)

ವೀರು : (ಮತ್ತೆ...) ರಂಬೆರಾಜಕ ಮುಂಗಾರಿ! ಮೆಲ್ಲನೆ ಕುಂತಳು ಸಿಂಗಾರಿ! ಗಲ್ಲದ ಕೆಳ್ಗ ಬೆಲ್ಲಚ್ಚಿಟ್ಟು ಲಕ-ಲಾವಣ್ಯದ ಲಾವಂಚ! ಬೆಳ್ಳೀಬುಡದ ಈ ಗುಚ್ಛ! ನೋಡಿದೆ ಮೇಲುದುರುವ ಮುತ್ತ! ಇನ್ನ್ಯಾಕಿಳಿಯೇ ನಡುಪಚ್ಚೆ (ಮಂತ್ರ ಹೇಳಿ ಕೋಲನ್ನು ಮೂರು ಬಾರಿ ಸೋಕಿಸಿದ ಮೇಲೆ ಮೊದಲಿನಂತೆ ಹುಡುಗಿಯರಾಗುವರು)

ಸಭೆ : ಹಾ... ಹಾ... ಅಗಳಪ್ಪ ಮತ್ತೆ ಹೆಣ್ಣಾಗ್‌ಬುಟ್ರು. ಏನೋ ಅಪ್ಪ ಇದೊಂದೂ ಅರ್ಥಾಗ್ನಿಲ್ಲ. (ಮತ್ತೆ ಗಜಿ ಬಿಜಿ..)

ಮಣ್ಣಯ್ಯ : ಸದ್ದು... ಇಷ್ಟ್ ಚಮತ್ಕಾರ ತೋರ್ದಂತೆ ನೀನಾರಪ್ಪ?
ಇದ್ರು ರಹಸ್ಯ ವೊಸಿ ಯೋಳ್ತೀಯಾಪ್ಪ?

ವೀರು : ಇದ್ರಾಗೆ ರಹಸ್ಯ ಏನೂ ಇಲ್ಲ ದೊರ್ಗ್ಳೆ! ನಿಮ್ಮೆದ್ರಾಗೆ ಎಲ್ಲಾನು ಮಾಡ್ ತೋರುದ್ನಲ್ಲ.

ಮಣ್ಣಯ್ಯ : ಈ ಮೂರ್ಖ ಮಕ್ಳು ಹುಡ್ಗೀರ್ನ ತಂದಿರೋದೇ ನಂಗನ್ಮಾನ ಐತೆ. ಯಂಗ್ ತಂದ್ರು ಅಂತ ತಿಳಿಸ್ಬೋದೆ?

ವೀರು : ಅವುರ್ನೆ ಕ್ಯೋಳಿ ಯಂಗ್ ತಂದ್ರಪ್ಪ ಅಂತಾವ. (ಮೂರೂ ಮಂದಿ ತಲೆತಗ್ಗಿಸಿ ಕೊಂಡು ನಿಂತಿರುತ್ತಾರೆ)

ಮಣ್ಣಯ್ಯ : ಅವ್ರುನ್ನ ಅಮ್ಯಾಲಿಚಾರಿಸ್ಕೋತೀನಿ.. ನಿನ್ನ ಹಡ್ದಂತ ಮಾತಾಯಿ ಯಾರು ಅಂತ ಯೋಳ್ತೀಯಾಪ್ಪ?

ವೀರು : ನನ್ನವ್ವ ಯಾರು ಅಂತ ತಿಳಿಬೇಕಲ್ಲ! (ರಂಗದ ಒಂದು ಬದಿಗೆ ತಿರುಗಿ) ತಾತಾ.... ತಾತಾ... ಇತ್ಕಡೆ ಕರ್ಕಂಬಾ ತಾತ. (ಸೂರಜ್ಜ ರಾಮವ್ವನನ್ನು ಕರೆದು ತರುವನು.) ನೋಡಿ ಮಾರಾಜ್ರ, ಚನ್ನಾಗ್ ನೋಡ್ರಿ, ಸಭ್ಯಾಗಿರೋ ಮಂದಿಯಲ್ಲ ನೋಡ್ರಿ. ಈ ತಾಯಿ ಹಡ್ದಂತ ಮಗ ನಾನು.

ಸಭೆ : ಹ್ಹಾ... ರಾಣಿ.... ರಾಮವ್ವ!

ಮಣ್ಣಯ್ಯ : ಹ್ಹಾ... ನನ್ರಾಣಿ ರಾಮವ್ವ... (ಎನ್ನುತ್ತಿದ್ದಂತೆ ಕತ್ತಾಲಾಗುವುದು.)

- ಸಮಾಪ್ತಿ -

(ವಿ.ಸೂ. ಇದೊಂದು ಜಾನಪದ ಕಥೆ ಆಧಾರಿತ ಮಕ್ಕಳ ನಾಟಕ. ಕಥೆ ಹೇಳಿರುವವರು : ಗುಡ್ಡಯ್ಯ (೭೦) ಅಣಕಡಬೂರು, ಕನಕಪುರ ತಾಲ್ಲೂಕು. ಈ ನಾಟಕವನ್ನು ಅಭಿನಯಿಸುವವರು ಲೇಖಕರ ಗೌರವ ಸಂಭಾವನೆ ರೂ. ೧೦೦ (ಒಂದು ನೂರು ರೂಪಾಯಿಗಳು ಮಾತ್ರ)ಗಳನ್ನು ಕೆಳಗಿನ ವಿಳಾಸಕ್ಕೆ ಕಳುಹಿಸಿ ಲಿಖಿತ ಅನುಮತಿ ಪಡೆಯತಕ್ಕದ್ದು).

**- ಲೇಖಕ**

# ಲೇಖಕರಿಗೆ ವಿನಂತಿ

ಅಕಾಡೆಮಿಯ ತ್ರೈಮಾಸಿಕ ಪತ್ರಿಕೆ 'ಅನಿಕೇತನ'ದ ಸ್ವರೂಪದಲ್ಲಿ ರಚನಾತ್ಮಕ ಬದಲಾವಣೆಗಳನ್ನು ತರಬೇಕೆಂಬ ಹಂಬಲವನ್ನು ತಾವು ಈ ಸಂಚಿಕೆಯ ಮೂಲಕ ಗಮನಿಸಬಹುದಾಗಿದೆ. ಕನ್ನಡದ ಶ್ರೇಷ್ಠ ಲೇಖಕರನ್ನೆಲ್ಲ ಒಳಗೊಳ್ಳುವಂತೆಯೂ ಹಾಗೂ ಹೊಸ ಸಂವಾದ, ಸಂವೇದನೆಗಳ ಶಕ್ತ ವೇದಿಕೆಯಾಗಿ ಪತ್ರಿಕೆ ಗಂಭೀರ ಸಾಹಿತ್ಯ ಚಿಂತನೆಗಳ ಅಭಿವ್ಯಕ್ತಿಯಾಗಿ ರೂಪುಗೊಳ್ಳಬೇಕೆಂಬುದೂ ನಮ್ಮ ಆಶಯವಾಗಿದೆ. ಕನ್ನಡದ ಹಿರಿಯ ಹಾಗೂ ಭರವಸೆಯ ಹೊಸ ಪೀಳಿಗೆಯ ಲೇಖಕರೆಲ್ಲರ ಭಾಗವಹಿಸುವಿಕೆಯೇ ಪತ್ರಿಕೆಗೆ ಜೀವದ್ರವ್ಯವಾದ್ದರಿಂದ ತಮ್ಮ ಅತ್ಯಮೂಲ್ಯ ಸಹಕಾರ ಅತ್ಯಗತ್ಯ.

ಅನ್ಯಭಾಷೆಯ ಶ್ರೇಷ್ಠ ಬರಹಗಳ ಅನುವಾದದೊಂದಿಗೆ, ಸ್ವತಂತ್ರ ಬರಹಗಳನ್ನು ಆಹ್ವಾನಿಸುತ್ತಿದ್ದೇವೆ. 'ಅನಿಕೇತನ'ಕ್ಕಾಗಿ ಕವಿತೆ / ಕಥೆ / ಕಿರುನಾಟಕ / ವಿಮರ್ಶಾತ್ಮಕ / ವೈಚಾರಿಕ ಲೇಖನ / ಪ್ರಬಂಧ / ಸಾಂಸ್ಕೃತಿಕ ಚಿಂತನೆ ಹಾಗೂ ಅನುವಾದಗಳನ್ನು ಕಳುಹಿಸಿ ಕೊಡುವುದರ ಮೂಲಕ ನಮ್ಮ ಪ್ರಯತ್ನಕ್ಕೆ ಸಹಕರಿಸಬೇಕೆಂದು ಕೋರುತ್ತಿದ್ದೇವೆ. ದಯವಿಟ್ಟು ಬರೆಯಿರಿ. ಪತ್ರಿಕೆಗೆ ಹೊಸ ರೂಪ ಕೊಡಬೇಕೆಂಬ ಪ್ರಯತ್ನಗಳ ನಮ್ಮೊಂದಿಗೆ ಸದಾ ನೀವಿರುತ್ತೀರೆಂಬುದೇ ನಮ್ಮ ಧೈರ್ಯ ಹಾಗೂ ವಿಶ್ವಾಸ.

ಅನುವಾದಗಳಾದರೆ ಮೂಲ ಲೇಖಕರ ಹೆಸರು, ವಿಳಾಸ, ಮೂಲ ಬರಹದ ಭಾಷೆಯ ವಿವರ ಅಗತ್ಯ. ಅನುಮತಿ ಪತ್ರದ ಜೆರಾಕ್ಸ್ ಪ್ರತಿ ಜೊತೆಯಲ್ಲಿರುವುದು ಅಪೇಕ್ಷಣೀಯ. ಬರವಣಿಗೆ ಹಾಳೆಯ ಒಂದೇ ಮಗ್ಗುಲಲ್ಲಿದ್ದು, ಸ್ಫುಟವಾಗಿ, ಓದಲು ಅನುಕೂಲವಾಗುವಂತಿರಲಿ.

*ಬರಹಗಳನ್ನು ಕಳುಹಿಸಬೇಕಾದ ವಿಳಾಸ :*
**ಸಂಪಾದಕರು, 'ಅನಿಕೇತನ', ಕರ್ನಾಟಕ ಸಾಹಿತ್ಯ ಅಕಾಡೆಮಿ**
**ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು - ೫೬೦ ೦೦೨**

–ಸಂಪಾದಕರು



## ಅಜ್ಜಿ ಮತ್ತು ಸೂಜಿ

ಒಂದಾನೊಂದು ಕಾಲದಲ್ಲಿ ಒಬ್ಬ ಅಜ್ಜಿ ಇದ್ದಳು. ಅವಳು ಒಂದು ದಿನ ನದಿ ದಾಟುತ್ತಿರುವಾಗ ತನ್ನ ಸೂಜಿಯನ್ನು ನೀರಿನಲ್ಲಿ ಬೀಳಿಸಿಬಿಟ್ಟಳು. ಆ ಸೂಜಿ ಅವಳಿಗೆ ಮತ್ತೆ ಸಿಕ್ಕುತ್ತಾ ?

ಮಗು ' ಹ್ಞೂ ' ಎಂದು ಹೂಂಗುಟ್ಟುತ್ತದೆ.

ನೀನು ಹೂಂ ಅಂದುಬಿಟ್ಟರೆ ಅವಳಿಗೆ ಆ ಸೂಜಿ ಸಿಕ್ಕಿಬಿಡುತ್ತಾ ? 'ಇಲ್ಲ.'

ನೀನು ಇಲ್ಲ ಅಂದರೆ ಅವಳಿಗೆ ಆ ಸೂಜಿ ಸಿಕ್ಕಿ ಬಿಡುತ್ತಾ ?

'ಅಯ್ಯೋ ಅದಕ್ಕೆ ನಾನೇನು ಹೇಳ್ಲಿ' ?

ನೀನು 'ಅಯ್ಯೋ ಅದಕ್ಕೆ ನಾನೇನು ಹೇಳ್ಲಿ' ಅಂದರೆ ಅವಳಿಗೆ ಆ ಸೂಜಿ ಸಿಕ್ಕಿಬಿಡುತ್ತಾ ? ಮೌನ.

ನೀನು ಏನೂ ಹೇಳ್ದೆ ಸುಮ್ನೆ ಇದ್ದುಬಿಟ್ರೆ ಅವಳಿಗೆ ಆ ಸೂಜಿ ಸಿಕ್ಕಿಬಿಡುತ್ತಾ ?

- ಎಂದೂ ಮುಗಿಯದ ಜಾನಪದ ಕಥೆ

Registration No. 45646/88 Price : 15/-